ವಚನ ಚಳುವಳಿಯ ಸಾಮಾಜಿಕ ಆಯಾಮಗಳ ಬಗ್ಗೆ ವಿಶೇಷ ಆಸಕ್ತಿವಹಿಸಿ ಕಳೆದ ಎರಡೂವರೆ ದಶಕಗಳಿಂದ ಅಧ್ಯಯನ ನಡೆಸಿ ಅನೇಕ ವೈಚಾರಿಕ ಬರಹಗಳನ್ನು ಪ್ರಕಟಿಸಿರುವ ಡಾ. ಪಿ. ವಿ. ನಾರಾಯಣ ಗ್ರಂಥಸಂಪಾದನೆ, ಅನುವಾದ ಹಾಗೂ ಕಾದಂಬರಿ ರಚನೆಗಳಿಗೂ ಹೆಸರುವಾಸಿಯಾಗಿದ್ದಾರೆ. ವಿವಿಧ ವಿಷಯಗಳಿಗೆ ಸಂಬಂಧಿಸಿದ ಇಪ್ಪತ್ತೈದಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿರುವ ಡಾ. ನಾರಾಯಣ ಅವರ ಪ್ರಸ್ತುತ ಕಾದಂಬರಿ 'ಧರ್ಮಕಾರಣ' ವು ಹನ್ನೆರಡನೆಯ ಶತಮಾನದ ಸಾಮಾಜಿಕ ಪರಿಸ್ಥಿತಿಯ ಬಗ್ಗೆ, ಬಸವಣ್ಣನ ವ್ಯಕ್ತಿತ್ವದ ಬಗ್ಗೆ ಅನೇಕ ಒಳನೋಟಗಳನ್ನು ಹೊಂದಿ ಅರ್ಥವಂತಿಕೆಯ ವಿವಿಧ ಆಯಾಮಗಳನ್ನು ಪಡೆದಿದೆ. ಶ್ರೀಯುತರು ಬೆಂಗಳೂರಿನ ವಿಜಯ ಕಾಲೇಜಿನ ಕನ್ನಡ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ.

# ಧರ್ಮಕಾರಣ

ಪಿ. ವಿ. ನಾರಾಯಣ

"ತಂಗಾಳಿ"
30, ಆರ್. ಬಿ. ಐ. ಕಾಲೋನಿ
ಜಯನಗರ 3ನೇ ಬ್ಲಾಕ್ (ಪೂರ್ವ)
ಬೆಂಗಳೂರು–560 011

DHARMAKĀRANA – A novel by Dr. P. V. Narayana, ' Tangāli', No. 30, R. B. I. Colony, Jayanagar III Block (East) Bangalore–560 011.

Pages : viii + 168

First Edition : 1995, **Price : Rupees Seventy**



**ಬೆಲೆ : ಎಪ್ಪತ್ತು ರೂಪಾಯಿಗಳು**

ಮುಖಚಿತ್ರ : ಚಂದ್ರನಾಥ್

ಮುದ್ರಕರು :
ನೇತ್ರಾ ಪ್ರಿಂಟರ್ಸ್
ಸಮೀರಪುರಂ, ಚಾಮರಾಜಪೇಟೆ
ಬೆಂಗಳೂರು–560 018

# ೧

"ಒಡೆಯರೆ...."

ಬಾಗಿಲ ಕಡೆಗೆ ಬಸವಣ್ಣನವರ ದೃಷ್ಟಿ ಹಾಯುತ್ತದೆ. ಉತ್ತಣ್ಣ ಎಂದಿನಂತೆ ನಿಂತಿದ್ದಾನೆ. ನಸು ಬಾಗಿದ ಸೊಂಟ, ನಮಸ್ಕರಿಸುವಂತೆ ಎದೆಯ ಮೇಲೆ ಇಟ್ಟುಕೊಂಡ ಬಲಗೈ, ಸ್ವಲ್ಪ ಬಾಗಿದ ತಲೆ. ಕೆಂಪು ಬಣ್ಣದ ಅಂಗಿ ತೊಟ್ಟು, ತಲೆಗೆ ಪಗುಡಿ ಧರಿಸಿದ ಉತ್ತಣ್ಣನ ನಿಲವು ಬಸವಣ್ಣನವರ ಮುಖದ ಮೇಲೆ ಮುಗುಳ್ನಗೆಯ ಗೆರೆಯೊಂದನ್ನು ರೂಪಿಸುತ್ತದೆ.

ಉತ್ತಣ್ಣನಿಗೆ ಎಷ್ಟೋ ಬಾರಿ ಹೇಳಿಯಾಗಿತ್ತು, ಅಷ್ಟೇಕೆ ಸೊಂಟ ಬಾಗಿಸಿ ಮಾತನಾಡುತ್ತೀಯೆ ಎಂದು. ಆದರೆ ಅವನು ಕೇಳಲೊಲ್ಲ. "ಒಡೆಯರ ಮುಂದು ಮಾತನಾಡಬೇಕಾದ್ದೇ ಹಂಗಲ್ಲವಾ, ದಣಿ?" ಅವನ ಮರು ಪ್ರಶ್ನೆ.

"ನಮ್ಮ ಮನೆಯಲ್ಲಿ ನೀನು ಕೆಲಸ ಮಾಡುತ್ತಿರಬಹುದು, ಉತ್ತಣ್ಣ, ಆದರೆ ಅದಕ್ಕಾಗಿ ನೀನು ಬಾಗಬೇಕೆ? ನೇರವಾಗಿ ನಿಂತೇ ನಿನ್ನ ಕೆಲಸ ಮಾಡಬಹುದಲ್ಲ."

"ಹಂಗಾಗದು ಒಡೆಯ. ತಾವು ದೊಡ್ಡೋರು, ತಮ್ಮದು ದೊಡ್ಡ ಮನಸ್ಸು. ಹಂಗೆ ಹೇಳಾದು ಸಹಜ. ಆದರೆ ನಮ್ಮ ಜಾಗ, ನಮ್ಮ ರೀತಿ ನಮಗೆ ತಿಳಿದಿರಬೇಕಲ್ಲ."

ಅವನ ರೀತಿಯೇ ಹಾಗೆ. ವಿನಯ ಅವನ ಮೈನಲ್ಲಿ ಸೇರಿಹೋಗಿದೆ. ಮನೆಯವರ ಜೊತೆ, ಅತಿಥಿಗಳಾಗಿ ಬಂದ ಇತರರ ಜೊತೆ ಅವನು ನಡೆದುಕೊಳ್ಳುವ ರೀತಿ ಎಲ್ಲರೂ ಮೆಚ್ಚುವಂಥದ್ದು. ಬಂದವರೆಲ್ಲ ಪಡಿಹಾರಿ ಉತ್ತಣ್ಣನನ್ನು ಹೊಗಳುವವರೇ, ಅವನ ವಿನಯದ ಬಗೆ ಮೆಚ್ಚುಗೆ ಸೂಚಿಸುವವರೇ. ಹಾಗೆಂದು ಅವನೇನೂ ಎಂದೂ ಸೆಟೆಯದ ವ್ಯಕ್ತಿಯೇನಲ್ಲ, ತಾನು ಹೋದೆಡೆಗೆಲ್ಲ ಬರುವ ಅವನು ಸರಿಯಾಗಿ ನಡೆಯದವರ ಬಗ್ಗೆ ನಡೆದುಕೊಳ್ಳುವ ರೀತಿ ನೋಡಿದರೆ ಅವನ ಸ್ವಭಾವ ಉಗ್ರವೇನೋ ಎನ್ನಿಸುವಂಥದು. ಆದರೆ ತನ್ನ ಮನಸ್ಸಿಗೆ ಬಂದವರೊಡನೆ ಅವನು ವ್ಯವಹರಿಸುವ ರೀತಿ ಅಚ್ಚುಮೆಚ್ಚಿನದು. ಬಸವಣ್ಣನಿದ್ದೆಡೆ ಉತ್ತಣ್ಣ ಇರಲೇಬೇಕು. ಅವನ ಬಂಟ ಎನ್ನುತ್ತಿದ್ದರು ಜನ. ಆದರೆ ಬಸವಣ್ಣನಿಗೆ ಉತ್ತಣ್ಣನೆಂದರೆ ಅಚ್ಚುಮೆಚ್ಚು. ಅವನು ಪಕ್ಕದಲ್ಲಿದ್ದರೆ ಎಷ್ಟೋ ಧೈರ್ಯ. ಅದೂ ಬೇರೆ ಸ್ಥಳಗಳಿಗೆ ತಾನು ಹೋದಾಗ ಉತ್ತಣ್ಣನಂತೆ ಕಾಲಕಾಲಕ್ಕೆ ಆಗಬೇಕಾದದ್ದನ್ನೆಲ್ಲ

ಚಾಚೂ ತಪ್ಪದೆ ನಡೆಯುವಂತೆ ನೋಡಿಕೊಳ್ಳುವುದರಲ್ಲಿ ಅವನದು ತುಂಬ ಸೂಕ್ಷ್ಮ ಬುದ್ಧಿ. ಕಣ್ಣ ನೋಟದಲ್ಲಿಯೇ ಇಂಗಿತವರಿಯುವ ಚುರುಕುತನ, ಕುಶಾಗ್ರತೆ. ಕತ್ತಲಿನಲ್ಲಿ ಬೆಳಕು ಅರಳಲು ತೊಡಗುವ ಮೊದಲ ಕ್ಷಣವೇ ಕೋಳಿಗೆ ಕಾಣಿಸಿಬಿಡುತ್ತದಲ್ಲ ಹಾಗೆ. ತಾನು ಕಂಡದ್ದನ್ನು ಲೋಕಕ್ಕೆ ಕೂಗಿ ಹೇಳುತ್ತದಲ್ಲ, ಅಂತೆಯೇ ಉತ್ತಣ್ಣ ತನ್ನ ಒಡೆಯರ ಮನದಿಂಗಿತಕ್ಕೆ ಅನುಗುಣವಾಗಿ ನಡೆದುಕೊಳ್ಳುವ, ಒದಗಿಸುವ ಆಪ್ತ. ಅದಕ್ಕೇ ಬಸವಣ್ಣನವರಿಗೆ ಉತ್ತಣ್ಣನೆಂದರೆ ಎಲ್ಲಿಲ್ಲದ ಆದರ. ಸೇವಕನಿಗಿಂತ ಎದೆಗೆ ಹತ್ತಿರವಾದ ಒಡನಾಡಿ. ಹಾಗಾಗಿ ಅವನನ್ನು ಕಂಡಾಗಲೆಲ್ಲ ಬಸವಣ್ಣನವರ ಎದೆಯಲ್ಲಿ ಮೂಡುವುದು ಆಪ್ತಭಾವ; ಚಳಿಗಾಲದಲ್ಲಿ ಎಳೆಬಿಸಿಲು ತಾಗಿದ ಹಾಗೆ, ಬೇಸಗೆಯಲ್ಲಿ ತಂಗಾಳಿ ತೀಡಿದ ಹಾಗೆ.

ಈಗ ಆದದ್ದೂ ಅದೇ. ಅವನ ನಿಲವನ್ನು ಕಂಡಾಗ ಬಸವಣ್ಣನವರ ಮೊಗದಲ್ಲಿ ಮೂಡಿದ ಮಂದಹಾಸ ಆಪ್ತತೆಯ ಹೊರರೂಪ. ಅವನು "ಒಡೆಯರೇ" ಎಂದಾಗ ತಿರುಗಿಸಿದ ಬಸವಣ್ಣನವರ ಕಣ್ಣಲ್ಲಿದ್ದದ್ದು "ಏನು?" ಎಂಬ ಪ್ರಶ್ನೆ.

"ಮೇನೆ ಸಿದ್ದವಾಗೈತೆ"

"ಹ್ಞೂ" ಎಂದು ಬಸವಣ್ಣ ಮೇಲೆದ್ದರು. ಏಳುತ್ತಲೇ ಕೇಳಿದರು, "ಅಪ್ಪಣ್ಣನಿಗೆ ಹೇಳಿಕಳಿಸಿದ್ದೆಯಲ್ಲ?"

ಅಪ್ಪಣ್ಣ ಬಸಣ್ಣನವರ ಮತ್ತೊಬ್ಬ ಆಪ್ತ. ಉತ್ತಣ್ಣ ಬಾಹ್ಯದ ಎಲ್ಲ ಆವಶ್ಯಕತೆಗಳಿಗೆ ಉತ್ತರವಾದರೆ ಅಪ್ಪಣ್ಣ ತಮ್ಮ ನೈತಿಕ ಬಲ. ಹಡಪದಪ್ಪಣ್ಣ ಎಂದರೆ ಬಸವಣ್ಣನವರಿಗೆ ಬಲಗೈ ಇದ್ದಂತೆ ಎಂದು ಜನ ಅಂದುಕೊಳ್ಳುತ್ತಾರೆ. ಬಸವಣ್ಣನವರ ಪ್ರಾಣ ಹಡದಪ್ಪಣ್ಣನ ಎದೆಯೊಳಗೆ ಭದ್ರವಾಗಿದೆ, ಅವರನ್ನು ಆತ ಜೋಪಾನ ಮಾಡುತ್ತಾನೆ ಎಂಬುದು ಬಹು ಜನಕ್ಕೆ ಗೊತ್ತು. ತಮ್ಮನ್ನು ಎಡೆಬಿಡದೆ ಹಿಂಬಾಲಿಸುವವನು ಮಾತ್ರವೇ ಅಲ್ಲ, ಅಪ್ಪಣ್ಣನಿದ್ದರೆ ತಮಗೆ ಏನೂ ಕುತ್ತು ಬಾರದು ಎಂಬ ನಂಬಿಕೆ ಬಸವಣ್ಣನವರದು ಕೂಡ. ಅವನೆಂದರೆ ನಂಬಿಕೆ ವಿಶ್ವಾಸಗಳ ರೂಪ. ಅವನ ಚಿತ್ರ ಬಸವಣ್ಣನವರ ಮನಸ್ಸಿನಲ್ಲಿ ಮೂಡಿದುದರ ಸಂಕೇತವಾಗಿ ಅರಳಿದ್ದ ಮಂದಹಾಸ ಮತ್ತಷ್ಟು ಅರಳುತ್ತದೆ, ಅದರಲ್ಲಿ ಪರಿಮಳವು ಸೇರಿತು ಎಂಬಂತೆ ತೋರುತ್ತದೆ.

"ತಮ್ಮ ದಾರಿ ಕಾಯ್ತಾ ಅವರೆ" ಎಂದು ಉತ್ತಣ್ಣ ಒಡೆಯರ ಪ್ರಶ್ನೆಗೆ ಉತ್ತರಿಸುತ್ತಾನೆ.

"ಎಲ್ಲ ಏರ್ಪಾಟು ಆಗಿದೆಯ?"

"ಹೌದು, ಒಡೆಯರೇ ಸಂಜೆ ಬರುವಾಗ ಹೊತ್ತು ಕಂತಿರಬಹುದು ಎಂಬ ಕಾರಣದಿಂದ ದೀವಟಿಗೆಯವರನ್ನೂ ಬರಹೇಳಿದ್ದೇನೆ."

"ಸರಿ, ಹಾಗಾದರೆ ಹೊರಡೋಣ"

ಮೇಲೆದ್ದ ಬಸವಣ್ಣನವರು ಅರಮನೆಗೆ ನಡೆಯುತ್ತಾರೆ ಗಂಗಮ್ಮ

ನೀಲರಿಗೆ ಹೇಳಿಬರಲೆಂದು. ಸತಿಪತಿಯರೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂದು ತಾವೇ ಹೇಳಿದ ಹಾಗೆ ಅವರಿಬ್ಬರೂ ತಮಗೆ ಎಂಥ ಆತ್ಮೀಯತೆಯನ್ನು ಒದಗಿಸಿದ್ದಾರೆ. ಸತಿಪತಿಯರ ಮನಸ್ಸು ಒಂದಾದರೆ ಶಿವನಿಗೆ ಹಿತವಾಗಿ ಕಾಣುತ್ತದೆ. ಅವರ ಮನಸ್ಸು ಒಂದಾಗದಿದ್ದರೆ, ದೇವರಿಗೇ ಪ್ರೀತಿ ಎನ್ನಿಸಿ ಬಸವಣ್ಣನವರ ಮುಖದ ಮಂದಹಾಸ ತಾವರೆಯಾಗಿ ಅರಳುತ್ತದೆ. ತಮ್ಮ ಸಂಸಾರದಲ್ಲಿ ಸತಿಪತಿಯರು ಮಾತ್ರವಲ್ಲ ಒಂದಾಗಿರುವುದು, ಇಬ್ಬರೂ ಸತಿಯರೂ ಒಂದಾಗಿದ್ದಾರಲ್ಲ. ಶಿವನಿಗೆ ಮತ್ತಷ್ಟು ಹಿತವಾಗಿರಬೇಕು, ಅಥವಾ ಗಂಗೆ ಗೌರಿಯರ ಮಾತ್ಸರ್ಯವನ್ನು ಕಂಡ ಶಿವನಿಗೆ ತಮ್ಮ ಬಗ್ಗೆ ಮತ್ಸರವೇ ಉಂಟಾಗಬೇಕು. ತಾವರೆಯ ಅರಳು ನಗುವಾಗಿ ಹೊಮ್ಮುತ್ತದೆ ಮೃದುವಾಗಿ. ಮರುಕ್ಷಣ ತಮ್ಮ ನಗು ಇತರರಿಗೆ ಕೇಳಿಸಿತೇನೋ ಎಂದು ಗಲಿಬಿಲಿಗೊಂಡ ಬಸವಣ್ಣನವರ ಮನಸ್ಸು ಗಂಭೀರವಾಗುತ್ತದೆ. ಶಿವ ಮತ್ಸರ ಪಡುವಷ್ಟು ಅನ್ಯೋನ್ಯ ದಾಂಪತ್ಯ ತಮ್ಮ ಮೂವರದು. ಆದರೂ ಈಚೀಚೆಗೆ ....."ಹೊರಟಿರಾ!" ಎಂಬ ಪ್ರಶ್ನೆಯಿಂದ ಯೋಚನೆ ತುಂಡರಿಯುತ್ತದೆ. ಕೇಳಿದವರು ಗಂಗೆ, ಯೋಚಿಸುತ್ತಲೇ ಬಸವಣ್ಣ ಇಲ್ಲಿಯವರೆಗೂ ಬಂದದ್ದಾಗಿತ್ತು.

"ಹ್ಞೂ. ನೀಲ ಎಲ್ಲಿ?"

"ಯಥಾ ಪ್ರಕಾರ ಏನನ್ನೋ ಓದುತ್ತಾ ಇದ್ದಾಳೆ."

"ಸರಿ. ಅವಳಿಗೂ ಹೇಳಿಬಿಡು, ಸಂಜೆ ಬಂದುಬಿಡುತ್ತೇವೆ."

"ವಿಷಯವನ್ನು ಸರಿಯಾಗಿ ಇತ್ಯರ್ಥ ಮಾಡಿ, ಬನ್ನಿ." ಎಂದು ಗಂಗೆ ಉಪಚಾರಕ್ಕೆ ಎಚ್ಚರಿಸುತ್ತಾರೆ, ಗಂಡನನ್ನು. ಬಸವಣ್ಣ ಎಂದರೆ ನಂದಿಯ ಅವತಾರವೆಂದು ಸಾವಿರಾರು ಜನ ಭಾವಿಸುವಷ್ಟು, ಗೌರವಿಸುವಷ್ಟು ಎತ್ತರದ ವ್ಯಕ್ತಿ ಎಂಬುದು ಅವರಿಗೇನು ತಿಳಿಯದೆ. ಆದರೆ ತನ್ನ ಗಂಡ, ತನ್ನ ಕರ್ತವ್ಯ ಎಂಬಂತೆ ಬಂದ ಮಾತುಗಳು.

"ದೇವಿಯರ ಅಪ್ಪಣೆ" ಬಸವಣ್ಣ ನಾಟಕೀಯವಾಗಿ ಕೈಮುಂದೆ ಮಾಡಿ ನಡುಬಗ್ಗಿಸಿ ಮುಜುರೆಯ ಭಂಗಿಯಲ್ಲಿ ನಿಂತಾಗ ಗಂಗೆಗೂ ನಗು. ತನ್ನ ಹೃದಯದೊಡೆಯನ ರೀತಿ ಕಕ್ಕುಲತೆಯಿಂದ ಎಷ್ಟು ಮಾಗಿರುವಂಥದು! ಎಂದೂ ಎಲ್ಲದರಲ್ಲು ಹಿತಮಿತವಾದ ನಡವಳಿಕೆ, ಆಲೋಚನೆ. ಲೋಕೋತ್ತರ ಚೇತಸರೆಂದರೆ ಯಾರಿಗೆ ಅರ್ಥವಾದೀತು ಅವರ ಸ್ವಭಾವ!

ಮುಗುಳನಗೆಯೊಡನೆ ಗಂಗೆ ಪತಿಯನ್ನು ಬೀಳ್ಕೊಡುತ್ತಾರೆ. ಸರಸರ ಮರು ಹೆಜ್ಜೆಗಳನ್ನು ಹಾಕುತ್ತಾ ಮಹಮನೆಯ ಹೊರ ಅಂಗಳಕ್ಕೆ ಬರುತ್ತಾರೆ ಬಸವಣ್ಣ. ಸಣ್ಣ ದನಿಯಲ್ಲಿ ಮಾತನಾಡುತ್ತಾ ದಣ್ಣಾಯಕರ ಬರವಿಗಾಗಿ ಕಾಯುತ್ತಿದ್ದ ಜನರು ಮೌನವಾಗುತ್ತಾರೆ, ಕೂತಿದ್ದವರು ಎದ್ದು ನಿಲ್ಲುತ್ತಾರೆ, ಎಲ್ಲರೂ ಕೈಜೋಡಿಸುತ್ತಾರೆ.

"ಶರಣು, ಅಣ್ಣನೋರಿಗೆ" ಎಂದು ಹಡಪದಪ್ಪಣ್ಣ ಮುಂದೆ ಬಂದು ಬಾಗುತ್ತಾನೆ. ಅವನ ಭುಜದ ಮೇಲೆ ಕೈ ಹಾಕಿ ಜೊತೆಯೊಂದಿಗೆ

ಮಹಮನೆಯ ಪ್ರಾಕಾರದ ಹೊರಗೆ ಬರುತ್ತಾರೆ ಬಸವಣ್ಣ. ಅವರೊಂದಿಗೆ ಅಲ್ಲಿ ಸೇರಿದ್ದ ಕೆಲವರು ಹಿಂಬಾಲಿಸಿ ಬರುತ್ತಾರೆ.

ಬಸವಣ್ಣ ಮೇನೆಯ ಬಳಿ ಬಂದು ಅಪ್ಪಣ್ಣನ ಭುಜದ ಮೇಲಿದ್ದ ಕೈತೆಗೆದು ನಿಲ್ಲುತ್ತಾರೆ. ಅಪ್ಪಣ್ಣ, ಉತ್ತಣ್ಣ ಇಬ್ಬರೂ ಮೇನೆಯ ಕಡೆ ಕೈ ತೋರಿಸಿ ನಿಲ್ಲುತ್ತಾರೆ. ಒಳಗೆ ಕುಳಿತ ಬಸವಣ್ಣ ಈ ಹೊತ್ತಿಗಾಗಲೇ ಮಹಮನೆಯ ಹೊರ ಅಂಗಳದಲ್ಲಿ ಬಂದು ನಿಂತಿದ್ದ ಗಂಗೆ ನೀಲ ಹಾಗೂ ಮನೆಯ ಆಳುಗಳ ಕಡೆಗೆ ತಿರುಗಿ ಕೈ ಬೀಸಿ ಮುಗುಳ್ನಗುತ್ತಾರೆ.

ಮೇನೆಯನ್ನು ಆಳುಗಳು ಹೊರುತ್ತಾರೆ, ಮುಂದೆ ನಡೆಯುತ್ತಾರೆ. ಆ ನಾಲ್ಕು ಜನರಲ್ಲದೆ, ಜೊತೆಗೆ ನಾಲ್ಕು ಮಂದಿ ದೀವಟಿಗೆಯವರು. ಉತ್ತಣ್ಣ ಅಪ್ಪಣ್ಣಗಳು ಹಾಗೂ ಗದ್ದುಂಬಳ್ಳಿಯಿಂದ ಬಂದಿದ್ದ ಮೂವರು.

ಗದ್ದುಂಬಳ್ಳಿ ಕಲ್ಯಾಣದಿಂದ ಆಗ್ನೇಯಕ್ಕೆ ಎರಡು ಹರದಾರಿಗಳ ದೂರದ ಊರು. ಇಲ್ಲಿಂದ ಅಲ್ಲಿಗೆ ಕಾಲ್ನಡೆಗೆಯಲ್ಲಿ ಸುಮಾರು ಎಂಟೊಂಬತ್ತು ಘಳಿಗೆಗಳಲ್ಲಿ ಹೋಗಬಹುದಾದ ದಾರಿ. ಹಿಂದಾಗಿದ್ದರೆ ಬಸವಣ್ಣನವರು ಕುದುರೆಯೇರಿ ಹೋಗಿಬಿಡುತ್ತಿದ್ದರು. ಎರಡು ಘಳಿಗೆಗಳೇ ಸಾಕಾಗುತ್ತಿತ್ತು ಅಷ್ಟು ದೂರ ಸಾಗಲು. ಈಗ ವಯಸ್ಸಾಗಿದೆ. ಮುಖದ ತೇಜಸ್ಸು ಕಡಿಮೆಯಾಗದಿದ್ದರೂ, ದೇಹದ ಸಹಜ ಶೈಥಿಲ್ಯ ಕುದುರೆಯೇರಲು ಅವಕಾಶ ಕೊಡುವಂಥದ್ದಲ್ಲ. ಮಾತಿನ ಹಾಗೆ ದೇಹವು ಮೃದುವಾಗಿದೆ. ಒಳಗಿನ ಜೀವ ದೃಢವಿರಬಹುದು, ಆದರೆ ಕಾಲದ ಪ್ರಭಾವ! ಕುದುರೆ ಗಾಡಿಯಲ್ಲಿ ಹೋಗಬಹುದು. ಇತರರು ಜೊತೆಯಲ್ಲಿ ಬರುವುದಾದರೆ ಕಷ್ಟ. ಅಲ್ಲದೆ ಎರಡು ಹರದಾರಿ ದೂರ, ಅಷ್ಟೆ. ಪ್ರಾತರ್ವಿಧಿಗಳನ್ನೆಲ್ಲ ಮುಗಿಸಲು, ಇತರರು ಬಂದು ಕೂಡಿಕೊಳ್ಳಲು ಇಷ್ಟು ಹೊತ್ತಾಗಿದೆ. ಸೂರ್ಯೋದಯವಾಗಿ ಈಗ ಸುಮಾರು ಹತ್ತು ಘಳಿಗೆಗಳು ಸಂದಿವೆ; ಎಂದರೆ ಮಧ್ಯಾಹ್ನ ಪ್ರಸಾದ ಸಮಯಕ್ಕೆ ಗದ್ದುಂಬಳ್ಳಿಯನ್ನು ಸೇರಲು ಕಷ್ಟವಿಲ್ಲ. ಅಲ್ಲಿ ಹೋಗಿ ಪ್ರಸಾದ ವಿಶ್ರಾಂತಿಗಳ ಹೊತ್ತಿಗೆ ಮತ್ತಷ್ಟು ಸಮಯ. ಸಂಬಂಧಿಸಿದ ಜನಗಳನ್ನು ಸೇರಿಸಿ, ಅಲ್ಲಿ ಚರ್ಚೆ ಮಾಡಿ ಆಗಬೇಕಾದದ್ದೇನು ಎಂದು ತೀರ್ಮಾನಿಸಲು ಮತ್ತಷ್ಟು ಸಮಯ. ಇಳಿಹೊತ್ತಲ್ಲಿ ಹೊರಟರೆ ಆಯಾಸವಿಲ್ಲದೆ ಮತ್ತೆ ಕಲ್ಯಾಣ ತಲುಪುವ ಹೊತ್ತಿಗೆ, ಇಲ್ಲ ಹೊತ್ತು ಮುಳುಗುವ ಸಮಯ, ಅಥವಾ ಆಗ ತಾನೇ ಮುಳುಗಿರುತ್ತದೆ. ಆದಕ್ಕೆ ಈ ಯೋಜನೆ.

ಧಾವಂತವಿಲ್ಲದೆ ಪ್ರಯಾಣ ಮುಂದುವರಿಯುತ್ತದೆ. ಮೇನೆ ಮುಂದೆ, ಅದರ ಎಡಬಲಗಳಲ್ಲಿ ಉತ್ತಣ್ಣ ಅಪ್ಪಣ್ಣ, ಹಿಂದೆ ಮಿಕ್ಕವರು. ದಾರಿ ಮೇನೆಯವರಿಗೆ ತಿಳಿಯದ್ದೇನೂ ಅಲ್ಲ. ಅದೇನು ಮಲೆನಾಡಿನ ಕಾಡೇ. ಕುರುಚಲು ಕಾಡು ಅಷ್ಟೇ. ಜನ ಬಂಡಿಗಳ ಓಡಾಟದಿಂದ ಬಿದ್ದ ಜಾಡು. ಆದರೂ ಓಡಾಟ ಕಡಿಮೆಯಾಗುವ ಕಾಲದಲ್ಲಿ ದಾರಿಗಡ್ಡವಾಗಿ ಬೆಳೆದ ಕುರುಚಲು ಗಿಡ. ಅದನ್ನು ಸವರುತ್ತಾ ಒಬ್ಬ ಮುಂದೆ ಹೋದರೆ

ಹಿಂಬಾಲಿಸುವವರಿಗೆ ಸಲೀಸು. ಗದ್ದುಂಬಳ್ಳಿಯ ಒಬ್ಬ ಆ ಕೆಲಸ ಹೊತ್ತು ತುಸು ದೂರದಲ್ಲಿ ಆಗಲೇ ಮುಂದುವರಿಯುತ್ತಿದ್ದಾನೆ.

ಪುಷ್ಯಮಾಸವಾದದ್ದರಿಂದ ಆಗಲೇ ಸೂರ್ಯಪರಮಾತ್ಮ ಬಿರುಸಾಗಿಲ್ಲ. ಹಾಗೆ ನೋಡಿದರೆ ಇನ್ನೂ ಸ್ವಲ್ಪ ಇದೆಯೋ ಇಲ್ಲವೋ ಎಂಬಂತೆ ಕುಳಿರು. ಆದ್ದರಿಂದ ಪ್ರಯಾಣ ಪ್ರಯಾಸಕರವಾದದ್ದೇನೂ ಅಲ್ಲ. ಹಿತವಾದ, ಎಲ್ಲೆಡೆಗೆ ಸಮನಾಗಿ ಹರಡಿದ ನವಿರು ಬಿಸಿಲು. ಆಗಾಗ ಬೀಸುವ ಗಾಳಿ. ಕಲ್ಯಾಣದ ಗಜಿಬಿಜಿಯನ್ನು ದಾಟಿ ಹೊರವಲಯಕ್ಕೆ ಬಂದರೆ ದಟ್ಟವಾದ ಮೌನ. ಆಗಾಗ ಮೇನೆಯ ಪರದೆಯನ್ನು ಸರಿಸಿ ಹೊರಗೆ ನೋಡಿದರೆ ಬಸವಣ್ಣನವರಿಗೆ ಕಾಣಸುವುದು ಬಯಲು; ಅಲ್ಲೊಂದು ಇಲ್ಲೊಂದು ಎತ್ತರದ ಮರಗಳ ಹೊರತಾಗಿ, ಹರಡಿರುವ ಬಯಲು. ದೂರದಲ್ಲಿ ಮೇಲುಗಡೆ ದಿಗಂತವನ್ನು ರಚಿಸಿರುವ ಸಣ್ಣಪುಟ್ಟ ಗುಡ್ಡಗಳು. ಎಲ್ಲವನ್ನೂ ಆವರಿಸಿರುವ ಸ್ಪಷ್ಟ-ಬಿಸಲಿನ ಹೊದಿಕೆ, ಹೊಂಬಣ್ಣದಿಂದ ಈಗತಾನೆ ಬೆಳ್ಳಗಾಗುತ್ತಿರುವ ಹಾಗೆ.

ಗದ್ದುಂಬಳ್ಳಿ ಎಂದು ಬಸವಣ್ಣ ಮೃದುವಾಗಿ ಉಚ್ಚರಿಸುತ್ತಾರೆ. ಎಂದರೆ ಅವರ ಮನಸ್ಸಿನಲ್ಲಿ ಗದ್ದುಂಬಳ್ಳಿಯ ವಿಚಾರ ಹಾಯುತ್ತಿದೆ ಎಂದರ್ಥ. ಬಹಳ ವರ್ಷಗಳ ಹಿಂದೆ ಆ ಊರಿಗೆ ತಾವು ಹೋಗಿದ್ದಂತೆ, ಅಪ್ಪಣ್ಣ ಹೇಳಿದ್ದ ನಿನ್ನೆ ರಾತ್ರಿ. ಬಹಳ ವರ್ಷ ಎಂದರೆ ಎಂಟೋ ಆರೋ ವರ್ಷಗಳು. ಕಲ್ಯಾಣಕ್ಕೆ ಇಷ್ಟು ಹತ್ತಿರವಿದ್ದರೂ ಈ ಊರಿನಂತಹವು ಎಷ್ಟೋ ತುಂಬ ದೂರ ಉಳಿದುಬಿಟ್ಟಿವೆ. ತಾವೇನು ಕಡಿಮೆ ಓಡಿಯಾಡುವವರೇ! ತಮ್ಮ ಕೆಲಸವೇ ಅಂತಹುದು, ಹಣಕಾಸಿನ ವ್ಯವಹಾರದ್ದು- ವಸೂಲಿಯದು, ವಿತರಣೆಯದು. ತಾವೇ ಅವನ್ನು ಮಾಡಬೇಕೆಂದಿಲ್ಲ. ಉಸ್ತುವಾರಿಯ ಕೆಲಸ, ಎಂದರೆ ಹೊಣೆಗಾರಿಕೆಯದು. ಅದೂ ಹಣಕಾಸಿನ ವ್ಯವಹಾರವೆಂದರೆ ಮೈಯೆಲ್ಲ ಕಣ್ಣಾಗಬೇಕು, ಎಂದರೆ ಇಂದ್ರರಾಗಬೇಕು. ಇಂದ್ರನಿಗೆ ಮೈಯಲ್ಲಿರುವುದು ಸಾವಿರ ಕಣ್ಣುಗಳೋ, ಸಾವಿರ ಯೋನಿಗಳೋ! ಒಳ್ಳೇ ಪುರಾಣ ಎಂಬ ಭಾವನೆಯಿಂದ ಮುಖದಲ್ಲಿ ಮುಗುಳ್ನಗೆ.

ತಮ್ಮ ಓಡಾಟವೆಂದರೆ ಒಂದು ಕಾಲದಲ್ಲಿ ಬಿರುಗಾಳಿಯ ರೀತಿ. ಕುದುರೆ ಹತ್ತಿದರೆಂದರೆ ಸಾಗಾಲೋಟ. ದರಿಯಿರಲಿ, ಗಿರಿಯಿರಲಿ; ನದಿಯಿರಲಿ, ಹೊಳೆಯಿರಲಿ; ಕಾಡಿರಲಿ ಮೇಡಿರಲಿ ನಿಲ್ಲದ ಹಾರಾಟ. ಬಹಳ ವರ್ಷಗಳ ಕಾಲ ತಾವು ಹಾಗೆ ಕುದುರೆಯೇರಿ ಪ್ರವಾಸ ಕೈಗೊಳ್ಳುತ್ತಿದ್ದುದುಂಟು. ಅದೆಂಥ ಕುದುರೆ ತನ್ನ ಬಳಿಯಿದ್ದದ್ದು! ಒಂದೆರಡನ್ನು ಬದಲಾಯಿಸಿದ್ದು ಉಂಟು. ಆದರೆ ಮೊದಲು ಇತ್ತಲ್ಲ, ತಮ್ಮ ಮನಸ್ಸು ಹಾರುವ ವೇಗಕ್ಕೆ ಸಂವಾದಿಯಾಗಿ ಹಾರುತ್ತಿದ್ದದ್ದು; ತನ್ನ ಆಕಾಂಕ್ಷೆಗಳಂತಿದ್ದ ಬೆಟ್ಟಗಳನ್ನು ಏರುತ್ತಿದ್ದದ್ದು; ತಮ್ಮ ನಿರಂತರ ಯೋಚನೆಗಳಂತಹ ಹೊಳೆಗಳನ್ನು ದಾಟುತ್ತಿದ್ದದ್ದು! ಅದಕ್ಕೆ ಇಂದ್ರಾಯುಧ ಎಂಬ ಹೆಸರಿಟ್ಟಿದ್ದರು. ಕಾಳಿದಾಸ ಹಾರುವ ಚಿಗರೆಯನ್ನು ವರ್ಣಿಸಿದ್ದಾನಲ್ಲ, ಆ ಕುದುರೆ ಅಂತಹುದು. ಎಷ್ಟೆಷ್ಟು ಕಡೆ ಹೋಗುತ್ತಿದ್ದದ್ದು;

ಮಿಂಚಿನ ಓಟ! ಆದರೆ, ಕಾಲಾಯ ತಸ್ಮೈ ನಮಃ! ಅಂತಹ ಕೆಲಸಗಳಿಗೆ ಬರುಬರುತ್ತಾ ಸಹಾಯಕರು ಹೋಗುತ್ತಿದ್ದರು. ಪ್ರಭುಗಳೊಡನೆ ಮಾತ್ರ ಕೆಲವೇಳೆ ಪ್ರವಾಸ, ಆಮೇಲೆ ವಯಸ್ಸಾದಂತೆ ಆ ಹಾರುವ ಏರುವ ಚಪಲಗಳ ವೇಗವೂ ಕಡಿಮೆಯಲ್ಲವೇ! ಈಗಂತೂ ಪ್ರವಾಸ ತುಂಬವೇ ಕಡಿಮೆಯಾಗಿದೆ. ಈಗ ಎರಡು ಹರದಾರಿಗಳಷ್ಟು ಪ್ರಯಾಣ ಮಾಡಿದರೂ, ಮೇನೆಯಲ್ಲಿ ಕುಳಿತಿದ್ದರೇನು, ಮೊದಲಿನಂತಹ ಉತ್ಸಾಹ ಇರಲು ಸಾಧ್ಯವೇ! ಈಗ ವಿವೇಕದ ಕೆಲಸ, ಆವೇಗದಿಂದ ಆಗುವ ಕಾರ್ಯಗಳಲ್ಲ.

ಗದ್ದುಂಬಳ್ಳಿಗೆ ಹಿಂದೆ ಹೋಗಿದ್ದದ್ದು ಅಲ್ಲಿಯ ಉತ್ಸಾಹೀ ಶರಣರನ್ನು ಕಾಣಲು. ಅಣ್ಣನವರಿಗೇನೂ ನೆನಪು ಉಳಿದಿಲ್ಲ, ಅಥವಾ ಇದ್ದರೂ ಮಸಕು ಮಸಕಾಗಿ. ಅಲ್ಲಿಯ ಜನರಲ್ಲಿ ಕೆಲವರಾದರೂ ಆಗಾಗ ಕಲ್ಯಾಣಕ್ಕೆ ಬರುವವರೇ. ಕೆಲವರು ರಾಜಧಾನಿಯನ್ನು ಕಾಣುವ ಆಸೆಯಿಂದಲಾದರೆ, ಇಲ್ಲಿ ಕುದುರುವ ವ್ಯಾಪಾರ ಮತ್ತೆಲ್ಲಿ ಕುದುರೀತು ಎಂಬ ಯೋಚನೆಯಿಂದ ಕೆಲವರು, ಉತ್ಸವ–ಮೆರವಣಿಗೆಯೆಂಬ ಕಾರಣದಿಂದ ಇನ್ನೂ ಕೆಲವರು–ಬರುತ್ತಲೇ ಇರುತ್ತಾರೆ. ಅವರಲ್ಲಿ ಕೆಲವರು ತಮ್ಮನ್ನು ಆಗಾಗ್ಗೆ ಕಂಡು ಶರಣು ಹೇಳಿ ಹೋಗುತ್ತಿರುವುದೂ ಉಂಟಂತೆ– ಅಪ್ಪಣ್ಣ ಹಾಗನ್ನುತ್ತಾನೆ. ಆದರೆ ಅವರನ್ನೆಲ್ಲ ನಾನು ನೆನಪಿರಿಸಿಕೊಳ್ಳಲು ಸಾಧ್ಯವೇ? ತಾವಾದರೆ ಅವರಿಗೆಲ್ಲ ಒಬ್ಬನೇ ಬಸವಣ್ಣ, ಆದರೆ ತಮಗೆ ಸಾವಿರಾರು ಸಂದರ್ಶಕರು. ಅವರು ತಮಗೆ ನೆನಪಿರಲು ಸಾಧ್ಯವೇ, ತಾವು ಅವರ ಮನಸ್ಸಿನಲ್ಲಿ ಉಳಿದಿರುವ ಹಾಗೆ! ಅಥವಾ ಮತ್ತೆ ಮತ್ತೆ ಕಂಡ ಮುಖವಾದರೆ ಕಂಡ ಕ್ಷಣ ನೋಡಿದ ನೆನಪಾಗಬಹುದು.

ಆ ಹಳ್ಳಿಯವರೆಲ್ಲ ಶಿವಭಕ್ತರೇ. ಒಂದೆರಡು ದಿನಗಳ ಹಿಂದೆ ಅಲ್ಲಿಯ ಕೆಲವರು ಬಂದಿದ್ದರು. ಒಂದು ಸಮಸ್ಯೆ ಭಕ್ತ ಸಂಕುಲದಲ್ಲಿ ತಲೆದೋರಿತ್ತು. ಸಮಸ್ಯೆಯೆಂದರೆ ಸಮಸ್ಯೆ ಭಾರಿಯದು ಎಂದೇನೂ ಅಲ್ಲ, ಆದರೆ ಪರಿಸ್ಥಿತಿ ಸರಳವಾದದ್ದೂ ಅಲ್ಲ. ಇಂಥ ಪರಿಸ್ಥಿತಿ, ಕನಿಷ್ಠ ಪಕ್ಷ ಮೊದಲ ಬಾರಿಗೆ ತಮ್ಮ ಜನರಿಗೆ ಎದುರಾಗುತ್ತಿದೆ. ಅವರಿಗೇಕೆ, ತಮಗೂ ಸಹ. ಸಂದರ್ಭ ಸರಳವೇ, ಮದುವೆಯದು. ಆದರೆ ಅದು ಸೃಷ್ಟಿಸುವ, ಸೃಷ್ಟಿಸಿರುವ ವಾತಾವರಣ ಅಪರೂಪದ್ದು, ಹಾಗಾಗಿ ವಿಚಿತ್ರವಾದದ್ದು ಎನ್ನಿಸಲೂಬಹುದು. ಮದುವೆಯೆಂದರೆ ಎಂದಿನಂತಹ ಮದುವೆಯಲ್ಲ– ಎರಡು ಜಾತಿಗಳ ಗಂಡು–ಹೆಣ್ಣುಗಳ ಮಧ್ಯೆ ಆಗಬೇಕಾದ ಮದುವೆ, ಅದೂ ಮೊದಲ ಹಾಗೂ ಕೊನೆಯ ಹಂತಗಳಲ್ಲಿದ್ದ ಜನಗಳ ನಡುವೆ ಬೆಸೆಯಬೇಕಾದ ಸಂಬಂಧ. ಆದ್ದರಿಂದಲೇ ಪರಿಸ್ಥಿತಿ ತುಂಬ ಜಟಿಲ.

ಗದ್ದುಂಬಳ್ಳಿಯ ಮಧುವಯ್ಯ ತುಂಬ ಸಂಭಾವಿತ, ವಿನಯವಂತನಂತೆ. ಆತನನ್ನು ತಾವೆಲ್ಲೋ ಕಂಡ ನೆನಪಿದೆ, ಬಸವಣ್ಣನವರ ಮನಸ್ಸಿನಲ್ಲಿ ಅಸ್ಪಷ್ಟವಾಗಿ. ಅನೇಕ ಸಾರಿ ತಮ್ಮನ್ನಾತ ಮಾತನಾಡಿಸಿದ್ದಾನಂತೆ. ಆತನ

ಹೆಸರೇನೋ ಪರಿಚಿತವಾದದ್ದರ ಹಾಗಿದೆ, ಆದರೆ ಆತನ ಮುಖ ತಮ್ಮ ನೆನಪಿಗೆ ಬರಲೊಲ್ಲದು, ಕಂಡರೆ ನೆನಪಾಗಬಹುದು. ಅವನಿಗೆ ಒಬ್ಬಳೇ ಮಗಳಂತೆ –ಚಂದಲೆ. ಅವಳು ಆ ಊರ ಅಳ್ಳಯ್ಯನ ಮಗ ಕೇತಗನ ಜೊತೆಯಲ್ಲಿ ಸ್ನೇಹ ಬೆಳೆಸಿದ್ದಾಳಂತೆ, ಅಥವಾ ಇವನೇ ಅವಳ ಸ್ನೇಹ ಸಂಪಾದಿಸಿರಬಹುದು. ಅಳ್ಳಯ್ಯ ಮಚ್ಚಿಗರವನು. ಅವನೊಮ್ಮೆ ತಮಗೆ ಒಂದು ಜೊತೆ ಜೋಡನ್ನು ತಂದು ಕೊಟ್ಟಿದ್ದಾನಂತೆ. ಅದನ್ನು ಅಪ್ಪಣ್ಣನೇ ಹೇಳಿದ್ದ. ಅವನಿಗೆ ಆ ಊರ ವಿಷಯ, ಊರ ಮಂದಿ, ಅವರ ವ್ಯವಹಾರ–ಎಲ್ಲ ತುಂಬಾ ಪರಿಚಿತವಾಗಿರುವಂತಿದೆ. ಹಾಗೆ ನೋಡಿದರೆ, ತಾವು ಆ ವಿಚಾರದಲ್ಲಿ ಮಾರ್ಗದರ್ಶನ ಮಾಡಬೇಕೆಂದು ಮುತುವರ್ಜಿ ವಹಿಸಿರುವವನು ಅವನೇ. ಅವನನ್ನು ತಾನೇ ಜನ ತಮ್ಮನ್ನು ಕಾಣುವ ಮುನ್ನ ಕಾಣುವುದು. ತಮ್ಮವರೆಗೂ ಬರಬಹುದಾದ ವಿಚಾರವೋ ಅಲ್ಲವೋ ಎಂಬುದನ್ನು ನಿರ್ಧರಿಸುವವನು ಅವನೇ. ತಾವು ಖುದ್ದು ಪರಿಶೀಲಿಸಬೇಕಾದುದ್ದು ಎಂದು ಹಡದಪ್ಪಣ್ಣನಿಗೆ ಮನವರಿಕೆಯಾದರೆ ಮಾತ್ರ ವಿಷಯ ತಮ್ಮವರೆಗೆ ಬರುವುದು.

ಈ ವಿಚಾರವೂ ಹಾಗೆಯೇ. ಇದೇನು ರಾಜಕಾರ್ಯವಲ್ಲ, ಸಮಾಜಕಾರ್ಯ. ಬ್ರಾಹ್ಮಣರವನಾಗಿದ್ದ ಮಧುವಯ್ಯನ ಮಗಳು ಚಂದಲೆ, ಮಚ್ಚಿಗನಾದ ಅಳ್ಳಯ್ಯನ ಮಗ ಕೇತಗ ಇವರ ನಡುವೆ ನಡೆಯಬೇಕಾದ ಮದುವೆ. ಅವರ ಸ್ನೇಹ ಹೇಗಾಗಿರಬಹುದು ಎಂಬುದನ್ನು ಅಪ್ಪಣ್ಣ ಊರವರಿಂದ ತಿಳಿದು ತಮಗೆ ವಿವರಿಸಿದ್ದ. ಕೇತಗ ತುಂಬ ಚೆನ್ನಾದ ಬಯಲಾಟದ ಪಾತ್ರಧಾರಿಯಂತೆ, ಅವನ ಕಂಠವೂ ತುಂಬಾ ಇಂಪಾದದ್ದು. ಜೊತೆಗೆ ನಾನಾ ಕಾರಣಗಳಿಗಾಗಿ ಕರಣಿಕರ ಮನೆಗೆ ಕೇತಗ ಬರುವ ಸಂದರ್ಭಗಳು. ಕಣ್ಣು–ಕಣ್ಣು ಕೂಡಿರಬೇಕು. ಕೇತಗನ ಪಾತ್ರ ಕಂಡು ಚಂದಲೆಯ ಮನಸ್ಸು ಕರಗಿರಬೇಕು. ಇವೆಲ್ಲ ಬೆಣ್ಣೆ–ಬಿಸಿಯ ಸಂಬಂಧವಲ್ಲವೆ!

ಸ್ನೇಹ ಕೇವಲ ನೋಟ ಮಾತುಗಳಿಗೆ ಸೀಮಿತವಾಗಿದ್ದರೆ ಊರೆಲ್ಲ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಪ್ರಾಯಶಃ ಮನಸ್ಸನ್ನು ದಾಟಿ ಆಕರ್ಷಣೆ ಮೈತಾಗಿರಬೇಕು! ಇಲ್ಲದಿದ್ದರೆ ಇಂಥಹ ಪರಿಸ್ಥಿತಿ ಬರುತ್ತಿರಲಿಲ್ಲವೇನೋ. ಇಂಥ ಪ್ರಸಂಗವನ್ನು ತಾನಾಗಿ ಯಾರೂ, ಆದರಲ್ಲೂ ಹಿರಿಯರು, ಊರವರು, ಮೈಮೇಲೆ ಎಳೆದುಕೊಳ್ಳಲಾರರು. ಇಲ್ಲಿ ಆಗಿರಬಹುದಾದ್ದು ಅದೇ. ಬ್ರಾಹ್ಮಣರ ಹುಡುಗಿ–ಊರಲ್ಲಿರುವುದು ಒಂದೇ ಬ್ರಾಹ್ಮಣ ಕುಟುಂಬ– ಒಡನಾಟಕ್ಕೆ ಬೇರೆಲ್ಲಿಗೆ ಹೋಗಬೇಕು. ಅಲ್ಲದೆ ಕೇತಗ ಮಚ್ಚೆ ಮಾಡಿ ತೆಗೆದುಕೊಂಡು ಹೋಗಿ ಕೊಡಲು, ಇನ್ನಾವುದಾದರೂ ಕೆಲಸ ಮಾಡಿಕೊಡಲು ಹೋಗುವವನು. ಹಾಗಾಗಿ ದೇಹಕ್ಕೆ ಸಹಜವಾದ ಆಕರ್ಷಣೆಯ ಹಗ್ಗ ಇಬ್ಬರನ್ನು ಒಟ್ಟಿಗೆ ಬಿಗಿದಿರಬಹುದು.

ಬ್ರಾಹ್ಮಣ–ಮಚ್ಚಿಗ! ಚಂದಲೆ– ಕೇತಗ! ಮಧುವಯ್ಯ–ಅಳ್ಳಯ್ಯ! ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನ್ನೆಲ್ಲಾ ಒಂದೇ ಎಂಬೆ!

ಅವರಿಬ್ಬರೂ ಸಮಾಜದ ಏಣಿಯ ಮೇಲಿನ ಮೆಟ್ಟಿಲು, ಕೆಳಗಿನ ಕೊನೆಯ ಮೆಟ್ಟಿಲು- ಏಣಿ ಒಂದೇ ಅಲ್ಲವೇ? ಶಿವಭಕ್ತರು. ಅಲ್ಲದೆ ಶಿವಭಕ್ತರಿಗೆ ಜಾತಿಯೆಲ್ಲಿಯದು? ಲಿಂಗ ಧರಿಸಿದ ಬಳಿಕ ಎಲ್ಲರೂ ಒಂದೇ ನೆಲೆಯವರಾಗಿಬಿಡುತ್ತಾರೆ. ನಿಜ. ಆದರೆ ಇದು ಅಷ್ಟು ಸರಳವಾಗಿದ್ದಿದ್ದರೆ ಊರವರು ತಮಗೇಕೆ ಹೇಳಿಕಳಿಸಬೇಕಾಗಿತ್ತು? ತಾವು ಬಗೆಹರಿಸಿಕೊಳ್ಳಲು ಸಾಧ್ಯವಿಲ್ಲವೆಂಬ ಕಾರಣದಿಂದ ತಾನೇ! ಇದು ಇಂತಹ ಮೊದಲ ಪ್ರಸಂಗ. ಮೊದಲ ಹೆಜ್ಜೆ ಸಮಾಜ ಹೊಸ ಹಾದಿಯ ಮೇಲೆ ಸುಳಿಯುತ್ತಿರುವುದು. ಮೊದಲು ಎಂಬುದಕ್ಕೇ ಇದು ಜಟಿಲ. ದಾರಿ ಎಂಥದೋ ಯಾರಿಗೂ ತಿಳಿಯದು. ಇದನ್ನು ಬಗೆಹರಿಸಿದರೆ ಮುಂದೆ ಇಂಥ ಪ್ರಸಂಗಗಳು ಬಂದರೆ ಏನು ಮಾಡಬೇಕೆಂಬುದು ತೋಚಲು ಜನರಿಗೆ ಕಷ್ಟವಾಗಲಿಕ್ಕಿಲ್ಲ.

ಮೊದಲ ಹೆಜ್ಜೆಯಿಡಲು ತಮ್ಮ ಮಾರ್ಗದರ್ಶನ ಬೇಕು. ಆದರೆ ಇಂತಹ ಹೆಜ್ಜೆಯ ಕಲ್ಪನೆ ತಮಗೂ ವಾಸ್ತವವಾಗಿ ಮೊದಲ ಬಾರಿಗೇ ಅಲ್ಲವೇ ಮೂಡುತ್ತಿರುವುದು. ಅಥವಾ ಇಂಥ ಸನ್ನಿವೇಶವೊಂದನ್ನು ತಾವು ಕಲ್ಪಿಸಿಕೊಂಡಿರಬಹುದಾದರೂ, ವಾಸ್ತವವಾಗಿ ತಮಗೆ ಎದುರಾಗಿರುವ ಇಂಥ ಪ್ರಸಂಗ ಎಂದರೆ ಇದೇ ಮೊದಲಲ್ಲವೇ? ಎಂದರೆ ತಮಗೂ ಇದು ಮೊದಲ ಹೆಜ್ಜೆ. ನೇರವಾಗಿ ತಮ್ಮ ವೈಯಕ್ತಿಕ ಬಾಳಿಗೆ ಸಂಬಂಧಿಸಿರದಿದ್ದರೂ, ತಮ್ಮ ಕಲ್ಪನೆಯ ಕೂಸಾದ ಸಮಾಜ ಪರಿಸ್ಥಿತಿಯ ದೃಷ್ಟಿಯಿಂದ ತಮಗೂ ಸಂಬಂಧಪಟ್ಟದ್ದೇ ಹೌದು. ಅಲ್ಲದೆ, ಇದು ಮುಂದೆ ಸಮಾಜ ತುಳಿಯಬೇಕಾಗುವ ದಾರಿಯ ದೃಷ್ಟಿಯಿಂದ ಬಹು ಮುಖ್ಯವಾದದ್ದು.

ತಾವು ಹೀಗಾಗಬೇಕು ಎಂದು ಕಂಡ ಕನಸನ್ನು ತಕ್ಕಮಟ್ಟಿಗೆ ತಮ್ಮ ಒಡನಾಡಿಗಳು ಅನುಸರಿಸಿದ್ದಾರೆ. ಒಂದು ಕ್ಲಿಷ್ಟ ಸನ್ನಿವೇಶ ಬಂದಾಗ ಮುಂದೇನು ಎಂದು ಅವರು ಕೇಳುವುದು ಸಹಜ. ತಾವು ಹೊಣೆಗಾರಿಕೆಯಿಂದ ಈ ಸಂದರ್ಭವನ್ನು ವಿಶ್ಲೇಷಿಸಬೇಕು, ತೊಡಕಿದ್ದರೆ ಹೋಗಲಾಡಿಸಬೇಕು. ಆಯಿತು, ಶಿವನಿದ್ದಾನೆ. ಪರಿಸ್ಥಿತಿ ಎಂತಹುದೆಂಬ ಸ್ಪಷ್ಟ ಕಲ್ಪನೆ ಬರುವುದು ಗದ್ದುಂಬಳ್ಳಿ ಸೇರಿದಾಗಲೇ, ಜನರ ಜತೆ ಮಾತಾಡಿದಾಗಲೇ, ಅಲ್ಲವರ ಮನಸ್ಸನ್ನು ತಿಳಿದ ಮೇಲೆಯೇ.

ಹೊಣೆಗಾರಿಕೆಯನ್ನು ಇಷ್ಟು ತನಕ ನಿಭಾಯಿಸಿರುವ ತಾವು, ತೊಡಕಿನ ಪ್ರಸಂಗ ಬಂದಾಗ ಸಹಜೀವಿಗಳಿಗೆ ಸರಿಯಾದ ದಾರಿ ತೋರಿಸುವುದೂ ಕರ್ತವ್ಯವೆಂದು ಭಾವಿಸಿ ನಡೆಯಬೇಕು. ಈ ಸನ್ನಿವೇಶ ಮುಂದೆ ಹುಟ್ಟುಹಾಕಲಿರುವ ಸಮಸ್ಯೆಯ ಸಸಿಗಳು ಎಂತಹವೋ! ನೋಡಬೇಕು, ನೋಡೋಣ, ವಿವೇಕ ಸರಿದಾರಿ ತೋರೀತು.

ಯೋಚನೆಗಳ ಭಾರದಿಂದ ಕಣ್ಣಾಲಿಗಳು ಆಯಾಸಗೊಂಡವು. ಭಾರವೆನಿಸಿ, ರೆಪ್ಪೆಗಳು ಮುಚ್ಚಿಕೊಂಡವು. ಅಣ್ಣನವರಿಗೆ ಜೋಂಪು.

೨

ಯೋಚಿಸಿದರೆ ಆಶ್ಚರ್ಯವಾಗುತ್ತದೆ, ನಮ್ಮ ಶರಣ ಮಾರ್ಗ ಹಾದು ಬಂದದ್ದು ಎಷ್ಟು ದೂರ ಎಂದು. ಕಲ್ಯಾಣಕ್ಕೆ ಬಂದು ಆಗಲೇ ಹನ್ನೆರಡು ವರ್ಷಗಳು ಕಳೆಯುತ್ತ ಬಂದಿವೆ. ಮಂಗಳವಾಡದಲ್ಲಿ ಕಳೆದದ್ದು ಇಪ್ಪತ್ತನಾಲ್ಕು ವರ್ಷಗಳು. ನಮ್ಮ ಚಳುವಳಿ ಪ್ರಾರಂಭವಾಗಿ ಸುಮಾರು ಮೂವತ್ತು ಮೂವತ್ತೆರಡು ವರ್ಷಗಳು. ಈ ಕಾಲದಲ್ಲಿ ಆಗಿರುವ ಬದಲಾವಣೆ ಅದೆಷ್ಟು! ಮುಟ್ಟಿದರೆಲ್ಲಿ ನಲುಗಿ ಹೋಗುವರೋ ಎಂಬಂತೆ ಇದ್ದ ಜನ ಅದೆಷ್ಟು ಆತ್ಮ ವಿಶ್ವಾಸದಿಂದ ನಡೆಯತೊಡಗಿದ್ದಾರೆ!

ಮಂಗಳವಾಡದಲ್ಲಿ ಕಳೆದ ಕಾಲವೆಂದರೆ ಚಟುವಟಿಕೆ ಉತ್ಸಾಹ ಕ್ರಿಯಾಶೀಲತೆಗಳ ಮಹಾಪೂರ. ಭಂಡಾರದಲ್ಲಿ ನಾನು ಕೆಲಸದಲ್ಲಿದ್ದದ್ದು ಜನಸಂಪರ್ಕಕ್ಕೆ ಎಷ್ಟೋ ಅನುಕೂಲವಾಯಿತು. ಮೊದಮೊದಲು ನನ್ನ ಮನಸ್ಸಿನ ಆಲೋಚನೆಗಳು ಎಷ್ಟರಮಟ್ಟಿಗೆ ಸಾಧು, ಪ್ರಯೋಗಯೋಗ್ಯ ಎಂಬ ಅನುಮಾನ ಕಾಡುತ್ತಿರಲಿಲ್ಲವೇ? ಅದರಲ್ಲೂ ಈ ಜಾತಿಯ ಪಿಡುಗು? ಇಪ್ಪತ್ತು, ಮೂವತ್ತು ವರ್ಷಗಳ ಸತತ ಪ್ರಯತ್ನ, ನೂರಾರು ಜನರ ತಿಳಿವಳಿಕೆಯಿಂದಾದ ಪ್ರಭಾವ, ಸಾವಿರಾರು ಕಾರ್ಯಕರ್ತರ ಉತ್ಸಾಹ ಇವುಗಳಿಂದಾಗಿ ಸಾಮಾನ್ಯ ಜನರಲ್ಲಿಯೂ ಅನೇಕರ ಮೌಢ್ಯದ ಪೊರೆ ಹರಿಯುತ್ತ ಬಂದಂತೆ ಕಾಣುತ್ತದೆ. ಹಲಸಿನ ಹಣ್ಣಿನಿಂದ ತೊಳೆಗಳನ್ನು ಬಿಡಿಬಿಡಿಯಾಗಿ ತೆಗೆದಿಟ್ಟ ಹಾಗೆ ತಾನು ಮಾಡುತ್ತಿದ್ದ ವಿಶ್ಲೇಷಣೆ ಜನರ ಮನಸ್ಸಿನಲ್ಲಿ ಹೇಗೆ ಪ್ರಭಾವವನ್ನುಂಟುಮಾಡುತ್ತಿದ್ದವು!

ಹಿಂದೊಮ್ಮೆ, ಬಹುವರ್ಷಗಳ ಹಿಂದಿನ ಮಾತು, ಮಂಗಳವಾಡದ ಒಂದು ಹೊಲೆಯರ ಕೇರಿಗೆ ತಾನು, ಚನ್ನಬಸವ ಭೇಟಿಕೊಟ್ಟದ್ದು ನೆನಪಿಗೆ ಬರುತ್ತದೆ. ಚಳುವಳಿ, ಹೊಸ ಆಲೋಚನೆ ಇವುಗಳ ಕಾವು ತಮ್ಮ ಮನಸ್ಸಿನಲ್ಲಿ ಏರುತ್ತಿದ್ದ ಕಾಲ. ಚನ್ನಬಸವನಿಗೆ ಆಗಿನ್ನೂ ಹದಿನಾಲ್ಕು ವರ್ಷ; ತನಗೆ ಮೂವತ್ತಿರಬಹುದು. ಈಶಾನ್ಯಗುರುಗಳು ಕೂಡಲ ಸಂಗಮದಲ್ಲಿದ್ದಾಗ ಬೋಧಿಸಿದ್ದಂತೆ ಶಿವಲಿಂಗದ ಪುಟ್ಟ ಕರಂಡವನ್ನು ಕಂಕುಳಲ್ಲಿ ಧರಿಸುತ್ತಿದ್ದೆ, ಆದರೆ ಜನಿವಾರ ಇನ್ನೂ ಕೊರಳಲ್ಲಿತ್ತು. ಆದರೆ ಮನಸ್ಸಿನಲ್ಲಿ ವಿಚಾರದ ಕ್ರಾಂತಿ ಭುಗಿಲೇಳುತ್ತಿತ್ತು. ಸಿಕ್ಕಿದವರೆದುರಿಗೆ, ಅವರು ಸ್ವಲ್ಪ ಕಿವಿಗೊಟ್ಟು ಕೇಳುವರೆಂದು ಗೊತ್ತಾದರೆ ಸಾಕು, ನನ್ನ ಆಲೋಚನೆಗಳನ್ನು ತೋಡಿಕೊಳ್ಳುತ್ತಿದ್ದೆ.

ವಿಶೇಷವಾಗಿ ಈ ಜಾತಿಗಳ ವಿಚಾರ ನನ್ನ ತಲೆ ಕೊರೆಯುತ್ತಿತ್ತು. ಕೆಲವರು ಹುಟ್ಟಿದ ಕ್ಷಣದಿಂದಲೇ ಮೇಲು, ಮತ್ತೆ ಕೆಲವರು ಹುಟ್ಟಿದ ಕಾಲದಿಂದ ಕೀಳು! ಹುಟ್ಟು ವ್ಯಕ್ತಿಯ ಮುಂದಿನ ಭವಿಷ್ಯವನ್ನೆಲ್ಲ ನಿರ್ಧರಿಸಿಬಿಡುವುದು ಸರಿಯೇ– ಎಂಬ ಪ್ರಶ್ನೆ ಬಾಧಿಸುತ್ತಿತ್ತು. ಯೋಚನೆ ಮಾಡಿದರೆ ಮನುಷ್ಯರಲ್ಲಿ ಈ ವ್ಯತ್ಯಾಸಗಳು ಕಾಣಿಸುತ್ತವೆ, ಪ್ರಾಣಿಗಳಲ್ಲಿ ಏಕಿಲ್ಲ ಎನಿಸುತ್ತಿತ್ತು. ಮನುಷ್ಯನೂ ಪ್ರಾಣಿಯೇ ಅಲ್ಲವೇ? ಹಸಿವು ನಿದ್ದೆ ಮೈಥುನ, ರಾಗದ್ವೇಷಗಳು ಎಲ್ಲರಿಗೂ ಸಮಾನವಲ್ಲವೇ? ಪ್ರಾಣಿಗಳಲ್ಲಿಯೂ ಇವೆಲ್ಲ ಇವೆ, ಮನುಷ್ಯರಲ್ಲೂ ಇವೆ. ಪ್ರಾಣಿ–ಮನುಷ್ಯನ ನಡುವಣ ವ್ಯತ್ಯಾಸ ಮನುಷ್ಯ ಯೋಚಿಸಬಲ್ಲ ಎಂಬುದಷ್ಟೇ ಅಲ್ಲವೇ? ತಾನು ಯೋಚನೆ ಮಾಡಬಲ್ಲವನಾದ್ದರಿಂದ, ತಂತ್ರ ಹೂಡಿ ಸಾಮಾನ್ಯ ಜನರನ್ನು, ಮುಗ್ಧರನ್ನು ಕತ್ತಲಲ್ಲಿ ನೂಕುವ ಚಾಣಾಕ್ಷತನವಲ್ಲವೇ ಈ ಜಾತಿವ್ಯವಸ್ಥೆಯ ಹಿಂದಿರುವುದು ಎನಿಸುತ್ತಿತ್ತು. ಗಂಡು–ಹೆಣ್ಣುಗಳ ಕೂಟದಿಂದ ಜೀವ ಉತ್ಪತ್ತಿಯಾಗುತ್ತದೆ, ಹೆಣ್ಣಿನ ರಜಸ್ಸು ಗಂಡಿನ ವೀರ್ಯದ ಸಮಾಗಮ ಜೀವದ ಆವಿಷ್ಕಾರಕ್ಕೆ ಭೂಮಿಕೆ, ಆಮೇಲೆ ಮಗುವಿನ ಹುಟ್ಟು, ಬೆಳವಣಿಗೆ; ನಿಧಾನವಾಗಿ ವ್ಯಕ್ತಿ ಬೆಳೆಯುತ್ತಾ ಹೋದಂತೆ ಜೀವನದಲ್ಲಿ ಅವನು ಪಡೆಯುವ ನೂರಾರು ಅನುಭವಗಳು; ಕೊನೆಗೆ ಅವನ ಸಾವು – ಇವೆಲ್ಲ ಎಲ್ಲ ಮನುಷ್ಯರಿಗೂ ಒಂದೇ ಅಲ್ಲವೇ? ವ್ಯತ್ಯಾಸವೆಲ್ಲಿದೆ ಹಾಗಾದರೆ? ನಾ[illegible] ಜೀವನಕ್ಕಾಗಿ, ಹೊಟ್ಟೆ ಹೊರೆಯಲು ಮಾಡುವ ವೃತ್ತಿಯಲ್ಲಿಯೇ ಅಲ್ಲವೇ? ಆದ್ದರಿಂದ ಜಾತಿಗಳು ವೃತ್ತಿ ಮೂಲದವು ಎನ್ನಿಸಿತ್ತು. ಎಷ್ಟೋ ಜನರೊಂದಿಗೆ ಆಗೆಲ್ಲ ಚರ್ಚಿಸುತ್ತಿದ್ದೆ. ಹಲವರು ಅದನ್ನು ಆವೇಶದಿಂದ ವಿರೋಧಿಸುತ್ತಿದ್ದರು; ಜಾತಿಗಳು ದೈವಸೃಷ್ಟಿಯೆಂದು ವಾದಿಸುತ್ತಿದ್ದರು. ಮತ್ತೆ ಕೆಲವರು ನೀವು ಹೇಳುವುದು ಯೋಚನೆ ಮಾಡಬೇಕಾದ ವಿಚಾರವೆಂದು ಒಪ್ಪುತ್ತಿದ್ದರು; ಆದರೆ ಅವರಲ್ಲಿ ಬಹುಮಂದಿ ಯೋಚಿಸುವ ಗೋಜಿಗೆ ಹೋಗುತ್ತಿರಲಿಲ್ಲ, ಮತ್ತೂ ಕೆಲವರು "ಏನೋಪ್ಪ, ನಮಗೆ ಅಷ್ಟೆಲ್ಲ ಯೋಚಿಸಲು ಬರುವುದಿಲ್ಲ, ಯೋಚಿಸಿ ಮಾಡಬೇಕಾದ್ದೇನು? ತಿಳಿದವರು ಹಿರಿಯರು ಹೇಳಿದಂತೆ ನಡೆದುಕೊಂಡರೆ ಸಾಕು, ಅದೇ ನಮಗೆ ಶ್ರೇಯಸ್ಕರ" ಎಂದು ತಿಪ್ಪೇಸಾರಿಸಿಬಿಡುತ್ತಿದ್ದರು. ಆದರೆ ಕೆಲವು ಗಟ್ಟಿ ಕಾಳುಗಳು. ವಿಚಾರದ ಭೂಮಿ, ಚರ್ಚೆಯ ನೀರು, ಸಹವಾಸದ ಗೊಬ್ಬರಗಳಿಂದ ಹೊಸ ಚೈತನ್ಯ ಮೂಡಿ ಕ್ರಾಂತಿಯ ಮೊಳಕೆಯೊಡೆಯಲು ಕಾರಣವಾಗಿತ್ತು. ಚನ್ನಬಸವ ಹದಿನಾಲ್ಕು ವರ್ಷದ ಹುಡುಗನಾದರೂ ಎಷ್ಟು ಚುರುಕು ಇಂಥ ವಿಷಯಗಳಲ್ಲಿ!

ಚನ್ನಬಸವನೆಂದು ನೆನಪಿಗೆ ಬಂದಾಗ ಹೇಳಹೊರಟಿದ್ದು ಜ್ಞಾಪಕಕ್ಕೆ ಬರುತ್ತಿದೆ. ಏನೋ ಹೇಳಹೊರಟು ಏನನ್ನೋ ಹೇಳಿದೆ. ಮನಸ್ಸೇ ಹೀಗೆ. ಒಂದು ಎಳೆ ಹಿಡಿದು ಹೊರಟು ಎಷ್ಟೆಷ್ಟೋ ಎಳೆಗಳನ್ನು ದಾಟಿಬಿಟ್ಟಿರುತ್ತದೆ. ಕೆಲವು ವೇಳೆ ಹಾರುವುದು ಬೇರೆ,. ಕೋತಿ ರೆಂಬೆಯಿಂದ ರೆಂಬೆಗೆ ಹಾರುತ್ತದಲ್ಲ ಹಾಗೆ? ಅದಕ್ಕೆ ಈ ಮನಸ್ಸನ್ನು ಒಂದೆಡೆ ಕಟ್ಟಿಹಾಕುವುದೆಂದರೆ

ಬಹುಪ್ರಯಾಸದ ಕೆಲಸ, ಗಾಳಿಯನ್ನು ಹಗ್ಗದಲ್ಲಿ ಕಟ್ಟಿದಂತೆ! ಅದಕ್ಕೇ ಚಿತ್ತೈಕಾಗ್ರತೆಯನ್ನು ತಪಸ್ಸು ಎಂದು ಕರೆಯುತ್ತಾರೆಂದು ಕಾಣುತ್ತದೆ.

ಮತ್ತೆ ಚನ್ನಬಸವನಿಂದ ಯೋಚನೆಗಳು ಎತ್ತಲೋ ಸಾಗುತ್ತಿವೆ. ಹ್ಞಾ, ಅಂದು ಮಂಗಳವಾಡದ ಊರ ಹೊರಗಿನ ಹೊಲಗೇರಿಗೆ ನಾವಿಬ್ಬರೂ ಹೋದೆವು. ಹೋದಕಾರಣ ಅಲ್ಲೊಂದು ಸಭೆ ನಡೆಸಿ, ಆ ನತದೃಷ್ಟರನ್ನು ಒಟ್ಟಿಗೆ ಕೂರಿಸಿ ಜಾತಿಯ ಬಗ್ಗೆ ನನ್ನ ಮನಸ್ಸಿನಲ್ಲಿ ಮೂಡಿದ ಭಾವನೆಗಳನ್ನು ಅವರಿಗೆ ವಿವರಿಸಿ, ನೀವೂ ಮನುಷ್ಯರೇ, ಜಾಣರು ಹೂಡಿದ ತಂತ್ರದ ಕಾರಣದಿಂದಾಗಿ ನೀವು ಇಲ್ಲಿ ಹೀಗೆ ಇದ್ದೀರಿ. ಮೇಲು ಜಾತಿಯ ಜನಗಳಿಗೆ ಇರುವುದು ಯಾವುದು ನಿಮ್ಮಲ್ಲಿಲ್ಲ? ಅವರೂ ನಿಮ್ಮ ಹಾಗೆಯೇ ಹುಟ್ಟಿದವರು. ಯಾರಾದರೂ ಕಿವಿಯಲ್ಲಿ ಹುಟ್ಟುತ್ತಾರೆಯೇ? ಎಂದೆಲ್ಲ ಹೇಳಿ, ತಮಾಷೆ ಮಾಡಿ, ಅವರನ್ನು ರೊಚ್ಚಿಗೆಬ್ಬಿಸಿ ಒಂದು ಹೊಸ ವ್ಯವಸ್ಥೆ ಬರಲು ಪ್ರಯತ್ನಿಸಬೇಕು ಎಂಬ ಕನಸು ನನ್ನದು. ಚನ್ನಬಸವನಿಗೆ ಅದೆಲ್ಲ ಆಗ ಎಷ್ಟು ದಕ್ಕುತ್ತಿತ್ತೋ ತಿಳಿಯದು. ಆದರೆ ಅಂಥ ಆಲೋಚನೆಗಳ ಪ್ರವಾಹದಲ್ಲಿಯೇ ಚಿಕ್ಕವಯಸ್ಸಿನಿಂದ ತೇಲಿಕೊಂಡು ಬಂದ ಅವನಂತೂ ಮುಂದೆ ಭೋರ್ಗರೆಯುವ ಪ್ರವಾಹವೇ ಆಗಿಬಿಟ್ಟನಲ್ಲ!

ನಾವು ಅಲ್ಲಿ ಹೋದಾಗ ಸಂಜೆ. ಹೊತ್ತು ಇನ್ನೂ ಮುಳುಗಿರಲಿಲ್ಲ. ನನ್ನ ಯೋಚನೆಗಳನ್ನು ಭೇಟಿಯಾದ ಯುವಕರ ಜೊತೆ ಈವರೆಗೆ ನಾನು ಚರ್ಚೆ ಮಾಡುತ್ತಿದ್ದೆ. ಎಷ್ಟೋ ಮಂದಿ ಹುರಿದುಂಬಿಸುತ್ತಿದ್ದರು. ನಿಮ್ಮ ಜೊತೆ ನಾವಿದ್ದೇವೆ ಹೊಸದಾಗಿ ಏನನ್ನಾದರೂ ಮಾಡೋಣ ಎನ್ನುತ್ತಿದ್ದರು. ನೀವು ಮುಂದೆ ನಡೆಯಿರಿ, ನಾವು ಹಿಂಬಾಲಿಸುತ್ತೇವೆ ಎನ್ನುತ್ತಿದ್ದರು. ಆದರೆ ಅವರಲ್ಲಿ ಎಷ್ಟೋ ಜನರನ್ನು ಮುಂದೆ ಭೇಟಿಯಾಗುತ್ತಿರಲಿಲ್ಲ. ಅದೃಷ್ಟವಶಾತ್ ರಾಜ್ಯದ ಬೊಕ್ಕಸದ ಮನೆಯೆಂದರೆ ಸಾವಿರಾರು ಜನರು ಬರುವ ಜಾಗ. ಅದರಲ್ಲೂ ಸಮಾಜದ ವರಿಷ್ಠರು, ಬುದ್ಧಿವಂತರು, ಹಿರಿಯ ಅಧಿಕಾರಿಗಳು ಹೆಚ್ಚು. ನನ್ನಿಂದ ಸಹಾಯ ಪಡೆಯಲು ಕೆಲವರಾದರೂ ನನ್ನನ್ನು ಹೊಗಳುತ್ತಿದ್ದಿರಬೇಕು, ಆದರೆ ಎಷ್ಟೋ ಜನ ಪ್ರಾಮಾಣಿಕರು ಇಲ್ಲದಿದ್ದರೆ ಆಗ ಬುಗ್ಗೆಯಾಗಿ ಪ್ರಾರಂಭವಾದ ನಮ್ಮ ಚಳುವಳಿ ಈಗಿನ ಹಂತಕ್ಕೆ ತಲುಪಲು ಸಾಧ್ಯವಾಗುತ್ತಿತ್ತೇ! ಕೆಲವರು "ನಿಮ್ಮ ವಿಚಾರಗಳು ಯಾರನ್ನು ತಲುಪಬೇಕೋ ಅವರಿಗೆ ಹೇಳಬೇಕು" ಎಂದು ಹೇಳಿದರು. ನಮ್ಮ ಬಳಿ ಏಕೆ ಹೇಳುತ್ತೀರಿ ಎಂದು ಹೀಗೇಳೆಯುವುದಕ್ಕೋ, ಅಥವಾ ಪ್ರಾಮಾಣಿಕವಾಗಿಯೋ ಅಂತು ಅದು ನನ್ನ ಮನಸ್ಸಿನಲ್ಲಿ ನಾಟಿತು. ಹಾಗಾಗಿ ಸಮಾಜದಲ್ಲಿ ತುಂಬ ಕೆಳಗೆ, ಊರಿನಿಂದ ಹೊರಗೆ ವಾಸಿಸುವ ಈ ಜನರಿಗೆ ಇವನ್ನೆಲ್ಲ ಹೇಳಬೇಕೆಂಬ ಉತ್ಸಾಹ ನನ್ನಲ್ಲಿ ಅದಮ್ಯವಾಗಿತ್ತು.

ಇಂಥ ಕೇರಿಗೆ ನಾನು ಬಂದಿರಲೇ ಇಲ್ಲ. ಹುಟ್ಟಿದಾಗಿನಿಂದ ಅವರೆಗೆ ಅಂಥ ಅವಕಾಶವೇ ಬಂದಿರಲಿಲ್ಲ. ನನ್ನ ಬಳಿಗೆ ಅವರೆಲ್ಲ ಹೇಳಿಕಳಿಸಿದರೆ

ಬರುವ ಜನ, ನನ್ನ ಜಾತಿ ಅಂಥದ್ದಲ್ಲವೇ! ಹೀಗಾಗಿ ಆ ಜನಗಳು ವಾಸಿಸುವ ಪರಿಸರದ ಜ್ಞಾನವೇ ನನಗಿರಲಿಲ್ಲ. ಆ ಕೇರಿಯ ಮುಂದೆ ಹೋಗುವಾಗ ಹೊರಗಿನಿಂದ ಕಂಡದ್ದೆಷ್ಟೋ ಅಷ್ಟೆ, ಒಳಗೆ ಏನಿದೆ ಎಂಬ ಅರಿವಿರಲಿಲ್ಲ.

ಉತ್ಸಾಹದ ಭರದಲ್ಲಿಯೂ, ನನ್ನ ಮೂಲಭೂತಗುಣವಾದ ನೇರ ವ್ಯವಹಾರದ ರೀತಿಯ ಕಾರಣದಿಂದಲೂ, ಇಂಥದ್ದೆಲ್ಲ ನನ್ನ ಅನುಭವಕ್ಕೆ ಬಾರದುದರಿಂದಲೂ ವ್ಯವಸ್ಥಿತವಾಗಿ ಕೆಲಸ ಮಾಡುವುದು ಬಿಟ್ಟು ಭಾವನೆಯ ದಾರಿ ಹಿಡಿದು ಅಲ್ಲಿಗೇ ನೇರವಾಗಿ ಹೋಗಲು ನಿರ್ಧರಿಸಿದೆ. ಜೊತೆಗಿರಲಿ ಎಂದು ಚನ್ನಬಸವನನ್ನು ಕರೆದೊಯ್ದೆ. ಬೊಕ್ಕಸದ ಮನೆಯಿಂದ ನಮ್ಮ ಮನೆಗೆ ಬಂದವನೆ ಕಾರ್ಯಪ್ರವೃತ್ತನಾದೆ. ಅವನೊಡನೆ ಏನನ್ನೂ ವಿವರಿಸದೆ "ಬಾ ಒಂದು ಕಡೆ ಹೋಗೋಣ" ಎಂದು ಜೊತೆಗೆ ಕರೆದೊಯ್ದೆ. ಸೋದರ ಮಾವನೆಂದರೆ ಅವನಿಗೆ ಎಲ್ಲಿಲ್ಲದ ಅಕ್ಕರೆ. ನಾನಲ್ಲದೇ, ಅವನ ತಾಯ ಹೊರತು ಅವನಿಗೆ ಇನ್ನಾರು ದಿಕ್ಕು? ಇನ್ನಾರು ಅವನಿಗೆ ಹೇಳುವವರು, ಕೇಳುವವರು?

ಕೇರಿಗೆ ಬರುವ ಹೊತ್ತಿಗೆ, ಆಗಲೇ ಹೇಳಿದಂತೆ, ಹೊತ್ತು ಮುಳುಗುವ ಸಮಯ, ಸೂರ್ಯನ ಕೆಂಪು ಪಡುವಲ ಆಗಸದ ಮೇಲೆಲ್ಲ ಹರಡಿದೆ. ಮಧ್ಯಾಹ್ನವೆಲ್ಲ ಜಳಜಳ ಸುರಿದಿದ್ದ ಬಿಸಿಲಿನಿಂದ ಕಾದಿದ್ದ ಭೂಮಿ ಇನ್ನೂ ದುಮುಗುಡುತ್ತಿದೆ. ಗಾಳಿಯಂತು ಎಲ್ಲಿಯೋ ಅವಿತುಕೊಂಡಿರುವಂತೆ, ಸೂರ್ಯ ಹೋಗುವವರೆಗೂ ತಾನು ಬರಲಾರೆ ಎಂಬಂತೆ; ಅದರ ಸುಳಿವೇ ಇಲ್ಲ. ಕೊಟ್ಟಿಗೆಗೆ ವಾಪಸ್ಸಾಗುತ್ತಿರುವ ದನಗಳ ಅಂಬಾ ಧ್ವನಿ; ಆಮೇಲೆ ನಾನಾ ಆಕಾರಗಳಲ್ಲಿ ಗುಂಪುಗಟ್ಟಿ ಹಾರುವ ಹಕ್ಕಿಗಳು, ಕೆಳಗೆ ಗೊರಸಿನ ಹೊಡೆತಕ್ಕೆ ಎದ್ದ ದೂಳಿನಿಂದ ಕೂಡಿದ ಎರೆಭೂಮಿ ಬಿಗುವಿನಿಂದ ಕೂಡಿದ್ದರೆ, ಮೇಲೆ ಕಪ್ಪಾಗತೊಡಗಿರುವ ಆಕಾಶದ ಬಿಗುಮಾನ. ಅಂತೂ ಬಂದೆವು. ಹಟ್ಟಿಯ ಒಳಗೆ ಬಂದೆವು. ಒಂದು ಮಂಟಪ ಹೋದ ತಕ್ಷಣವೇ. ಯಾವುದೋ ಗುಡಿಯಿರಬೇಕು. ಅದರ ಒಳಗೆಲ್ಲ ಆಗಲೇ ರಾತ್ರಿ ಕಾಲಿರಿಸಿತ್ತು, ಗವ್‌ಗುಡಲು ಪ್ರಾರಂಭಿಸಿತ್ತು.

ನಾವಿಬ್ಬರೂ ಅಲ್ಲಿಗೆ ಹೋದೆವು. ಗುಡಿಯ ಜಗಲಿಯ ಹಿಂಭಾಗದಲ್ಲಿ ನಿಂತೆವು. ನಾವು ಅಲ್ಲಿಗೆ ಬಂದದ್ದನ್ನು ಒಂದೆರಡು ಚಿಣ್ಣರು ಗಮನಿಸಿದರೆಂದು ತೋರುತ್ತದೆ. ನಮ್ಮ ಬಳಿ ಬಂದರು. ನಾವು ಹಾಕಿಕೊಂಡಿದ್ದ ಶುಭ್ರವಾದ ಬಣ್ಣಬಣ್ಣದ ಬಟ್ಟೆಗಳು ಅವರನ್ನು ಆಕರ್ಷಿಸಿದ್ದಿರಬೇಕು. ಅಥವಾ ಅಪರಿಚಿತರಾದ ವ್ಯಕ್ತಿಗಳೆಂದೋ. ಗುಡಿಯ ಬಳಿ ಬಂದರು ಅವರು, ಹತ್ತಿರ ಬರಲಿಲ್ಲ. ದೊಡ್ಡವರಂತೂ ಯಾರೂ ನಮ್ಮತ್ತ ನೋಡಲೇ ಇಲ್ಲವೇನೋ.

ಅಲ್ಲಿ ಹೋಗಿಯೇನೋ ಆಗಿದೆ. ಆದರೆ ಏನು ಮಾಡಬೇಕು, ಹೇಗೆ ಜನಗಳನ್ನು ಸೇರಿಸಬೇಕು ಎಂಬ ವ್ಯವಹಾರ ಜ್ಞಾನವಿರಲಿಲ್ಲ. ಕ್ಷಣ ಕಾಲ ದಿಕ್ಕು ತೋಚದಂತಾಯ್ತು. ಚನ್ನಬಸವನಿಗಂತೂ ಮತ್ತೂ ಕಕ್ಕಾವಿಕ್ಕಿಯಾಗುವಂತೆ.

ಇನ್ನೂ ಗಂಭೀರವಾಗಿ ಆಲೋಚಿಸಲಾರದ ವಯಸ್ಸು, ಜೊತೆಗೆ ಏನೂ ಹೇಳದೆ, ನಾನು ಕರೆದುಕೊಂಡು ಬಂದಿದ್ದೆ. ನನ್ನ ವಿಚಾರ ಸರಣಿಯನ್ನು ಅರ್ಥೈಸಿಕೊಳ್ಳಬಲ್ಲ ಪ್ರೌಢತೆ ಹೇಗೆ ಅವನಿಗೆ ಇಷ್ಟು ಬೇಗ ಸಾಧ್ಯ? ನಾನು ಸುಮ್ಮನೆ ಎಂದು ಜೊತೆಗೆ ಅವನನ್ನು ಕರೆತಂದಿದ್ದೆ. ಅದಕ್ಕೆ ಜಗಲಿಯ ಮೇಲೆ ನಿಂತಾಗ "ಇಲ್ಲಿ ಯಾಕೆ ಮಾವ?" ಎಂದು ಕೇಳಿದ.

"ಸ್ವಲ್ಪ ಕೆಲಸ ಇದೆ. ತಾಳು ನಿನಗೇ ಗೊತ್ತಾಗತ್ತೆ" ಎಂದು ಹೇಳಿದ ತನಗೆ ಕರ್ತವ್ಯಪ್ರಜ್ಞೆ ಜಾಗೃತವಾಯಿತು. ಮಾಡಬೇಕಾದದ್ದೇನು ಎಂಬುದು ಗೊತ್ತಿದ್ದರೂ, ಹೇಗೆ ಎಂಬ ಅರಿವಿರಲಿಲ್ಲ. ಆದರೆ ಏನಾದರೂ ಮಾಡಬೇಕಲ್ಲ, ಈಗ. ಹತ್ತಿರ ಬಂದಿದ್ದ ಹುಡುಗರ ಕಡೆಗೆ ತಿರುಗಿ "ಅರಮನೆ ಕಡಿಂದ ಯಾರೋ ಬಂದವ್ರೆ, ನಿಮ್ಮ ಕೂಟ ಮಾತಾಡಬೇಕಂತೆ ಅಂತ ನಿಮ್ಮಪ್ಪದೀರನ್ನ ಕರಕೊಂಬರ್ರಿ ಹೋಗ್ರಲ್ಲಾ" ಎಂದು ಅವರಿಗೆ ಹತ್ತಿರವಾಗಲು ಅವರ ಭಾಷೆ ಅನುಸರಿಸಿ ಹೇಳಿದೆ. ಅರಮನೆ ಕಡಿಂದ ಬಂದಿದಾರೇಂತ ಹೇಳಿದ್ದು ನನ್ನ ಮಾತನ್ನು ದೊಡ್ಡವರು ಅಲಕ್ಷಿಸಬಾರದು ಎಂಬ ಕಾರಣದಿಂದ ಇದ್ದೀತು. ಆ ಮಕ್ಕಳೋ ಚಿಕ್ಕವು ದೊಡ್ಡವು ಎಲ್ಲ ಒಂದೇ ತರಹ. ಹಣತೆಗಳಂತಹ ಕಣ್ಣುಗಳನ್ನು ಬಿಟ್ಟರೆ ಮಿಕ್ಕವೆಲ್ಲ ಕತ್ತಲೆ ರೀತಿ. ಕೆಲವು ಬತ್ತಲೆ, ಮತ್ತೆ ಕೆಲವಕ್ಕೆ ಚಿಂದಿ ಬಟ್ಟೆ. ತಲೆ ಕೆದರಿದವೇ ಎಲ್ಲವೂ. ಜೊಲ್ಲು, ಗೊಣ್ಣೆ ಧಾರಾಕಾರವಾಗಿ ಅನೇಕ ಚಿಳ್ಳೆಪಿಳ್ಳೆಗಳ ಮುಖದ ಮೇಲೆ. ಕಣ್ಣುಗಳಲ್ಲಿ ಕುತೂಹಲ, ಭಯ ಎಲ್ಲ ಸೇರಿದ್ದವು. ನಾನು ಹೇಳಿದ್ದು ಚಿಕ್ಕ ಮಕ್ಕಳ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ, ಸಹಜವೇ. ಆದರೆ ಒಂದಿಬ್ಬರು ದೊಡ್ಡ ಹೈದರಿದ್ದರಲ್ಲ, ಅವರಿಗೆ ಏನೋ ಅರ್ಥವಾಗಿರಬೇಕು; ಓಡಿಹೋದವು.

ಕೆಲವು ನಿಮಿಷಗಳಾದ ಮೇಲೆ ಒಂದಿಬ್ಬರು ದೊಡ್ಡವರು ಬಂದರು, ತೀರ ಹಿರಿಯರೇನಲ್ಲ. ಯುವಕರೆಂದೇ ಹೇಳಬೇಕು. ಬಂದವರೇ "ನಮಸ್ಕಾರ ಒಡೆಯರಿಗೆ" ಅಂದರು. ನಾನು ಪ್ರತಿ ನಮಸ್ಕಾರ ಮಾಡಿದೆ. ಹತ್ತಿರ ಬನ್ನಿ ಎಂದೆ. ಅವರು ಬರಲು ಹಿಂಜರಿದರೂ ಜಗಲಿಯ ಬುಡದಲ್ಲಿ ನಿಂತರು, "ಏನ್ರ ಇಚಾರ?" ಎಂದರು.

"ಏನ್ರಯ್ಯಾ, ನೀವಿಷ್ಟೇ ಜನವಾ ಕೇರಿಲಿರೋದು?" ಎಂದೆ. ಮನಸ್ಸಿನಲ್ಲಿ ಬೇಸರವಿರದಿದ್ದರೂ ಧ್ವನಿ ಸ್ವಲ್ಪ ಗಡುಸಾಗಿರಬೇಕು.

"ಊನ್ರಿ ಒಡೆಯರ, ತಾವು ಬರೋ ಇಸಯ ಮೊದಲೇ ತಿಳಿದಿದ್ದರೆ ಇಲ್ಲೇ ಬಿದ್ದಿರೋವು ಎಲ್ಲ" ಅಂದ ಅದರಲ್ಲೊಬ್ಬ.

"ಅಂದರೆ ಮನೇ ದೊಡ್ಡೋರೆಲ್ಲ ಒಳಗಿಲ್ಲವೇನ್ರಯ್ಯಾ?" ಎಂದೆ. ನಾನು ಜಗಲಿಯ ಮೇಲಿದ್ದೆ, ಕೇಳುತ್ತಿದ್ದ ಯುವಕರು ಕೆಳಗಿದ್ದರು; ನಾನು ತಲೆಗೆ ನೀಟಾಗಿ ಮುಂಡಾಸು ಸುತ್ತಿದ್ದೆ; ಅವರಲೊಬ್ಬ ಹರಕಲು ಕೊಳಕಲು ವಲ್ಲಿ ತಲೆಗೆ ಸುತ್ತಿದ್ದ; ಮಿಕ್ಕವರದು ಬರಿದಲೆ. ಸಹಜ. ನನ್ನ ಧ್ವನಿ ಸ್ವಲ್ಪ ಅಸಮಾಧಾನದ ನೆರಳಿನಡಿ ಬಂದಿತೆನ್ನಿಸಿತು. ನಾನು ಗಾಬರಿಗೊಂಡೆ:

ಇದೇನು, ನಾನು ಹೀಗೆ ಆಡುವುದಕ್ಕೆ ಹೊರಟೆನಲ್ಲ. ನಾನು ಬಂದದ್ದೇಕೆ, ಜನರನ್ನು ಕಂಡು ಮಾತಾಡುವ ಧಾಟಿ ಯಾವುದು? ತಾಳೆಯೇ ಇಲ್ಲ. ಇದೇ ಇರಬಹುದೇ ಈ ಹುಟ್ಟಿನ ಸ್ವಭಾವ. ಯಾವ ಕಾರಣವೂ ಇಲ್ಲದೆ ಅವರ ಮೇಲೆ ಧ್ವನಿ ಏರಿಸಿದೆನೆ? ನನ್ನನ್ನೇನೂ ಅವರು ಬರಹೇಳಲಿಲ್ಲ, ನಾನೇ ಬಂದವನು. ಬರುವುದಾಗಿ ಹೇಳಿಯೂ ಇರಲಿಲ್ಲ. ಅವರದೇನು ತಪ್ಪು? ಅದೂ ಅವರಿಗೆ ಏನೇನೋ ಹೇಳಿ, ಅವರಲ್ಲಿ ಆತ್ಮವಿಶ್ವಾಸ ಮೂಡಿಸುವ ಉದ್ದೇಶವಲ್ಲವೇ ನನ್ನಲ್ಲಿದ್ದದ್ದು? ಅಯ್ಯೋ ಪ್ರಾರಬ್ಧವೇ? ನನ್ನ ಮೇಲೆ ನನಗೆ ವಿಪರೀತ ಸಿಟ್ಟು ಬಂತು. ಯಾವುದೇ ಅಧಿಕಾರವಿಲ್ಲದಿದ್ದರೂ ನಾನು ಹೀಗಾಡುವಂತೆ ಮಾಡುವುದು ಯಾವುದು? ಮೈಪರಚಿಕೊಳ್ಳುವಂತಾಯಿತು. ಇತರರ ನಡಿಗೆ, ಹಸನಾಗುವಂತೆ ಮಾಡಲು ಪಣತೊಟ್ಟ ಹಾವುಗೆ ಕಲ್ಲು ಮುಳ್ಳು ಮೆಟ್ಟಿದರೆ ಯಾರನ್ನು ಬೈಯುವುದು? ನಾನೇ ಉದ್ಧಾರಕತನವನ್ನು ಆವಾಹಿಸಿಕೊಂಡು ಇವರ ಬಗ್ಗೆ ಹೇಗೆ ವರ್ತಿಸಲು ತೊಡಗಿದೆನಲ್ಲ! ನನ್ನ ವರ್ತನೆಯ ಕಾಠಿಣ್ಯ ಹೊರಗೆ ಸ್ಪಷ್ಟವಾಗಿ ಕಾಣುವಷ್ಟು ಇರಲಿಲ್ಲವೆನ್ನುವುದು ನಿಜ. ಆದರೆ ನನ್ನೊಳಗಿನ ಮನಸ್ಸು? ಅತ್ತಿಯ ಹಣ್ಣಲ್ಲವೇ ಮನಸ್ಸು ಎನ್ನುವುದು; ಒಳಗಿನ ಹುಳುಗಳ ರಾಶಿ ಹೊರಗೆ ಹೇಗೆ ಕಾಣಬೇಕು. ಅದೂ ಈ ಜನರಿಗೆ? ಇತರರು ಅವಾಚ್ಯವಾದ ಮಾತಾಡಿದರೂ ಹಸಾದವೆಂಬಂತೆ ಸ್ವೀಕರಿಸುವ ಇವರಿಗೆ ನನ್ನ ಧ್ವನಿಯ ಅತಿಸೂಕ್ಷ್ಮ ಏರು ಕೇಳಿಸಿರಲು, ಗಮನಕ್ಕೆ ಬಂದಿರಲು ಸಾಧ್ಯವೇ ಇಲ್ಲ. ಇಲ್ಲ, ಇಲ್ಲ. ಇದು ಮುಂದುವರಿಯಲು ಬಿಡಬಾರದು. ನನ್ನ ಈ ಹುಟ್ಟಿನ ಕಾರಣದಿಂದ ಮೂಡಬಹುದಾದ ಅಹಂಕಾರವನ್ನು, ಅಸಹನೆಯನ್ನು ಮೆಟ್ಟಿ ನಿಲ್ಲುಬೇಕು, ಇಲ್ಲದಿದ್ದರೆ ನಾನು ಏನು ದೊಡ್ಡ ಘೋಷಣೆ ಹಾಕಿದರೂ ಅದು ಅಪ್ರಾಮಾಣಿಕತೆಯಾಗುತ್ತದೆ. ಸ್ವಲ್ಪ ಹೊತ್ತಿನಲ್ಲಿ ಸಾವರಿಸಿಕೊಂಡೆ.

"ಇಲ್ಲಯ್ಯಾ" ಎಂದ ಅವರಲ್ಲೊಬ್ಬ.

"ಇಷ್ಟು ಹೊತ್ತಿನಲ್ಲಿ ಎಲ್ಲಿಗೆ ಹೋಗ್ತಾರೆ, ಕೆಲಸ ಮುಗಿಸಿ ಮನೆಗೆ ಬರಬೇಕಲ್ಲ!" ಮುಗ್ಧತೆಯ ಮುದ್ದೆ ನಾನಾಗ!

"ಇಂಗೇ ಓಗವರೆ ಒಡೆಯ. ಸಂಜೆ ಅಂದರೆ ಇರ್ತದಲ್ಲ, ಬಾಯಾರಿಕೆ!"

ಓ, ಈಗ ಅರ್ಥವಾಯಿತು! ನನ್ನ ಮಂಕು ಬುದ್ಧಿಯೇ! ನಾನು ತುಳಿಯಬೇಕಾದ ದಾರಿಯ ತುಂಬ ಕಲ್ಲು ಮುಳ್ಳುಗಳು, ನಾನಾ ಬಗೆಯ ಅಡ್ಡಿಗಳು. ಒಂದು ತೆಗೆಯಲು ಹೋದರೆ ಮತ್ತೊಂದೆಡೆ ಚುಚ್ಚುವ ಮುಳ್ಳು, ಮತ್ತೊಂದು ಬಗೆಯ ಮುಳ್ಳು. ನನಗೆ ಇವೆಲ್ಲ ನಿಭಾಯಿಸಲು ಸಾಧ್ಯವೇ ಎಂಬ ದೊಡ್ಡ ಪ್ರಶ್ನೆಯ ಬಂಡೆ ಉರುಳುರುಳಿ ಬಂತು. ಇಷ್ಟು ಬೇಗ ಹಿಂದೆಗೆಯುವ ಕನಿಷ್ಠತನವೇ ನನ್ನದು ಎಂಬ ಆತ್ಮಪ್ರತ್ಯಯ ಕುಸಿಯುತ್ತಿದ್ದ ಚೈತನ್ಯವನ್ನು ಮೇಲಕ್ಕೆ ಹಿಡಿದು ನಿಲ್ಲಿಸಿತು. ತಾಳ್ಮೆ, ಸಹನೆ, ನಿಧಾನತೆ–ಇವೆಲ್ಲ ಎಷ್ಟು ಆವಶ್ಯಕ– ಸುಧಾರಣೆಯ ದಾರಿಯಲ್ಲಿ ಸಾಗುವವನಿಗೆ!

"ಇಲ್ಲೇ ಮೇಲೆ ಬನ್ನಿ ಸ್ವಲ್ಪ ಮಾತಾಡೋದಿದೆ" ಎಂದೆ.

ಉಹ್ಞೂ ಒಬ್ಬನಾದರೂ ಮೇಲೆ ಬಂದರೆ! ಪೆದ್ದಾಗಿ ನಕ್ಕರು, ನಿಂತಲ್ಲೇ ನಿಂತರು.

ಏನೇನೋ ಮಾತನ್ನು ಆಡಿದೆ. ಹಟ್ಟಿಯಲ್ಲಿ ಎಷ್ಟು ಮನೆಗಳು ಇವೆ. ಹಿರಿಯ ಯಾರು? ಏನೇನು ಕೆಲಸ ಮಾಡುತ್ತೀರಿ ಇತ್ಯಾದಿ ಲೋಕಾಭಿರಾಮ. ಸ್ವಲ್ಪವೇ ಹೊತ್ತು. ಒಬ್ಬ ಯುವಕ ಧೈರ್ಯ ತಂದುಕೊಂಡವನಂತೆ ಹೇಳಿದ: "ಅದೇನು ಒಡೆಯರೆ, ಏಳೋ ಇಚಾರ, ಹೇಳಿ. ಮತ್ತೆ ನಾವೇ ಬೇರೇವ್ರಿಗೂ ಏಳ್ತೀವಿ. ತಾವು ಯಾಕೆ ಸುಮ್ನೆ ಕಾಯಾದು?" ಕೆಲವರಾದರೂ ಬರಲಿ ಎಂದ. ಒಂದಿಬ್ಬರು ಮತ್ತೆ ಬಂದು ಸೇರಿದರು. ಗುಸು ಗುಸು ಮಾತು. "ಯಾರಾದ್ರೂ ಬಂದಿದ್ರೆ ಕರ್ಕಂಬತ್ತೀವಿ" ಎಂದು ಮೊದಲೇ ಬಂದು ನಿಂತಿದ್ದ ಒಂದಿಬ್ಬರು ಹೊರಟರು. "ಒಗ್ರಲಾ, ನಿಮ್ಮಪ್ಪಯ್ಯಂದಿರು ಬಂದ್ರೆ ಕರಕೊಂಬನ್ನಿ, ಓಗಿ" ಎಂದು ಅಲ್ಲಿದ್ದ ಮಕ್ಕಳನ್ನು ಕಳಿಸಿದರು.

ಸೂರ್ಯ ಕಂತಿದ ಒಂದು ನಾಲ್ಕು ಗಳಿಗೆಯಾಗಿರಬೇಕು. ಕೆಲವರು ಬಂದು ಸೇರಿದರು. ಜಗಲಿಯ ಬುಡದಲ್ಲೇ ನಿಂತರು. ಬಂದವರೆಲ್ಲ ನಮಸ್ಕಾರ ಮಾಡಿದರು. "ಅಪ್ಪಣೆ ಕೊಡಿ ಒಡೆಯ" ಎಂದರು. ಬಾಯಿಬಿಟ್ಟರೆ ವಾಸನೆ, ಕತ್ತಲು ಆವರಿಸುವಂತೇ ಸುತ್ತೆಲ್ಲ ದಟ್ಟವಾಗಿ. ಕಾದು ಸಾಕಾಗಿತ್ತು. ವಾಕರಿಕೆ ಬರುವ ಹಾಗೆ ಈ ವಾಸನೆ ಬೇರೆ! ಆದರೇನು ಮಾಡುವುದು. ಇಲ್ಲಿನ ಸ್ಥಿತಿಗತಿ ತಿಳಿದವರ ನೆರವು ಪಡೆದು ಇಂಥ ಕಾರ್ಯಕ್ಕೆ ಕೈಹಾಕಬೇಕಾಗಿತ್ತು. ಹೊಳೆಯಲಿಲ್ಲ. ಆದರೆ ಬಂದು ಆಗಿದೆ. ಜನ ಕೆಲವರು ಸೇರಿದ್ದಾರೆ. ಕತ್ತಲೆಂದು ಒಂದು ಹಣತೆಯನ್ನು ಬೇರೆ ಜಗಲಿಯ ಮೇಲೆ ಯಾರೋ ತಂದಿಟ್ಟರು. ಅರಮನೆ ಕಡಿಯವರಂತೆ ಅಂದುಕೊಂಡರು ಜನ.

"ಅರಮನೆ ಕಡೆಯವರು ಅಂದ್ರೆ ಯಾವ ತರ ಒಡೆಯರೆ?" ಎಂದೊಬ್ಬ ಕೊನೆಗೂ ಕೇಳಿದ.

"ಬೊಕ್ಕಸದ ಮನೇಲಿ ನನ್ನ ಕೆಲಸ" ಎಂದೆ ಆದಷ್ಟೂ ಸಹಜವಾಗಿರಲು ಪ್ರಯತ್ನಿಸುತ್ತ.

"ಬೊಕ್ಕಸ ಅಂದರೆ?" ಒಂದು ಪ್ರಶ್ನೆ.

ವಿವರಿಸಿದೆ.

"ಅಂಗಾರೆ ಒಡೆಯರಿಗೆ ಮಸ್ತು ರೊಕ್ಕ" ಎಂದ ಒಬ್ಬ. ನನಗೆ ನಗು ಬಂತು. ನನ್ನ ನಗು ಕಂಡು ಉಳಿದ ಕೆಲವರೂ ನಕ್ಕರು. ನನ್ನ ಕೆಲಸದ ರೀತಿ ಏನು ಎಂದು ಹೇಳಿದೆ. ಬಂದದ್ದು ಹೋದದ್ದರ ಲೆಕ್ಕ ಇಡುವುದು. "ಓ" ಅಂದರು.

"ಅರಮನೆ ತಾವಕ್ಕೆ ಹೇಳಿಕಳಿಸಿದ್ದರೆ ಆಗ್ತಿತ್ತಲ್ಲ, ಒಡೆಯ" ಒಬ್ಬ ಮುದುಕನೆಂದ.

"ಯಾರ ಕೂಟಾದ್ರೂ ಏಳಿಕಳಿಸಕ್ಕೆ ಇಲ್ಲವ್ರಾ. ನಮ್ಮ ಹಿರಿಯ ಬಂದಿರೋನು. ವಿಷಯ ನಮಗೆ ಆಮೇಲೆ ಏಳೋವನು"

"ನಿಮ್ಮ ಹಿರಿಯ ಯಾರು?" ಎಂದೆ. ಒಬ್ಬ ಮುದುಕ ಬಂದ. "ನಿಮ್ಮ ಪಾದಕ್ಕೆ ಬಿದ್ದೆ. ಎಕ್ಕಡದಲ್ಲಿ ತೋರ್ಸಿ ಒಡೆಯ ಮಾಡ್ತೀವಿ. ನಿಮ್ಮ ಚಾಕರಿ ಮಾಡಕ್ಕಲ್ಲವ್ರಾ ನಾವು ಉಟ್ಟಿರೋದು" ಎಂದ. ನನ್ನ ಎದೆಗೆ ಆ ಮಾತು ಚುಚ್ಚಿತು. ಅವರನ್ನೆಷ್ಟು ಚುಚ್ಚಬಹುದು ಇನ್ನು? ಆಶ್ಚರ್ಯವಾಯಿತು, ಸಂಕಟವಾಯಿತು. ಪಿಳಿಪಿಳಿ ಕಣ್ಣು ಬಿಡುತ್ತ ಅದುವರೆಗೂ ಸುಮ್ಮನಿದ್ದ ಚನ್ನಬಸವ. "ಮಾವ ಹೊತ್ತಾಯಿತು" ಎಂದ. "ಹೋಗೋಣ, ಒಂದು ಗಳಿಗೆ ಅಷ್ಟೆ" ಎಂದು ಜನರ ಕಡೆ ತಿರುಗಿ ಹೇಳಿದೆ.

"ಅರಮನೆಗೆ ಸಂಬಂಧಪಟ್ಟ ಚಾಕರಿಗೆ ಕರೆಯಕ್ಕಲ್ಲಪ್ಪ ನಾನು ಬಂದಿರುವುದು."

"ಮತ್ಯಾಕೆ ?"

ನನ್ನ ಮನಸ್ಸಿನಲ್ಲಿದ್ದದ್ದನ್ನು ಹೇಗೆ ಹೇಳುವುದೋ ತಿಳಿಯಲಿಲ್ಲ. ಒದ್ದಾಡಿದೆ. ಕೊನೆಗೆ ಬಾಯಿಬಿಟ್ಟೆ. ಧರ್ಮ ದೇವರು ಇವರ ಹೆಸರಲ್ಲಿ, ಜಾತಿಯ ಹೆಸರಲ್ಲಿ ಆಗುತ್ತಿರುವ ತಾರತಮ್ಯ, ಅನ್ಯಾಯ–ಇದರ ಬಗ್ಗೆ ಮಾತು. ಅವರಿಗೆಷ್ಟು ಅರ್ಥವಾಯಿತೋ.

"ಒಡೆಯರದ್ದು ಯಾವ ಕುಲ?" ಎಂದ ಒಬ್ಬ.

"ಹಾರುವರು" ಪಕ್ಕದಲ್ಲಿದ್ದ ಚನ್ನಬಸವ ಹೇಳಿದ.

ಶುರುವಾಯಿತು ಕೋಲಾಹಲ. ಎಲ್ಲರದೂ ಮಾತು. ಯಾರೂ ಇಷ್ಟರವರೆಗೆ ಬಾಯಿಬಿಡದಿದ್ದವರು ಈಗ ಎಲ್ಲರೂ ಗಟ್ಟಿಯಾಗಿ ಅನ್ನಲು ತೊಡಗಿದರು. ಮಧ್ಯೆ ಸ್ವಲ್ಪ ಗಲಾಟೆ ತಗ್ಗಿದ ಮೇಲೆ ಹಿರಿಯ ಅಂದ: "ಒಡೆಯರೇ, ಹಾರುವರು ನಮ್ಮಟ್ಟೀಗೆ ಬರಬಾರದು. ನಮಗೆ ಒಳ್ಳೇದಲ್ಲ, ದೊಡ್ಡ ಮನಸ್ಸುಮಾಡಿ ಓಗಿಬುಡ್ರಿ. ನಮ್ಮ ಪಾಡಿಗೆ ಇರಕ್ಕೂ ನೀವು ಬಿಡಲ್ಲವಾ?" ಎಂದ ಕುಗ್ಗಿದ ಧ್ವನಿಯಲ್ಲಿ.

ಏನು ಮಾಡಲು ಬಂದ ನನಗೆ ಏನಾಗಿ ಹೋಯಿತು!

"ಜನಿವಾರ ಹಾಕಿದವರು ಹಟ್ಟೀ ಒಳಗೆ ಬಂದರೆ ನಮಗೆ ಜೆಷ್ಟೆ ಬಡಕೋತದೆ" ಎಂದು ಕತ್ತಲಲ್ಲಿ ಯಾರೋ ಕಿರುಚಿದರು.

ಹಾಕಿಕೊಂಡವರ ಕೊರಳನ್ನಲ್ಲದೆ ದಾರ ಇತರರ ಕೊರಳನ್ನು ಕುಯ್ಯುವುದಲ್ಲ! ಏನು ಸ್ಥಿತಿಯಿದೆ ಎನ್ನಿಸಿತು. ಬರಬರುತ್ತ ಹೊರಟುಹೋಗಿ ಎಂದು ನನಗೆ ಹೇಳುವ ಧ್ವನಿಗಳ ಸಂಖ್ಯೆ, ಧ್ವನಿಗಳ ಮಟ್ಟ ಹೆಚ್ಚಾಯಿತು. ಚನ್ನಬಸವನಿಗೆ ದಿಗಿಲಾಯಿತೇನೋ ಗಟ್ಟಿಯಾಗಿ ನನ್ನ ಕೈ ಹಿಡಿದ. ಅಸ್ಪಷ್ಟವಾಗಿ ಈ ಸಂಪ್ರದಾಯದ ಅರಿವು ನನಗಿದ್ದರೂ ಅದರ ನೇರ ಅನುಭವ ನನಗಾಗಿರಲಿಲ್ಲ. ಹೀಗಾಗಬಹುದೆಂಬ ಕಲ್ಪನೆಯೂ ಬಂದಿರಲಿಲ್ಲ. ನನ್ನ ಕಾರ್ಯಕ್ಕೆ ಜನಿವಾರ ಅಡ್ಡಿ! ಅದನ್ನು ಕಿತ್ತೆಸೆಯಲು ನಿರ್ಧರಿಸಿದೆ.

೩

ಕೇತಗ–ಚಂದಲೆ; ಚಂದಲೆ–ಕೇತಗ. ಅಂದುಕೋಂಡಿದ್ದಂತೇ ನಡೆದಿತ್ತು. ಹೀಗೆ ಸಮಾಜದ ಏಣಿಯ ಮೊದಲ ಹಂತ– ಕೊನೆಯ ಹಂತಗಳೆಂದು ಪರಿಗಣಿತವಾದ ಗುಂಪುಗಳ ನಡುವೆ ಸಹಜವಾದ ಸಂಬಂಧವೇರ್ಪಡುವುದು ಸಾಧ್ಯವಿಲ್ಲ. ಆ ಗುಂಪುಗಳ ಮಧ್ಯೆ ಕೊಡು–ಕೊಳುಗೆಯಿದ್ದರೆ ತಾನೇ ಸಂಬಂಧವುಂಟಾಗುವ ಸಂದರ್ಭ ಬರುವುದು. ಹೀಗಾಗಿ ಸಂಪರ್ಕವುಂಟಾಗುವ ವ್ಯಕ್ತಿಗಳ ನಡುವೆ ಸಂಬಂಧ ಬೆಳೆದರೆ, ಅದು ಅನಿವಾರ್ಯವಾಗಿ ಗುಂಪುಗಳ ನಡುವಣ ಬಾಂಧವ್ಯಕ್ಕೆ ಕಾರಣವಾಗಬಹುದು. ಬಹುತೇಕ ಪ್ರಸಂಗಗಳಲ್ಲಿ ಇಂತಹುದು ಬಾಂಧವ್ಯ ಸೃಷ್ಟಿಗಿಂತ ಘರ್ಷಣೆಯಲ್ಲಿ ಪರ್ಯವಸಾನವಾಗಬಹುದು.

ಶರಣ ಚಳುವಳಿ ಈ ಮೂವತ್ತು ವರ್ಷಗಳಷ್ಟು ಕಾಲದಲ್ಲಿ ಗಟ್ಟಿಯಾಗಿ ಬೆಳೆದಿತ್ತು. ಭವಿಗಳ ಬಗ್ಗೆ ನಾವೇಕೆ ತಲೆಕೆಡಿಸಿಕೊಳ್ಳಬೇಕು ಎಂಬುದು ಭಕ್ತಗಣದ ಮನೋಭಾವ. ಹಾಗಾಗಿ ಶಿವಾಚಾರವಿರುವುದು ಭಕ್ತರ ನಡುವಣ ಸಮಾನತೆಯನ್ನು ಸ್ಥಾಪಿಸುವ ಉದ್ದೇಶದಿಂದ. ಕನಿಷ್ಠ ಪಕ್ಷ ಹಲವಾರು ವಿಶಾಲ ಹೃದಯಿಗಳಾದ ಭಕ್ತರು ಜಾತಿಭೇದವನ್ನು ಮಾಡುತ್ತಲಿಲ್ಲ. ಎಷ್ಟೋ ಸಲ ಗುರು–ಜಂಗಮರೇ ಈ ಭೇದವನ್ನೆಣಿಸುತ್ತಾರೆ. ಅಂದ ಮೇಲೆ ಸಾಮಾನ್ಯ ಜನರ ಪಾಡೇನು? ಅದೂ ಹಿಂದೆ ಬೇರೆ ಬೇರೆ ಜಾತಿಗಳಿಗೆ ಸೇರಿದವರೆನ್ನಲಾದ ಇಬ್ಬರ ನಡುವಣ ಮದುವೆಗೆ ಹಿರಿಯರ ಸಮ್ಮತಿ ಸಿಕ್ಕೀತೆ? ಆದರೆ ಚಳುವಳಿಯ ಕಾವಿನಿಂದಾಗಿ ಈ ಪ್ರಶ್ನೆ ಇನ್ನೂ ದೊಡ್ಡದಾಗಿಲ್ಲ.

ಕೇತಗನನ್ನು ಸಾಯಂಕಾಲದ ಸಭೆಯಲ್ಲಿ ಬಸವಣ್ಣನವರು ಕಂಡಾಗ ಎಂಥ ಸುಂದರ ಯುವಕ ಎನ್ನಿಸಿತ್ತು. ಎತ್ತರವಿಲ್ಲದಿದ್ದರೂ ಕುಳ್ಳೆನಿಸದ ಮಟ್ಟಸವಾದ ದೇಹ. ತಲೆಗೊಂದು ಪಗಡಿ ಕಟ್ಟಿ ಮಂಡಿಯವರೆಗೆ ತುಂಡುಪಂಚೆ ಕಟ್ಟಿದ್ದ. ಮೂಲತಃ ಬಿಳಿಯದಾದರೂ ಧೂಳಿನಿಂದ ಕೆಂಚಗಾದ ಬಟ್ಟೆ. ಮೈಬಣ್ಣ ಕಾರ್ಗಾಲದ ಮೋಡದ್ದು. ಆದರೆ ದೇಹ ಗೆರೆಕೊರೆದಂತೆ; ಖಚಿತವಾದ ರೂಪು ರೇಷೆಗಳು. ವಿಶಾಲವಾದ ಎದೆಯ ಭಾಗ ಆತ್ಮವಿಶ್ವಾಸದ ಪ್ರತೀಕವಾಗಿತ್ತು. ಮುಖದ ಮೇಲೆ ಇನ್ನೂ ಸ್ಪಷ್ಟವಾಗಿ ಮೂಡದ ಮೀಸೆ. ದಪ್ಪತುಟಿಗಳ ಮೇಲೆ ಸ್ಥೈರ್ಯಸೂಚಕವಾಗಿ ಮೊಳಕೆಯೊಡೆಯುತ್ತಿತ್ತು.

ಚಂದಲೆ ಪುಟ್ಟ ಹುಟ್ಟು ಎನ್ನಬಹುದಾದ ಆಕಾರದವಳು. ಬಣ್ಣದ ಪಾವಡ ತೊಟ್ಟು, ಇನ್ನೊಂದು ಬಣ್ಣದ ರವಕೆ ತೊಟ್ಟವಳು. ಭುಜದ ಮೇಲೆ ದಾವಳಿಯ ಸೆರಗು. ಕಣ್ಣುಗಳು ಮಾತ್ರ ಕಿರು ಚಂದ್ರಮಗಳು. ಕೇತಗನದಕ್ಕಿಂತ ತಿಳಿಯಾದ ಮೈಬಣ್ಣದವಳಾದರೂ ಅವಳೂ ನಸುಗಪ್ಪು ಬಣ್ಣದ ಹುಡುಗಿ. ಅವರಿಬ್ಬರನ್ನೂ ಕಂಡಾಗ ಎತ್ತಣಿಂದೆತ್ತ ಸಂಬಂಧವಯ್ಯಾ ಎನಿಸಿತ್ತು.

ತಾಯಿಲ್ಲದ ಚಂದಲೆಗೆ ಮಧುವಯ್ಯ ಅಕ್ಕರೆಯ ಮೂರ್ತಿ. ಮನೆಯಲ್ಲೊಂದು ಅಜ್ಜಿ, ಯಾರೋ ಅನಾಥ ಹೆಂಗಸಂತೆ; ಆಕಸ್ಮಿಕವಾಗಿ ಇವರ ಮನೆ ಸೇರಿತ್ತು. ಮನೆಯಲ್ಲಿ ಅಡುಗೆ ಕೆಲಸ ಮಾಡಿಕೊಂಡು ಜೀವನ ಸಾಗಿಸುತ್ತಿತ್ತು. ಮಧುವಯ್ಯ ತನ್ನ ತಂದೆಯ ಕಾಲಕ್ಕೆ ದೂರದ ಊರವನು. ಅವರ ತಂದೆ ಬೆಳುವಲ ನಾಡಿನ ಸೂಗೂರು ಅಗ್ರಹಾರಕ್ಕೆ ಸೇರಿದವನು. ಕಲಿತಿದ್ದ ವಿದ್ಯೆಯಿಂದ ಜೀವನ ಸಾಗದೆ ಇಲ್ಲಿಯವರೆಗೆ ಬಂದಿದ್ದ. ಗದ್ದುಂಬಳ್ಳಿಗೆ ಬಂದು ಸೇರುವ ಹೊತ್ತಿಗೆ ಇಲ್ಲಿಯ ಜನ ಶರಣರಾಗಿದ್ದರು. ಎಲ್ಲರಿಗೂ ಕಲಿಯುವ ತವಕ. ಜಾತಿಭೇದವಿಲ್ಲದೆ ಊರ ಚಾವಡಿಯಲ್ಲಿ ಸಂಜೆ ಹೊತ್ತು ಓದು ಕಲಿಯಲು ಬಂದಾಗ ಮಧುವಯ್ಯ ಅವರಿಗೆ ಓಜ. ಕನ್ನಡ ಕಲಿಸಿದ, ಆಗಾಗ ಹಿರಿಯರ ವಚನಗಳ ಅರ್ಥ ಹೇಳಿದ, ಹುಡುಗರು ತಾವೂ ವಚನ ಬರೆಯುತ್ತೇವೆಂಬ ಉತ್ಸಾಹವನ್ನೂ ತೋರಿದರು.

ಹಿಂದೊಮ್ಮೆ ಸಿದ್ಧರಾಮ ಆ ಊರಿಗೆ ಬಂದಿದ್ದರಂತೆ. ದೂರದ ಸೊಲ್ಲಾಪುರದಿಂದ ಗದ್ದುಂಬಳ್ಳಿಗೇ ಎಂದು ಬಂದದ್ದಲ್ಲ. ತಮ್ಮ ಮಠದ ಯೋಗಕ್ಷೇಮ ನೋಡಬೇಕಲ್ಲ. ಹೊಸದಾಗಿ ಹಾಕಿಕೊಂಡ ಯೋಜನೆಗಳು; ಅವರಿವರು ಭಕ್ತರು ತಾವಾಗಿ ಕಾಣಿಕೆ ಕೊಡುತ್ತಿದ್ದರು ಮಠಕ್ಕೆ. ಆದರೆ ಕಾಣಿಕೆ ಕೊಡುವವರಲ್ಲಿ ಪ್ರತಿಫಲ ಬಯಸುವವರೇ ಹೆಚ್ಚು; ಮಂದಿ ಹತ್ತು ಕೊಟ್ಟು ಇಪ್ಪತ್ತು ನಿರೀಕ್ಷಿಸುವವರು. ಕೊಟ್ಟ ನೆವದಿಂದ ಮಠಕ್ಕೆ ಕನ್ನ ಹಾಕುವ ಜನರೇ ಹೆಚ್ಚು. ಹೀಗಾಗಿ ಊರ ಹಣವಂತರಲ್ಲಿ ಮಠ ಒತ್ತೆಯಿಡುವಂತಾಗಿ ಬಿಡಬಹುದೆಂದು ಹೆದರಿ, ಸಿದ್ಧರಾಮರು ದೂರದ ಊರುಗಳಿಂದ ಬೇಡಿ ತಂದು ಮಠ ಕಟ್ಟುವ ದಾರಿ ಹಿಡಿದರು. ಜೋಳಿಗೆ ಅವರ ಆಭರಣ, ಮಾತು-ಮಮತೆ ಅವರ ಅಲಂಕಾರ. ಸೊಗಸಾಗಿ ಕತೆ ಹೇಳುವರು, ತಮ್ಮದೇ ವಚನಗಳನ್ನು ಹಾಡಿ ತೋರಿಸುವರು. ತಮ್ಮ ಮಠದ ವಿವರ ಹೇಳಿ ಜೋಳಿಗೆ ಹಿಡಿಯುವರು. ಕತೆ ಹೇಳಲು ನೆರೆದ ಜನ, ವಚನದ ಅರ್ಥದಿಂದ ಮುಗ್ಧಗೊಂಡು ಬೊಗಸೆ ತುಂಬ ಕೊಡುತ್ತಿದ್ದರು-ಧನ, ಧಾನ್ಯ. ಪುಣ್ಯಾತ್ಮ ದೊಡ್ಡ ಕೆಲಸ ಮಾಡ್ತಿದ್ದಾರೆ, ತಮ್ಮದೂ ಅಳಿಲು ಸೇವೆ ಎಂದುಕೊಂಡು ಹಿರಿಯರು ತಾವು ಧನ್ಯರಾದೆವೆಂದುಕೊಳ್ಳುತ್ತಿದ್ದರು. ಚಿಕ್ಕ ಹರೆಯದವರಿಗೆ ಅವರ ಮಾತೇ ಮೋಡಿ.

ಅವರು ಕತೆಗಳನ್ನು ಹೇಳುತ್ತಿದ್ದರು, ಆಡುತ್ತಿದ್ದರು, ವಚನಗಳನ್ನು ಹೇಳಿ ವಿವರಿಸುತ್ತಿದ್ದರು. ಹಳೆಯ ವ್ಯವಸ್ಥೆಯಲ್ಲಿ ವರ್ಣಗಳು ಜನರನ್ನು ಹೇಗೆ

ವಿಭಜಿಸಿದೆಯೆಂಬದು ವಿವರಿಸುವರು, ಒಂದಾಗಬೇಕೆನ್ನುವರು. 'ಚತುರ್ವರ್ಣಾತೀತನೆ ವೀರಶೈವ ನೋಡಾ' ಎಂಬುದು ಅವರ ಮಂತ್ರ. ಶಿವನನ್ನು ನಂಬಿದವರಿಗೆ ಇರುವುದು ಒಂದೇ ಕುಲ, ಶಿವಕುಲ; ಮಿಕ್ಕ ಕುಲವೆಲ್ಲ ಆಕುಲ ಎಂದು ಅವರ ವಿವರಣೆ. ಶೂದ್ರರು ಎನ್ನಿಸಿಕೊಂಡ ಜನರು ಮೋಕ್ಷಕ್ಕೆ ಅರ್ಹರಲ್ಲ ಎನ್ನಿಸಿಕೊಳ್ಳಲು ಕಾರಣ ಅವರ ಬಡತನ. ದೇವರುಗಳೂ ಹಣವಂತರನ್ನೇ ಆಶ್ರಯಿಸುತ್ತಾರೆ ಎಂದು ತಮಾಷೆಯಾಗಿ ವಿವರಿಸುತ್ತಿದ್ದರು. ಹಣವಿದ್ದವರಿಗೆ ಲಕ್ಷ್ಮೀಪತಿ ಪ್ರಿಯನಾದರೆ ಬಡವರಿಗೆ ಶಿವನೇ ದೇವರು. ಏಕೆಂದರೆ ಅವನೂ ನಮ್ಮಂತೆ ತಿರುಬೋಕಿ, ಹೊದೆಯಲು ಬಟ್ಟೆಯಿಲ್ಲದ ಶಿವ ನಮ್ಮ ದೈವ ಎನ್ನುವರು. ಹೊದೆಯದಿದ್ದರೇನಂತೆ ಕೈಲಾಸಪರ್ವತವನ್ನು ತುಂಬಿರುವ ಹಿಮದ ಶೀತವನ್ನು ತಡೆಯುವ ಸಾಮರ್ಥ್ಯ ನಮ್ಮ ಚರ್ಮಕ್ಕೇ ಬಂದಾಗ ಬಟ್ಟೆಯ ಹಂಗೇಕೆ? ಶಿವನ ಹಾಗಾಗಬೇಕು ನಾವು ಎನ್ನುತ್ತಿದ್ದರು.

ಬಡವರು ವಿದ್ಯೆ ಕಲಿಯಬೇಕು ಎನ್ನುವವರು. ವಿದ್ಯೆ ಎಂದರೆ ಸಂಸ್ಕೃತದ್ದು ಮಾತ್ರವಲ್ಲ ಎನ್ನುತ್ತಿದ್ದರು. ಕನ್ನಡ ನಮ್ಮ ಮಾತು. ಹೆರವರ ಬಾಯಿಂದ ನಾವು ಮಾತನಾಡಲಾದೀತೆ; ನಮ್ಮ ಬಾಯಿಂದಲೇ ನಾವು ನಮಗನಿಸಿದ್ದನ್ನು ಹೇಳಬೇಕು. ನಮ್ಮದೇ ಬಾಯಿ ಎಂದರೆ ನಮ್ಮದೇ ನುಡಿ. ಅದೇ ಕನ್ನಡ. ಸಂಸ್ಕೃತದಲ್ಲಿ ಮಂತ್ರವಿದೆ. ಕನ್ನಡದಲ್ಲಿ ವಚನಗಳಿವೆ ಎಂದರು. ವಚನ ಹೇಳಿರಿ, ಏನು ಹೇಳುತ್ತಿದ್ದೇವೆ ಎಂಬುದು ನಮಗೆ ತಿಳಿಯುತ್ತದೆ; ಅದು ಶಿವನಿಗೆ ತಿಳಿಯುತ್ತದೆ. ಸಂಸ್ಕೃತದಲ್ಲಿರುವ ಮಂತ್ರ ಯಾರೋ ಹೇಳಿದ್ದು. ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲ. ಯಾರದ್ದೋ ಪಿಣಿಪಿಣಿ ಎಂದುಬಿಟ್ಟರೆ ಏನು ಪ್ರಯೋಜನ ಎಂದು ಹೇಳಿದರು.

ವಿದ್ಯೆ ಕಲಿಯಬೇಕು. ಆದರೆ ವಿದ್ಯೆ ಎಂದರೆ ಸರಿಯಾದ ಬದುಕು, "ಓದುವುದು ಸದ್ಗುಣಕ್ಕಲ್ಲದೆ ಕಿವಿಯನ್ನೋದುವುದಕ್ಕೇನೋ ಅಯ್ಯ." ಎಂದರು ಅವರು. ಇಂಥ ಮಾತಾಡುವಾಗ ಕೈ ಹೀಗೆ ಚಾಚಿ ಕಣ್ಣು ಹುಬ್ಬೇರಿಸಿ ಅಭಿನಯಿಸಿದರೆ ಕೇಳುವವನ ಎದೆಯೊಳಕ್ಕೆ ವಿಷಯ ಹೊಗಬೇಕು – ಕಲ್ಲೆತ್ತಿ ಕೊಳಕ್ಕೆ ಹಾಕಿದರೆ ದುಡುಂ ಎಂದು ನೇರವಾಗಿ ಹೋಗಿ ತಳ ಸೇರುವಂತೆ.

ಅವರ ಮೈಯಂತೂ ಕಬ್ಬಿಣದ ಗುಂಡು. ಯಾರಾದರೂ ಮೈಯಿಗೆ ಗುದ್ದಿದರೆ ಹೊಡೆದವನ ಕೈ ನೋಯಬೇಕು ಅಂಥದ್ದು. ಕಪ್ಪು ದೇಹ. ನಾನೂ ಮೊದಲು ನಿಂಬೆಹಣ್ಣು–ಅಂದರೆ ಅದರ ಬಣ್ಣ. ಈಗ ಮಾದಲ–ಸಿಪ್ಪೆ ದಪ್ಪ ಎಂದು ತಮ್ಮನ್ನು ವರ್ಣಿಸಿಕೊಳ್ಳುವರು. ಬಿಸಿಲಲ್ಲಿ ಕೆಲಸ ಮಾಡಿ ಮೈ ಕಪ್ಪಾಗಿದೆಯಂತೆ. ಚಿನ್ನ ಕಟ್ಟಿಕೊಂಡು ಏನು ಮಾಡುತ್ತೀರಿ, ಕಬ್ಬಿಣವಾಗಿ ಎಂಬುದು ಅವರ ಉಪದೇಶ. ಸೊಲ್ಲಾಪುರದಲ್ಲಿ ದೊಡ್ಡ ಕೆರೆಯನ್ನು ಕಟ್ಟಲು ಅವರು ಕೈ ಹಾಕಿದ್ದಾರಂತೆ. ಮಳೆ ಕಡಿಮೆಯಾಗಿ ನೀರಿಲ್ಲದೆ ಜನರು–ರಾಸುಗಳು ಕಂಗೆಡುವುದನ್ನು ಕಂಡು ಕೆರೆ ಕಟ್ಟಿಸಲು ನಿರ್ಧರಿಸಿದರು. ಅದಕ್ಕೇ ಹಿರಿಯರೊಬ್ಬರು ಅವರನ್ನು ಒಡ್ಡರಾಮ ಎಂದು ಹಾಸ್ಯ ಮಾಡಿದರಂತೆ.

ಮಾಡಲೇಳಿ, ಅದಕ್ಕೇನಂತೆ, ಮೈಯಿಲ್ಲದೇ ಮನವುಂಟೇ? ಎಂಬುದು ಅವರ ಉತ್ತರ. ಮೈ ಗಟ್ಟಿಯಾದರೆ ಮನವೂ ಗಟ್ಟಿ ಎಂಬುದು ಅವರ ಸಿದ್ಧಾಂತ. ದುಡಿಯಬೇಕು, ತಿನ್ನಬೇಕು, ನಿದ್ರಿಸಬೇಕು – ಎದ್ದು ಮತ್ತೆ ದುಡಿಯಬೇಕು.

ಅವರು ಗದ್ದುಂಬಳ್ಳಿಯಲ್ಲಿದ್ದ ಹತ್ತು ದಿನವೂ ಅವರ ಮೂರ್ತಿಯೇ ಎಲ್ಲೆಲ್ಲೂ. ಸುತ್ತು ಮುತ್ತಲ ಊರುಗಳಲ್ಲಿ ಅವರ ಪ್ರವಚನ, ಜೋಳಿಗೆ ಒಡ್ಡುವುದು. ಎಲ್ಲ ಕಡೆಯ ಯುವಕರಿಗೆ ಅವರು ಹಾಕಿದ ಮೋಡಿ ಅಷ್ಟಿಷ್ಟಲ್ಲ. ಆಗಿನ್ನೂ ಯುವಕರಾಗಿದ್ದ ಮಧುವಯ್ಯನವರ ಮೇಲೆ ಸಿದ್ಧರಾಮರ ಪ್ರಭಾವ ಅಪರಿಮಿತವಾಗಿ ಬಿತ್ತು. ಅವರು ಮರಳಿದ ಮೇಲೆ ಮಧುವಯ್ಯನವರೇ ಸಿದ್ಧರಾಮನ ಪಾತ್ರ ವಹಿಸಲಾರಂಭಿಸಿದರು. ಊರ ಜನರಿಗೆ ಓದು ಕಲಿಸುವುದು, ವಚನಗಳನ್ನು ಹೇಳಿ ಅರ್ಥ ವಿವರಿಸುವುದು, ಕತೆ ಹೇಳಿ ರಂಜಿಸುವುದು–ಹೀಗೆ ಊರೊಳಗೆ ಅವರು ಬೆರೆತಿದ್ದರು. ಊರ ಜನಕ್ಕೆ ಮಧುವಯ್ಯ ಎಂದರೆ ಅಚ್ಚುಮೆಚ್ಚು. ಮಧು ಎಂದರೆ ಜೇನುತುಪ್ಪ ಎಂದು ತಿಳಿದವರು "ನಮ್ಮ ಮಧುವಯ್ಯನವರು ಜೇನಯ್ಯ" ಎಂದು ತಮಾಷೆ–ಗೌರವಗಳಿಂದ ಕರೆಯುತ್ತಿದ್ದರು.

ಸಿದ್ಧರಾಮರ ಆದರ್ಶ ಹೊತ್ತ ಮಧುವಯ್ಯ ತಮ್ಮೂರನ್ನೇ ತಮ್ಮ ಪಾಲಿನ ಸೊನ್ನಲಿಗೆಯನ್ನಾಗಿಸಿಕೊಂಡಿದ್ದರು. ಅಲ್ಲೊಂದು ಸಣ್ಣ ಕೆರೆಯನ್ನು ಕಟ್ಟಲು ಜನರನ್ನು ಒಂದುಗೂಡಿಸಿದ್ದರು. "ರಾಜನು ಯಾವನೋ ಯುದ್ಧದ ಕಾಲದಲ್ಲಿ ಬಂದರೆ ಅವನಿಗೆ ಬಿಟ್ಟಿ ಮಾಡ್ತೀರಿ. ನಮ್ಮ ಊರಿಗೆ ನಾವು ಬಿಟ್ಟಿ ಮಾಡಬಾರದಾ? ಅದೂ ಶಾಶ್ವತವಾದ ಕೆಲಸಕ್ಕೆ" ಎಂದು ಜನರನ್ನು ಎಬ್ಬಿಸಿ ಆ ಕೆಲಸ ಆಗಮಾಡಿಸಿದ್ದರು. ದೊಡ್ಡ ಕೆರೆಯೇನಲ್ಲ, ಚಿಕ್ಕದೇ. ಊರೂ ಚಿಕ್ಕದೇ. ಅಲ್ಲದೇ "ಏಕೆ ಚಿಕ್ಕ ಕೆರೆ ಕಟ್ಟಿಸಿದ್ದೀರಿ, ಸಿದ್ಧರಾಮಯ್ಯನವರಂತೆ ದೊಡ್ಡ ಕೆರೆ ಕಟ್ಟಿಸಬಾರದಿತ್ತೇ?" ಎಂದು ಯಾರಾದರೂ ವಿಚಾರಿಸಿದರೆ ಮಧುವಯ್ಯ ಹೇಳುತ್ತಿದ್ದ ಉತ್ತರ: "ಅವರು ದೊಡ್ಡ ಸಿದ್ಧರಾಮಯ್ಯ, ನಾನು ಸಣ್ಣವನು. ಆದ್ದರಿಂದ ನನ್ನಷ್ಟೇ ಅದೂ ಚಿಕ್ಕದು. ಅಲ್ಲದೆ ದೊಡ್ಡ ಉಸಾಬರಿ ಬೇಡ. ತಮ್ಮ ಊರನ್ನು ಸರಿಯಾಗಿಟ್ಟುಕೊಂಡರೆ ಸಾಕು" ಎಂದು ಮಿಕ್ಕ ವಿಚಾರದಲ್ಲೂ ಊರಿನ ಕೆಲಸ ಕಾರ್ಯಗಳನ್ನು ಯೋಜಿಸಿ, ಅವುಗಳ ನಿರ್ವಹಣೆಯಲ್ಲಿ ಮುಂದಾಳುತ್ವ ವಹಿಸಿದ್ದರು. ಅದಕ್ಕೇ ಗದ್ದುಂಬಳ್ಳಿಯೆಂದರೆ ಶುಚಿಯಾದ ಹಳ್ಳಿ. ಕೆಟ್ಟ ವಾಸನೆಯಿಲ್ಲ, ಊರ ಚರಂಡಿಗಳಲ್ಲಿ ಕೊಚ್ಚೆಯಿಲ್ಲ, ಇದ್ದುದರಲ್ಲಿ ಅಚ್ಚುಕಟ್ಟು. ಚಿಕ್ಕ ಹಳ್ಳಿ. ಅದಕ್ಕೇ ಯಾರಿಗಾದರೂ ತೊಂದರೆಯಾದರೆ ಹಳ್ಳಿಯ ಇತರರೆಲ್ಲ ಸೇರಿ ಕ್ಷಣದಲ್ಲಿ ಅವರ ಕಷ್ಟ ಪರಿಹಾರವಾಗುವಂತೆ ಮಾಡುತ್ತಿದ್ದರು.

ವರ್ಣ–ಜಾತಿಗಳಿಂದ ಅದಕ್ಕೇ ಆ ಊರು ದೂರ. ಎಲ್ಲ ಶಿವಾಚಾರದವರೇ ಅಲ್ಲಿ. ನಿಚ್ಚ ನಿಚ್ಚ ಶಿವರಾತ್ರಿ ಅಲ್ಲಿ. ಮಧುವಯ್ಯ ಲಿಂಗ ಕಟ್ಟಿದವರೇನೂ ಅಲ್ಲ. ಆದರೆ ಹಿರಿಯ ಶರಣರ ಆದರ್ಶದಲ್ಲಿ ನಡೆಯುವವರು. ಎಲ್ಲರ

ಮನೆಗೆ ಬಂದು ಹೋಗುವವರು, ಯೋಗಕ್ಷೇಮ ವಿಚಾರಿಸುವವರು. ತಿಳುವಳಿಕೆ ಹೇಳಿ ಜನರನ್ನು ಒಗ್ಗೂಡಿಸಿದವರು. ಬಡ್ಡಿ ವ್ಯವಹಾರ ಗದ್ದುಂಬಳ್ಳಿಯಲ್ಲಿ ಇಲ್ಲವೇ ಇಲ್ಲ. ಶಿವನ ಹೆಸರಲ್ಲಿ ವರ್ಷಕ್ಕಿಷ್ಟು ಎಂದು ಕಷ್ಟವಿಲ್ಲದ ಜನ ಮೀಸಲು ನೀಡುವರು. ಕಷ್ಟಬಂದಾಗ ಶಿವನ ಮೇಲೆ ಪ್ರಮಾಣ ಮಾಡಿ ಹಣ ಪಡೆದು ಜನ ಅದನ್ನು ನಿಯತ್ತಾಗಿ ಹಿಂದಿರುಗಿಸುವರು. ಅದರ ಲೆಕ್ಕವೆಲ್ಲ ಮಧುವಯ್ಯನವರದ್ದೇ.

ತಮ್ಮ ಹುಟ್ಟಿನ ಜಾತಿಯ ಬಗ್ಗೆ ಆಲೋಚಿಸದೆ, ಊರು ಒಟ್ಟಾಗಿತ್ತು. ಊಟ ತಿಂಡಿಯ ಬಗ್ಗೆ ಮಡಿ ಮೈಲಿಗೆಯಿಲ್ಲ. ಶಿವರಾತ್ರಿಯಂದು ಊರ ಚಾವಡಿಯಲ್ಲಿ ಸೇರಿ ಜಾಗರಣೆ. ಮಾರನೇ ದಿನ ಊರವರೆಲ್ಲರಿಗೆ ಪಾರಣೆ; ಒಟ್ಟಾಗಿ ಶಿವನಿಧಿ ಇತ್ತಲ್ಲ, ಅದರ ಖರ್ಚಿನಲ್ಲಿ. ಊರಲ್ಲಿ ಒಂದು ಶಿವಗುಡಿಯೂ ಇದೆ. ಜನಕ್ಕೆ ಕಾಣಲೊಂದು ವಸ್ತು ಬೇಕಲ್ಲ ಎನ್ನುತ್ತಾರೆ ಮಧುವಯ್ಯ ಈ ಬಗ್ಗೆ ಕೇಳಿದಾಗ. ಜಾತಿಗಳ ಹಂಗಿನಲ್ಲಿ ಬಾಳದ ಊರ ಜನ ಒಬ್ಬರ ಮನೆಗೊಬ್ಬರು ಸಲೀಸಾಗಿ ಹೋಗಿ ಬರುವವರು. ಎಲ್ಲರೂ ಎಲ್ಲರ ಮನೆಯಲ್ಲೂ ಒಂದೇರೀತಿಯ ಸಲಿಗೆ ವಹಿಸಲು ಸಾಧ್ಯವೇ? ಸಲಿಗೆ–ಸ್ನೇಹವೆಂದರೆ ಮನಸ್ಸುಗಳ ಬೆಸುಗೆ. ಯಾರಿಬ್ಬರ ಮನಸ್ಸು ಕನ್ನಡಿಯ ಹಾಗಿರುವುದೋ ಅವರಲ್ಲಿ ಬೆಸೆಯುವುದು ಇವು. ಆದ್ದರಿಂದ ಒಡನಾಟದ ರೀತಿಯಿಲ್ಲದಿದ್ದರೂ, "ಅತ್ತ ಸರಿ" "ಅಲ್ಲಿ ಕುಳ್ಳಿರು" ಇಂತಹ ವರ್ತನೆ ಗದ್ದುಂಬಳ್ಳಿಯಲ್ಲಿಲ್ಲ.

ಇದೇ ಕೇತಗ–ಚಂದಲೆಯರ ಒಡನಾಟಕ್ಕೆ ಮೂಲ. ಅಲ್ಲದೆ ಆ ಕೇತಗನೇನು ಸಾಮಾನ್ಯನೇ! ಪ್ರಸಂಗದಲ್ಲಿ ಅವನು ಕುಣಿಯುವ ಪರಿಯನ್ನು ವಿವರಿಸುವುದುಂಟೆ? ಅವನು ಹಾಡಿದರೆ ನಕ್ಷತ್ರಗಳಿಗೆ ಕೇಳಿಸಿಬಿಡುತ್ತದೆ ಎನ್ನುವ ಕಂಠ. ಚುರುಕು ಹುಡುಗ. ತಾನೂ ವಚನ ಬರೆಯುತ್ತೇನೆ ಎನ್ನುತ್ತಾನೆ ಅವನು. ಆದರೆ ಆತನ ವಚನಗಳನ್ನು ಹಿರಿಯರಿಗೆ ತೋರಿಸಿಲ್ಲ, ಅಷ್ಟು ಆತ್ಮವಿಶ್ವಾಸವಿಲ್ಲ. ಕನ್ನಡವನ್ನು ಮಾತ್ರ ಅಚ್ಚುಕಟ್ಟಾಗಿ ಬರೆಯುತ್ತಾನೆ. ಮರಳಮೇಲೆ ಲಿಪಿ ತಿದ್ದಿ ತಿದ್ದಿ ಅವನ ತೋರುಬೆರಳು ತೋರವಾಗಿದ್ದದ್ದು ಸಣ್ಣಗಾಗಿದೆಯಂತೆ! ಕಂಠ ಹಿಡಿದು ಓಲೆಯ ಮೇಲೂ ಬರೆಯಬಲ್ಲ.

ಎಷ್ಟೋ ಬಾರಿ ಊರಲ್ಲಿ ಬಯಲಾಟ ಪ್ರಸಂಗಗಳು ನಡೆದಿವೆ. ಕತೆಯನ್ನು ಮಧುವಯ್ಯ ವಿವರಿಸುವುದು, ಪಾತ್ರಗಳು ಯಾವ ಯಾವ ಮಾತಾಡಬೇಕು ಎಂದು ಸೂಚಿಸುವುದು. ಅವನ್ನೇನು ಬರೆದಿಟ್ಟುಕೊಳ್ಳಲು ಸಾಧ್ಯವೇ? ಒಟ್ಟು ಕತೆಯ ಜಾಡು ಹಿಡಿದು, ಸನ್ನಿವೇಶ ಮಿಡಿಯುವ ನಾಡಿ ಹಿಡಿದು ಸಂಭಾಷಣೆ ಹೇಳುವುದು. ಇದಕ್ಕೆ ಅಪಾರ ಜಾಣ್ಮೆ ಬೇಕು. ಕೇತಗ ಅಂತಹ ಜಾಣರಲ್ಲಿ ಜಾಣ.

ಮಧುವಯ್ಯ ಪ್ರಸಂಗಗಳಿಗೆ ಆರಿಸುವ ಕತೆಗಳೆಂದರೆ ಯಾರೂ ಅರಿಯದಿದ್ದವು ಅವು. ಊರಲ್ಲಿ ಅಲ್ಲೊಂದು ಸಲ ಇಲ್ಲೊಂದು ಸಲ

ರಾಮಾಯಣ–ಭಾರತದ ಕತೆಗಳನ್ನಾಡಿರುವುದುಂಟು. ರಾಮಾಯಣದಲ್ಲಿ ರಾವಣನ ಪಾತ್ರ ಕೇತಗ ಬಯಸುವುದು. ಅವನು ಅದಕ್ಕೆ ನೀಡುವ ಕಾರಣ : ರಾವಣ ಶಿವಭಕ್ತ ಎಂದು. ತಮಾಷೆಗಾಗಿ ಕೆಲವರು ಕೀಟಲೆ ಮಾಡುತ್ತಿದ್ದರು. ನೀನು ನೋಡ್ಡೋಕ್ಕೆ ರಾಮಭಕ್ತ ಇದ್ದಂಗಿದ್ದೀಯಲ್ಲೋ! ಕೇತಗ ಅದರಿಂದ ಕೋಪಗೊಳ್ಳುವುದಿಲ್ಲ, 'ಒಗಣ್ಣೋ' ಎಂದು ಮೂತಿ ಸೊಟ್ಟ ಮಾಡುವನು.

ಮಾದಾರ ಚೆನ್ನಯ್ಯನ ಮನೆಯಲ್ಲಿ ಶಿವ ಅಂಬಲಿಯುಂಡ ಪ್ರಸಂಗ, ಕೊಂಡಗುಳಿ ಕೇಶಿರಾಜನ ಪ್ರಸಂಗ, ತೆಲುಗು ಜೊಮ್ಮಣ್ಣನ ಪ್ರಸಂಗ– ಇಂಥವನ್ನೂ ಮಧುವಯ್ಯ ಆರಿಸುತ್ತಿದ್ದರು. ಇಂಥ ಪ್ರಸಂಗಗಳಲ್ಲೆಲ್ಲಾ ಕೇತಗನದು ಮುಖ್ಯ ಪಾತ್ರ. ಯಾವ ಸನ್ನಿವೇಶವೇ ಇರಲಿ ಮಾತು ಮುಖಭಾವ ಕುಣಿತ ಇವುಗಳನ್ನು ಅದಕ್ಕೆ ಅನುಗುಣನಾಗಿ ಹೊಂದಿಸುವ ಜಾಣ್ಮೆ ಅವನದು. ತೆಲುಗು ಜೊಮ್ಮಣ್ಣನ ಪಾತ್ರವೆಂದರೆ ಅವನಿಗೆ ತುಂಬ ಆಸೆ. ಬೇಟೆಗಾರನಾಗಿದ್ದು ಪ್ರಾಣಿಗಳ ಮಾಂಸವನ್ನೇ ಶಿವನಿಗೆ ಅರ್ಪಿಸುತ್ತಿದ್ದರೂ ದೊಡ್ಡ ಭಕ್ತನಾದ ಅವನ ವ್ಯಕ್ತಿತ್ವ ಅವನಿಗೆ ಅಚ್ಚು ಮೆಚ್ಚು. ಮಾಂಸ ತಿನ್ನುವ ಅವರಜ್ಜನ ಕಾಲದ ಚಪಲ ಇನ್ನೂ ಅವನಿಗೆ ಹೋಗಿಲ್ಲ ಎಂದು ಹಲವರು ಈ ಸಂದರ್ಭದಲ್ಲೆಲ್ಲ ಹಾಸ್ಯ ಮಾಡುತ್ತಿದ್ದರು. "ನಿಂಗೂ ಮಾಂಸ ತಿನ್ನಬೇಕೆಂಬ ಆಸೆ ಇದೆಯ" ಎಂದು ಯಾರಾದರೂ ಕೇಳಿದರೆ, "ಆಸೆಯೇನೋ ಐತೆ, ಆದರೆ ಈ ಅಯ್ಯನವರು ಬಿಡಬೇಕಲ್ಲ" ಎಂದು ಉತ್ತರಿಸುವನು. ಅಯ್ಯನವರು, ಎಂದರೆ ಮಧುವಯ್ಯ, ಮುಗುಳ್ನಗುವರು.

ಪಾತ್ರಗಳ ಕುಣಿತಗಳನ್ನು ಕಲಿಸಿಕೊಡಲು ಹಲವರಿದ್ದರು. ಅಳ್ಳಯ್ಯನೂ ಅದರಲ್ಲಿ ಕಡಿಮೆಯೇನಿಲ್ಲ. ಈಗ ವಯಸ್ಸಾಗಿದೆ; ಹೆಚ್ಚು ಕಾಲ ಕುಣಿಯಲಾರ, ಆದರೆ ಒಂದು ಕಾಲದಲ್ಲಿ ಅವನೂ ದೊಡ್ಡ ಪಾತ್ರಧಾರಿ. ಅವನ ಗುಣ ಮಗನಿಗೆ ಬಂದದ್ದರಲ್ಲಿ ಆಶ್ಚರ್ಯವಿಲ್ಲ.

ಸೂರ್ಯ ಮೇಲೇರಿದರೆ ಚಳಿಗಾಲದ ಇಬ್ಬನಿ ಉಳಿದೀತೆ? ಕರಗಿ ಹೋಗುವುದಿಲ್ಲವೇ? ಹಾಗೇ ಯೌವನ ಎಂಬುದು. ಗಂಡು ಹೆಣ್ಣು ವಯಸ್ಸಲ್ಲಿ ಹತ್ತಿರಾದರೆ ಒಬ್ಬರಲ್ಲಿ ಒಬ್ಬರು ಕರಗುತ್ತಾರೆ. ಒಡನಾಟ ಹೆಚ್ಚಿದ್ದರೆ ವಯಸ್ಸಿನ ಯಾವುದೇ ಗಂಡು ಯಾವುದೇ ಹೆಣ್ಣು ಹತ್ತಿರವಿರಲು ಬಯಸುತ್ತಾರೆ. ಆಗ ಹಿಂದು ಮುಂದಿನ ಆಲೋಚನೆಯಿಲ್ಲ. ಹಿಂದು ಮುಂದು ಆಲೋಚಿಸಬಲ್ಲ ಮುನಿಪುಂಗವರೂ ಕರಗಿ ಹೋಗಲಿಲ್ಲವೇ? ನಮ್ಮ ಪುರಾಣಗಳಲ್ಲಿರುವುದು ಇಂಥವರದೇ ಕತೆಗಳಲ್ಲವೇ? ಈಗಲೂ ಎಷ್ಟೋ ಜನ ಗಂಟು ಜಡೆಯ ಬೈರಾಗಿಗಳು ಕೂದಲಲ್ಲಿ ನಾಣ್ಯ ಸಿಕ್ಕಿಸಿಕೊಂಡು ಮಬ್ಬುಗತ್ತಲಲ್ಲಿ ಕೆಲವು ಕೇರಿಗಳಲ್ಲಿ ಹಾದು ಹೋಗುವುದು ಇನ್ನೇಕೆ?

ಏನು ನಡೆದಿತ್ತೋ ಬಿಟ್ಟಿತ್ತೋ ಬಲ್ಲವರಾರು? ಆದರೆ ಕೇತಗ– ಚಂದಲೆಯನ್ನು ಕೆಲವರು ಹಿರಿಯರು ಕೆಲವಾರು ಬಾರಿ ಒಟ್ಟಿಗೇ ಇದ್ದದ್ದನ್ನು ಕಂಡಿದ್ದರು. ಊರ ಹೊರಗೆ, ಮನೆಯ ಅಂಗಳದಲ್ಲಿ ಒಟ್ಟಿಗೇ ಇದ್ದದ್ದು

ಕಾಣಿಸಿತ್ತು. ಇನ್ನೂ ಎಷ್ಟು ಹತ್ತಿರ ಸರಿದಿದ್ದರೋ ತಿಳಿಯದು. ಕಂಡವರು ಅವರವರ ಹಿರಿಯರಿಗೆ ಹೇಳದಿರುತ್ತಾರೆಯೇ? ಇಂಥದ್ದನ್ನು ಹೇಳುವುದು ತಮ್ಮ ಕರ್ತವ್ಯ ಎಂಬ ಭಾವನೆ ಕೆಲವರಿಗೆ, ಇಂಥದ್ದು ನಡೆಯುವುದೇ ಅರಿತುಕೊಳ್ಳಲು ಎಂದು ಮತ್ತು ಕೆಲವರು, ಮುಂದೆ ಅನಾಹುತವಾದೀತೆಂಬ ಲೋಕಹಿತಾಸಕ್ತಿ ಮತ್ತೆ ಕೆಲವರಿಗೆ. ಹೇಳಲು ಬಂದು ಹೊಚ್ಚ ಹೊಸ ಸುದ್ದಿ ಸಿಕ್ಕಿತಲ್ಲ ಎಂದೂ ಮತ್ತೂ ಕೆಲವರ ಸಂತಸ. ಹೀಗಾಗಿ ವಿಚಾರ ಅಳ್ಳಯ್ಯ-ಮಧುವಯ್ಯರವರೆಗೆ ತಲುಪಿತ್ತು.

ಮಧುವಯ್ಯನವರು ತಾನು ಇದುವರೆಗೆ ಬಾಳಿದ್ದಂತೆ ಮುಂದೂ ನಡೆಯಲು ತೀರ್ಮಾನಿಸಿದರು, ಎಂದಿದ್ದರೂ ಮಗಳ ಮದುವೆಯಾಗಬೇಕು. ಶಿವಭಕ್ತರಲ್ಲಿ ಕುಲವನ್ನರಸಬಾರದೆಂಬ ಆದರ್ಶಕ್ಕೆ ಆತ ಬದ್ಧ. ಎಲ್ಲ ದೃಷ್ಟಿಯಿಂದಲೂ ಯೋಗ್ಯನಾದ ಕೇತಗ ಚಂದಲೆಯನ್ನು ಮದುವೆಯಾದರೆ ತೊಂದರೆಯೇನು, ಶಿವ ಮೆಚ್ಚುವ ಕೆಲಸ ಇದು ಎಂದು ಅವರ ಅನಿಸಿಕೆ. ಆದರೆ ಅಳ್ಳಯ್ಯನವರಿಗೇ ಅಳುಕು. ನಾವೂ ಲಿಂಗ ಕಟ್ಟಿಕೊಂಡಿರಬಹುದು, ಆದರೆ ಬಿಲ್ವಪತ್ರೆಕಾಯಿ ಬೇಲದಕಾಯಿ ಎಂದಾದರೂ ಆದೀತಾ? ಎಂದು ಅವನ ಪಶ್ನೆ. "ಬೇಲದ ಕಾಯಿಗಿಂತ ಬಿಲ್ವಪತ್ರೆಕಾಯಿ ಶಿವನಿಗೆ ಹತ್ತಿರ" ಎಂದು ಮಧುವಯ್ಯನವರ ಉತ್ತರ.

"ನಿಮ್ಮ ತರ ಮಾತು ಬಲ್ಲವನಾ ದೇವರೇ ನಾನು. ಇನ್ನೂ ಏನು ಕಾದದೋ ಶಿವನೇ, ಈ ಕೇತಗ ನನ್ಮಗ ಮಾಡೋದು ಒಂದೊಂದಲ್ಲ" ಎಂದು ಹಲುಬುತ್ತಲೇ ಇದ್ದರು ಅಳ್ಳಯ್ಯ. ಇನ್ನು ಕೇತಗ-ಚಂದಲೆಯರು ಏನು ಹೇಳಿಯಾರು? ಹತ್ತಿರ ಇರಲು ಬಯಸಿದ್ದರು. ಸದ್ಯಕ್ಕಂತೂ ಅವರಿಗೆ ಪರಸ್ಪರ ಸಾಮಿಪ್ಯ ಹಿತವಾಗಿತ್ತು. ಮುಂದೆ ಎಂತೋ ಎಂದು ಆಲೋಚಿಸುವ ಮನಸ್ಸೇ ಅವರದು? ನಿಮ್ಮ ಮನಸ್ಸಲ್ಲಿ ಏನಿದೆ ಎಂದರೆ ಅವರು ಏನನ್ನು ಹೇಳಿಯಾರು? ಕೇತಗ ತಲೆ ತಗ್ಗಿಸುತ್ತಾನೆ. ನಾಚಿಕೆಯ ಜೊತೆ, ತಾನು ತಪ್ಪು ಮಾಡಿಬಿಟ್ಟಿರುವೆನೇ ಎಂಬ ಸಂದೇಹ, ಅಳುಕು. ಚಂದಲೆ ನಾಚಿಕೆಯ ಮುದ್ದೆಯಾಗುತ್ತಾಳೆ, ಇನ್ನೂ ಒಂದು ಮಾತು ಆಡಿದರೆ ಕಣ್ಣಂಚಿನಲ್ಲಿ ಎರಡು ಮುತ್ತಿನ ಹನಿಗಳು ಕಾಣಿಸಿಕೊಳ್ಳುತ್ತವೆ. ಊರಲ್ಲಿ ಈಗ ಒಂದು ಬಗೆಯ ಬಿಗುಪಿನ ವಾತಾವರಣ. ಅನುಮಾನ, ಕೋಪ, ಉದ್ವೇಗ ಯಾವುದೂ ಹೊರಗೆ ಕಾಣಿಸದು. ಆದರೆ ಏನೋ ಒಳಗುದಿ. ಯಾರೂ ದ್ವೇಷಿಸಬೇಕಾದಂಥ ವ್ಯಕ್ತಿಗಳಲ್ಲ. ಆದರೆ ಸಂಪ್ರದಾಯ ಅನ್ನುವುದಿದೆಯಲ್ಲ, ಒಂದು ಬಗೆಯ ದಿಗ್ಭ್ರಮೆ ಬಹುಮಂದಿಯಲ್ಲಿ. ಇಂಥ ಪ್ರಸಂಗದ ಕಾರಣದಿಂದಲೇ ಬಸವಣ್ಣನವರಿಗೆ ಕರೆ ಕಳಿಸಿದ್ದು.

ವಿಷಯ ತಿಳಿದಂತಾಯಿತು. ಬಸವಣ್ಣನವರಿಗೂ ಹೊಸಬಗೆಯ ಪ್ರಸಂಗ ಎದುರಾಗಿತ್ತು. ತಾವು ಡೋಹರ ಕಕ್ಕಯ್ಯನ ಮಗ, ಮಾದಾರ ಚೆನ್ನಯ್ಯನ ಮಗ ಎಂದು ಭಾವಿಸಿದ್ದ ಅವರು ಸಮಸ್ಯೆಯ ಹೊಸ ಮಗ್ಗುಲನ್ನು

ಎದುರಿಸುವ ಕ್ಷಣ ಬಂದಿತ್ತು. ಶಿವ ಭಕ್ತರೆಲ್ಲ ಕುಲಜರು ಎಂಬ ಮಾತಿಗೆ ಎರಡು ಇಲ್ಲ. ಆದರೆ ಈ ಕಂದಮ್ಮಗಳು ಮದುವೆಯಾದರೆ ಸುಖವಾಗಿರಬಲ್ಲರೇ ಎಂಬುದು ಆ ಸಮಸ್ಯೆ. ಈಗ ಹೇಗೆಯೋ ದೇಹದ ಬಯಕೆಯ ಕಾವಿನಲ್ಲಿ ಬೆಸುಗೆ ಹಾಕಿಕೊಳ್ಳಬಹುದು. ಆದರೆ ಮುಂದೇನು? ಆಚಾರ–ವಿಚಾರ, ಊಟ–ಉಪಚಾರ, ಮಾಟ–ನೋಟ, ಇವುಗಳಲ್ಲಿ ಅಪಾರ ವ್ಯತ್ಯಾಸವಿರುವ ಇಬ್ಬರು ಜೀವಮಾನವಿಡೀ ಒಟ್ಟಿಗೆ ಬಾಳಬೇಕೆಂದರೆ, ಅದೂ ಒಬ್ಬರ ವ್ಯಕ್ತಿತ್ವದ ಅರ್ಧ ಇನ್ನೊಬ್ಬರ ಅರ್ಧದಲ್ಲಿ ಸೇರಿಹೋಗಿ! ಅವರ ಮಕ್ಕಳ ಗತಿ? ಎಲ್ಲ ಸರಿಯಾದರೆ ಸರಿ. ಗಂಡು–ಹೆಂಡಿರಲ್ಲಿ ಕೊಂಚ ವಿರಸ ಬಂದರೆ, ಕಾಲ ಕ್ರಮೇಣ ಉಲ್ಬಣವಾದರೆ, ಮನೆ ರಣರಂಗವಾದರೆ ಬಲಿಯಾಗುವವರು ಮಕ್ಕಳಲ್ಲವೇ? ಇದು ಪೀಳಿಗೆಯಿಂದ ಪೀಳಿಗೆಗೆ ಹಾದು ಹೋಗುವಂತಾದರೆ....

ಉಹ್ಲೂ. ಆದರ್ಶವು ವಾಸ್ತವವಾಗಲು ತೊಡಗಿರುವ ಕಾಲ ಇದು. ಉಂಬಲ್ಲಿ ಉಡುವಲ್ಲಿ ಶಿವಾಚಾರ, ಕೊಂಬಲ್ಲಿ ಕೊಡುವಲ್ಲಿ ಕುಲಾಚಾರವೆಂದು ಇತರರು ಹೇಳಿದಂತೆ ತಾವೂ ಭಾವಿಸಿದರೆ ಹೇಗೆ? ಇದೊಂದು ದಿವ್ಯ. ಇದರಲ್ಲಿ ಗೆಲ್ಲಬೇಕು. ಮುಂದಿನ ಪೀಳಿಗೆಯ ಶಿವಭಕ್ತರಿಗೆ ಜಾತಿರಹಿತ ಸಮಾಜದ ಮೇಲ್ಪಂಕ್ತಿ ನನ್ನ ಕಾಲದಲ್ಲೇ ಹಾಕಬೇಕು. ಉಂಡು ತಿಂದು ಮಾತಾಡಿ, ಮನೆತನ ಬೆಳಿಸುವ ಸನ್ನಿವೇಶದಲ್ಲಿ ಹಿಂದೆಗೆದರೆ ಭಕ್ತರ ನಡುವಣ ವ್ಯತ್ಯಾಸ ಹೋಗುವುದೆಂತು? ಈ ಮದುವೆ ನಡೆಯಬೇಕು. ಅಲ್ಲದೆ ಇದಕ್ಕೆ ವಿರೋಧವೇ ಇಲ್ಲವಲ್ಲ. ಅಳ್ಳಯ್ಯನಲ್ಲಿರುವುದು ಅಂಜಿಕೆಯೇ ವಿನಾ ಇದು ಆಗಬಾರದೆಂಬ ಕ್ರೋಧವಲ್ಲ. ಇಂಥ ಸಂದರ್ಭಗಳಲ್ಲಿ ವಿರೋಧ ಬರುವುದು ಮೇಲುಗಡೆಯ ಜನರಿಂದ. ಆದರೆ ಮಧುವಯ್ಯ ಆದರ್ಶ ಮೂರ್ತಿ. ಹೆಣ್ಣಿನ ತಂದೆಯಾಗಿ ಅವನು ತೆಗೆದುಕೊಂಡ ದೃಢನಿರ್ಧಾರ ತಮ್ಮನ್ನೂ ನಾಚಿಸುವಂಥದು. ಇದು ಬೇಡ ಎಂದರೆ ತಾವಾಡಿದ ಮಾತಿನ ಅರ್ಥವೇನು. ರಕ್ತ ಬೆರೆತಲ್ಲದೇ ವ್ಯತ್ಯಾಸ ಹೋದೀತೇ?

ಅಥವಾ ಕೇತಗ–ಚಂದಲೆ ನೋವಿಗೆ ಸಿಲುಕಬಹುದು, ಮುಂದೆ....? ಹಿನ್ನೆಲೆಯ ಕಾರಣದಿಂದ. ಆದರೆ ಒಂದು ಸ್ಥಿತಿಯಿಂದ ಇನ್ನೊಂದಕ್ಕೆ ಪರಿವರ್ತನೆಯಾಗುವ ಕಾಲದ ನೋವು ಅನಿವಾರ್ಯ. ಒಳಿತಿಗೆ ಬದಲಾಯಿಸುತ್ತಿರುವ ಕಾರಣದಿಂದ ಸಮಾಜಕ್ಕೆ ಇಂಥ ದಂಪತಿಗಳ ನೋವು ತ್ಯಾಗವಾಗುತ್ತದೆ. ಅವರದು ಬಲಿದಾನವಾಗುತ್ತದೆ. ಪರೀಕ್ಷೆ ಬಂದಿದೆ, ಗೆಲ್ಲಬೇಕು!

ವಿವರವಾದ ವಿಚಾರಣೆಯ ಕೊನೆಗೆ ತೀರ್ಮಾನವಾದದ್ದಿಷ್ಟು: ಪರಸ್ಪರ ಒಪ್ಪಿರುವ, ಮುಗ್ಧರಾದ ಇವರ ಮದುವೆ ಸಮಾಜಕ್ಕೆ ಹಿತಕಾರಿ, ದಾರಿ ದೀಪ. ಅದು ನಡೆಯಲಿ. ಬಸವಣ್ಣನವರ ಬೆಂಬಲ ಅದಕ್ಕಿದೆ. ಅಲ್ಲದೆ ಶರಣ ಚಳುವಳಿಯ ಫಲ ಅದು. ಚಳುವಳಿಯ ಮರ ಹಣ್ಣು ಬಿಟ್ಟಿದೆ; ಚಿರಕಾಲ ಬಾಳಲಿದೆ ಎಂದು ತೋರಿಸುವುದೂ ಅವಶ್ಯಕ. ಹೊಸ ಆಲೋಚನೆಗಳ ಬಗ್ಗೆ

ಸಂದೇಹ ತಾಳಿದ ಜನಗಳಿಗೆ ಉತ್ತರವೂ ಹೌದು. ಆದ್ದರಿಂದ ಇದು ಚಳುವಳಿಯ ದೃಷ್ಟಿಯಿಂದಲೂ ಮುಖ್ಯವಾದದ್ದು. ಹಾಗಾಗಿ ಇಂಥ ಆಲೋಚನೆಯ ಜನಕ್ಕೆ ಆತ್ಮ ವಿಶ್ವಾಸ ಮೂಡಿಸಲು ಮದುವೆ ಶರಣ ಮಾರ್ಗದಲ್ಲಿ ನಡೆಯಬೇಕು. ಭಕ್ತರ ಹರಕೆ ಬೆಂಬಲ ಅದಕ್ಕೆ ಸಿಕ್ಕಬೇಕು. ಸೂಕ್ತ ದಿನದಂದು ಮದುವೆ.

ಬಸವಣ್ಣನವರು ಮಹಮನಗೆ ಹಿಂದಿರುಗಿದಾಗ ಬಳಲಿದ್ದರು. ಆಲೋಚನೆಯ ಭಾರದಿಂದಾಗಿ, ಮುಂದೇನೋ ಎಂಬ ಚಿಂತೆಯಿಂದಾಗಿ. ಆದರೆ ಮನಸ್ಸಿನಲ್ಲಿ ಒಂದು ಬಗೆಯ ಗೆಲುವೂ ಇತ್ತು!

## ೪

ಲಿಂಗಾಯತವು ಮೊದಲಿಂದ ಇದ್ದರೇನು, ಇತರ ಮತಗಳಿಗಿಂತ ಬೇರೆಯೇನಾಗಿರಲಿಲ್ಲ. ಇದನ್ನು ಜನರ ಚಳುವಳಿಯನ್ನಾಗಿ ಮಾಡಲು ಪಟ್ಟ ಪ್ರಯತ್ನಗಳೆಷ್ಟು, ಕೊಟ್ಟ ತಿರುವುಗಳೆಷ್ಟು. ಜಾತಿಯ ಪಿಡುಗಿನ ನಿವಾರಣೆಗಾಗಿ ತಾವು ಕೈಕೊಂಡಿದ್ದ ಮಾರ್ಗ ಜಯಪ್ರದವಾಗುವ ಕಾಲ ಸಮೀಪಿಸಿತ್ತು ಎನಿಸಿತು. ಅನುಲೋಮವೆಂಬ ಹೆಸರಿನಲ್ಲಿ ಮೇಲುವರ್ಣದವರು ಕೆಳವರ್ಣದ ಹೆಂಗಸರೊಡನೆ ಸಂಬಂಧವಿರಿಸಿಕೊಳ್ಳುವುದು ಧರ್ಮಸಮ್ಮತವಂತೆ. ಆದರೆ ತಮ್ಮ ವರ್ಣದ ಹೆಂಗಸು ಮಾತ್ರ ಧರ್ಮಪತ್ನಿಯಾಗಬಹುದು. ಪ್ರತಿಲೋಮ ವಿವಾಹ ಈಗ ಶರಣಮಾರ್ಗದ ಹೊಸ ತಿರುವಾಗಲಿದೆ. ಅದೂ ಕನಿಷ್ಠನ ಹೆಂಡತಿಯಾಗುವವಳು ಮೇಲುವರ್ಣಕ್ಕೆ ಸೇರಿದವಳು. ಈ ದಾರಿ ನಿರ್ಮಾಣಕ್ಕೆ ಎಷ್ಟೊಂದು ಆತಂಕಗಳು!

ಜಾತಿನಿರ್ಮೂಲನವು ಅಂತರ್‌ವರ್ಣ ಅಂತರ್‌ಜಾತಿ ವಿವಾಹದಿಂದ ಮಾತ್ರ ಸಾಧ್ಯವಾದೀತೆಂದು ಜನರಿಗೆ ಮನವರಿಕೆ ಮಾಡಲು ಇಷ್ಟು ವರ್ಷದ ಮೇಲೆ ಸಾಧ್ಯವಾಗಿದೆಯಲ್ಲ, ಅಥವಾ ಸಾಧ್ಯವಾಗಿದೆಯೇ? ಮಧುವಯ್ಯನಂತಹವರು ಎಷ್ಟು ಜನರಿದ್ದಾರೆ? ಅವನೊಬ್ಬನೇ ಎಂದು ಕಾಣುತ್ತದೆ. ತನ್ನ ಹಿಂದಿನ ಗುಂಗನ್ನು ತೊಡೆಯಲು ಅವನೆಷ್ಟು ಕಷ್ಟಪಟ್ಟಿರಬೇಕು! ಹಾಗೆ ನೋಡಿದರೆ ಈ ಜಾತಿ ಗುಂಗು ತನ್ನನ್ನು ತಾನೇ ಬಿಟ್ಟಿದೆಯೇ? ತನ್ನ ಬಾಲ್ಯದ ದಿನಗಳಲ್ಲಿ ಕಂಡ ಆಚರಣೆಗಳು ಹೇಗೆ ತನಗೆ ಒಗ್ಗಿ ಹೋಗಿದೆ! ತಮ್ಮ ಮನೆಯಲ್ಲಿಯೇ ಬೆಳ್ಳುಳ್ಳಿಯ ಉಪಯೋಗ ಇದುವರೆಗೆ ಸಾಧ್ಯವಾಗಿರಲಿಲ್ಲ. ಬೊಮ್ಮಯ್ಯನೆಂಬೊಬ್ಬ ಜಂಗಮ ತಮ್ಮ ಮಹಮನೆಗೆ ಬಂದ. ಎಲ್ಲ ಜಂಗಮರಿಗೂ ಮಹಮನೆಯಲ್ಲಿ ಸದಾ ದಾಸೋಹ. ಇದರಿಂದ ಕೆಲವೇಳೆ ಸಮಸ್ಯೆಗಳು ಉದ್ಭವವಾಗುವುದೂ ಉಂಟು. 'ಅವನಿಗೆ ತನಗಿಂತ ಹೆಚ್ಚು ಸನ್ಮಾನವಾಯಿತು, ಗೌರವ ದೊರಕಿತು'; 'ಅವನನ್ನು ನನ್ನ ಪಕ್ಕದಲ್ಲಿಯೇ ಕೂರಿಸಿದ್ದರು, ಅವನೋ ಶ್ವಪಚ'; ಬೇರೆಯವರಿಗೆ ಏನಾದರೂ ನೀಡುತ್ತಿದ್ದರೆ ಇವನ ಕಣ್ಣಲ್ಲಿ ಆಸೆಯ ಜೊಲ್ಲು! ಛೆ, ಬೇಸರವೆನಿಸುತ್ತದೆ, ಆದರೆ ಇವೆಲ್ಲ ಚಳುವಳಿಯ ಭಾಗವಲ್ಲವೇ?

ಅಂದ ಹಾಗೆ ಬೊಮ್ಮಯ್ಯ, ಬಂದ, ಕೆಲವು ದಿನ ತಂಗಿದ್ದ. ಒಂದು ದಿನ ಸಂಜೆ ನಾನೇಕೋ ಆಡುಗೆಯ ಮನೆಯ ಕಡೆ ಸುಳಿದಾಡಿದಾಗ ಬೆಳ್ಳುಳ್ಳಿಯ ಒಗ್ಗರಣೆಯ ವಾಸನೆ! ಮೂಗಿಗೆ ಸಹಿಸಲಸಾಧ್ಯ! ಎಂದಾದರೂ

ನಮ್ಮ ಮನೆಯಲ್ಲಿ ಮಾಡಿದ್ದರೆ ತಾನೇ! ನಾನು "ಯಾರಪ್ಪಾ ಇದನ್ನು ತರಹೇಳಿದ್ದು. ನಾಳೆಯಿಂದ ಇದು ಬೇಡ" ಎಂದಿದ್ದೆ. "ಆಯಿತು, ಅಣ್ಣಾವರೆ" ಎಂದರು ಅಡುಗೆಯವರು.

ಮಾರನೇ ದಿನ ಅಡುಗೆಯ ಮನೆಯ ಬಳಿ ರಾದ್ಧಾಂತ. ಹೋಗಿ ನೋಡುತ್ತೇನೆ: ಬೊಮ್ಮಯ್ಯ ಅಡುಗೆಯವರ ಮೇಲೆ ಹರಿಹಾಯುತ್ತಿದ್ದಾನೆ! ಅವನ ಮುನಿಸನ್ನು ಇಳಿಸಬೇಕಾದರೆ ಸಾಕುಬೇಕಾಯಿತು. ಕೊನೆಗೂ ಶಿವನಾಣೆಯಿಟ್ಟು, ಮುಂದೆ ತಮ್ಮ ಮನೆಯಲ್ಲಿ ಬೆಳ್ಳುಳ್ಳಿಗೆ ಮರ್ಯಾದೆ ಎಂದ ಮೇಲೆ ನೆತ್ತಿಯವರೆಗೆ ಏರಿದ್ದ ಕೋಪ ಮೂಗಿಗೆ ಇಳಿಯಿತು! ಇಂಥ ವಿಷಯಕ್ಕೆ ಕೋಪಿಸಿಕೊಳ್ಳುವುದೇ, ಅದೂ ಬಂದ ಮನೆಯಲ್ಲಿ? ಭಕ್ತನಾಗಿ, ಭೃತ್ಯಾಚಾರಿಯಾಗಿ ನನ್ನ ಮನಸ್ಸಿನಲ್ಲಿ ಇಂಥ ಆಲೋಚನೆಗಳು ಬರಬಾರದು, ನಿಜ. ಆದರೆ ಜಂಗಮನಾದಾಕ್ಷಣ ತನ್ನ ಸಕಲ ಅಭೀಷ್ಟಗಳೂ ನೆರವೇರಬೇಕಾದದ್ದು ಸಹಜವೆಂಬಂತೆ, ಎಲ್ಲರೂ ತನ್ನ ಇಷ್ಟಾನಿಷ್ಟಗಳಿಗೆ ಅನುಗುಣವಾಗಿ ನಡೆಯಬೇಕೆಂದು ನಿರೀಕ್ಷಿಸುವುದು ಸರಿಯೇ? ಜಂಗಮನೆಂದರೆ ಶರಣ ಮಾರ್ಗಪೋಷಕನೆಂದೇ ನಮ್ಮೆಲ್ಲರ ಅಭಿಮತ. ಜನರಿಗೆ ತತ್ವಮಾರ್ಗವನ್ನು ಬೋಧಿಸಿ, ಸರಿಯಾದ ನಡವಳಿಕೆಯನ್ನು ತೋರಿಸುವ ಹೊಣೆಗಾರಿಕೆ ಹೊತ್ತವರು ಇವರು, ಅವರ ಹೊಣೆಯನ್ನು ಸಮಾಜ ಹೊರಬೇಕೆಂದು ನಾವೆಲ್ಲ ಪ್ರಚಾರ ಮಾಡಿದವರೇ. ಆದರೆ ಭಕ್ತರು ತಮ್ಮನ್ನು ಸ್ವಇಚ್ಛೆಯಿಂದ ಅನುಸರಿಸುವಂತೆ ಮಾಡುವ ವ್ಯಕ್ತಿತ್ವವನ್ನು ಅವರು ಬೆಳೆಸಿಕೊಳ್ಳಬೇಡವೇ?

ಈ ಜಂಗಮರಲ್ಲೂ ಕೆಲವರು ಭಕ್ತರ ಜಾತಿಯನ್ನು ಪ್ರಶ್ನಿಸುತ್ತಾರಂತೆ. ಅವರ ಮನೆಗೆ ಬನ್ನಕ್ಕೆ ಹೋದಾಗ, ಜಾತಿಯಾವುದೆಂದು ಕೇಳಿ ಒಪ್ಪಿಗೆಯಾದರೆ ಆರೋಗಣೆ ಸ್ವೀಕರಿಸುವುದು, ಇಲ್ಲದಿದ್ದರೆ ಅಕ್ಕಿ–ಕಣಕ–ತೆಂಗಿನಕಾಯಿ ಕೇಳಿ ತೆಗೆದುಕೊಳ್ಳುತ್ತಾರಂತೆ. ಗುರುಗಳೂ ಹಾಗೆಯೇ ಅಂತೆ, ಚೆನ್ನಾಯಿತು! ಜಾತಿವಿಹೀನ ಸಮಾಜನಿರ್ಮಾಣಕ್ಕೆ ಬದ್ಧಕಂಕಣರಾಗಬೇಕಾದವರೇ ಹೀಗಾದರೆ ಗತಿಯೇನು? ನಡೆಲಿಂಗ ಜಂಗಮನೆಂದು ನಾನೇ ಒಂದೆಡೆ ವಿವರಿಸಿದ್ದೇನೆ. ಆದರೆ ಅದಕ್ಕೆ ಅವರು ಯೋಗ್ಯರಾಗಬೇಡವೇ. ಬೇಲಿಯೇ ಹೊಲ ಮೆಯ್ದರೇನು ಗತಿ? ಹಾಗೆಯೇ ಕೆಲವರು ಭಕ್ತರೂ ನೀಡುವಾಗ ಜಂಗಮರ ಜಾತಿಯನ್ನು ವಿಚಾರಿಸುವರಂತೆ. ನಿಧಾನವಾಗಿ ಜಾತಿ ಬಳ್ಳಿ ನಮ್ಮ ಕಾಲಿಗೆ ತೊಡಕಾಗುತ್ತಿದೆಯೇನೋ ಎನಿಸುತ್ತದೆ. ಈ ಜಂಗಮರಲ್ಲಿ ಕೆಲವರ ವರ್ತನೆಯಿಂದ ಎಲ್ಲರಿಗೂ ಕೆಟ್ಟ ಹೆಸರು. ಭಕ್ತರು ತಮ್ಮನ್ನು ಓಲೈಸುವುದು ತಮ್ಮ ಹಕ್ಕು ಎಂಬಂತೆ ವರ್ತಿಸುತ್ತಾರೆ, ಅದಕ್ಕೆ ತಾವು ಅರ್ಹತೆಯನ್ನು ಪಡೆಯಬೇಕೆಂಬ ಹೊಣೆಗಾರಿಕೆ ಅವರಿಗಿರಬೇಡವೇ? ಜಂಗಮರೆಲ್ಲ ಅಲ್ಲಮಪ್ರಭುಗಳೇನು? ಅವರಾದರೆ ಸಿಡಿಲಮರಿಯೇ ಸರಿ. ಶಿವನಿಗೆ ಇರುವ ಮೂರು ಕಣ್ಣುಗಳಲ್ಲಿ ಒಂದು ಕೆಂಡಗಣ್ಣಾದರೆ, ಅಲ್ಲಮರಿಗಿರುವ ಎರಡೂ ಕಣ್ಣುಗಳು ಉರಿಗಣ್ಣುಗಳೆಂದು ನಾನೇ ಒಮ್ಮೆ ವರ್ಣಿಸಿದ್ದೇನೆ. ಅಷ್ಟು ಕೋಪ ಅವರಿಗೆ. ಆದರೆ ಏತಕ್ಕೆ

ಕೋಪ? ತನಗೆ ಅದು ನೀಡಲಿಲ್ಲ, ಇದು ನೀಡಲಿಲ್ಲ ಎಂಬ ಕ್ಷುಲ್ಲಕ ಕಾರಣಕ್ಕಾಗಿಯೇ? ಛೇ, ಅಲ್ಲಮರು ಬೆಂಕಿಯಿದ್ದಂತೆ; ಕ್ಷುದ್ರತೆಯೆಲ್ಲ ಅದರಲ್ಲಿ ಭಸ್ಮವಾಗಿಬಿಡುತ್ತದೆ. ಅವರ ಕೋಪವೇನಿದ್ದರೂ ಕೊಳಕಿನ ಬಗ್ಗೆ, ಬೆಳಕಿನ ಬಗ್ಗೆ ಅಲ್ಲ. ಅವರನ್ನು ನೆನೆದಾಗ ಚೇತನ ಏರಬಲ್ಲ ಎತ್ತರ ಎಷ್ಟು ಎಂದು ಬೆರಗಾಗುತ್ತದೆ. ಅದೂ ಯಾವ ಸ್ಥಿತಿಯಿಂದ ಎಂಥ ಸ್ಥಿತಿಗೆ ಅವರ ಬದುಕು ಬದಲಾಯಿಸಿತು? ಹೆಣ್ಣೊಂದರಲ್ಲಿ ಅನುರಕ್ತರಾಗಿ, ಅವಳಲ್ಲೇ ಜೀವವಿರಿಸಿಕೊಂಡು, ಅವಳ ಸಹವಾಸದಲ್ಲಿ ಸಮಾಜದ ಕ್ರೋಧವನ್ನೂ ಎದುರಿಸಿಬಲ್ಲ ಕೆಚ್ಚು ಬೆಳೆಸಿಕೊಂಡು ಬಾಳುತ್ತಿರಬೇಕಾದರೆ, ಜೀವನದ ಅರ್ಥ ಎನಿಸಿದ್ದ ಅವಳೇ ತೀರಿಹೋದರೆ! ದುರ್ಭರ ಏಕಾಕಿತನ. ಆದರೆ ಅಳವಾಗಿ ಹೆಣ್ಣನ್ನು ಪ್ರೇಮಿಸಬಲ್ಲವನು ಆಳವಾಗಿ ಶಿವನನ್ನೂ ಪ್ರೇಮಿಸಬಲ್ಲ ಎಂಬುದು ಅವರ ಬಾಳಲ್ಲಿ ಆದ ವ್ಯತ್ಯಾಸದ ತಿರುಳು. ಏಕೆಂದರೆ ಆ ತನ್ಮಯತೆಯ ಸ್ವಭಾವ. ಅದು ಇದ್ದರೆ ಬೆಳೆಸಿಕೊಳ್ಳಬಹುದು. ಪ್ರೇಮವೆಂದರೆ ತ್ಯಾಗವಲ್ಲವೇ? ಹೆಣ್ಣಿಗಾಗಿ ತ್ಯಾಗಮಾಡಬಲ್ಲವ ಶಿವನಿಗಾಗಿಯೂ ತ್ಯಾಗಮಾಡಬಲ್ಲ. ಸಮಯ ಒದಗಿತು; ಅಂತರ್ಮುಖಿಯಾಗಿದ್ದ, ವ್ಯಕ್ತಿಗತವಾಗಿದ್ದ ತನ್ಮಯತೆ ಸಮಾಜ ಮುಖಿಯಾಯಿತು. ಶಿವಮುಖಿಯಾಯಿತು, ಏನು ಮಾಡಿದರೂ ನೂರಕ್ಕೆ ನೂರರಷ್ಟು ತನ್ಮಯತೆ. ಅಂತಹ ಅಲ್ಲಮಪ್ರಭುಗಳನ್ನು ನೆನಪಿಸಿಕೊಂಡಾಗ ಹೃದಯದಲ್ಲಿ ಹೇಳಲಾರದ ಧನ್ಯತೆಯ ಭಾವನೆ. ಅವರೆಲ್ಲಿ, ಈ ಸೊರಜು ಜಂಗಮರೆಲ್ಲಿ!

ಈ ಜಾತಿಯ ನಿರ್ಮೂಲನಕ್ಕಾಗಿ ನಮ್ಮ ಹೋರಾಟ ಆರಂಭವಾದದ್ದೂ ಮಂಗಳವಾಡದಲ್ಲಿಯೇ. ನಿಧಾನವಾಗಿ ಶರಣ ತತ್ವದಿಂದ ಜನ ಆಕರ್ಷಿತರಾದರು. ಅದರಲ್ಲೂ ಕೆಳವರ್ಗದಲ್ಲಿ ಬೇಯುತ್ತಿದ್ದ ಜನರು. ಅವರ ಜೀವನದಲ್ಲಿ ಮೊದಲು ಅರ್ಥವಂತಿಕೆಯೇ ಇರಲಿಲ್ಲವಲ್ಲ. ತಮ್ಮೆಲ್ಲ ಯೋಗಕ್ಷೇಮವನ್ನೂ ಮೇಲುವರ್ಣದವರ ಕೈಯಲ್ಲಿ ಹಾಕಿ ದುಡಿಯುವುದಷ್ಟೇ ಅವರ ಹಣೆಬರಹವಾಗಿತ್ತು. ಆದರೆ ನಮ್ಮ ಶರಣಮಾರ್ಗ ಅವರಿಗೆ ಆತ್ಮಪ್ರತ್ಯಯವನ್ನು ತಂದುಕೊಟ್ಟಿತು, ಎಂಥ ಧನ್ಯತಾಭಾವ ತುಂಬುತ್ತದೆ, ಮನವನ್ನು! ಆದರೆ ಇದು ಕೇವಲ ತೋರಿಕೆಯದೇ ಎಂದೂ ಕೆಲವೇಳೆ ಅನ್ನಿಸುತ್ತದೆ.

ನಾಗಿದೇವನ ಪ್ರಸಂಗವೇ ಸಾಕು ಬೇಸರ ತರಲು, ಆ ಪುಣ್ಯಾತ್ಮನಿಂದಲ್ಲ ಬೇಸರ, ಆ ಪ್ರಸಂಗದ ಪರ್ಯವಸಾನದ ರೀತಿ ಬೇಸರ ತರುವಂಥದ್ದು. ಅಂದೇನೋ ತಮ್ಮ ಮನೆಯಲ್ಲಿ ವಿಶೇಷವೆಂದು ಆತ ನನ್ನನ್ನು ಮನೆಗೆ ಆತಿಥ್ಯಕ್ಕಾಗಿ ಆಹ್ವಾನಿಸಿದ್ದ. ನಾನು ಹಾಗೆಲ್ಲ ಇತರರ ಮನೆಗೆ ಅತಿಥಿಯಾಗಿ ಹೋಗುವವನಲ್ಲ; ನಾನೊಬ್ಬನೇ ಭಕ್ತ, ಮಿಕ್ಕವರೆಲ್ಲ ಜಂಗಮರು. ನಾನೊಬ್ಬನೇ ಭೃತ್ಯಾಚಾರ ಮಾಡಬೇಕಾದವನು ಎಂಬ ನಂಬಿಕೆ ನನ್ನದು. ಅಥವಾ ಇದರಲ್ಲಿ ನನ್ನ ಮನಸ್ಸಿನ ಸಣ್ಣತನವೂ ಸೇರಿದೆಯೇ? ಏಕೆಂದರೆ ನನ್ನ ಪೂರ್ವಜರ ಜಾತಿಯ ನೆರಳು ನನ್ನ ಬದುಕಿನಲ್ಲಿ ಎಷ್ಟೋ ಸಲ ದಟ್ಟವಾಗಿ ಆವರಿಸಿಲ್ಲವೇ?

ಅನ್ಯರಿಗೆ ಅಸಹ್ಯಪಡಬೇಡ ಎಂದು ನಾನು ತಿಳಿಹೇಳಿದರೂ ಎಷ್ಟೋ ಜನರ ಬಾಳು, ನಡವಳಿಕೆ, ಮಾತು – ಎಲ್ಲಾ ನನ್ನಲ್ಲಿ ಅಸಹ್ಯವನ್ನುಂಟುಮಾಡುವುದು ಸುಳ್ಳೇ? ಯಾರಾದರೂ ನನಗೆ ಸರಿಕಾಣದ ರೀತಿಯಲ್ಲಿ, ತುಚ್ಛವಾಗಿ ವರ್ತಿಸಿದರೆ, ಹುಟ್ಟುಗುಣ ಎಲ್ಲಿ ಹೋದೀತು ಎಂಬ ತಿರಸ್ಕಾರ ಭಾವನೆ ಮನಸ್ಸಿನಲ್ಲಿ ಮೂಡುವುದಿಲ್ಲವೇ? ಹೊರಗೆ ಆ ಭಾವನೆ ಕಾಣದಂತೆ ವರ್ತಿಸಿ ಇತರರಿಂದ ಭೇಷ್, ಎಂಥ ಸಹಿಷ್ಣು ಎನ್ನಿಸಿಕೊಳ್ಳಬಹುದು. ಆದರೆ ನನ್ನದೇ ಅಂತರಂಗದಲ್ಲಿ ಸುಳಿಯುವ ಭಾವನೆಗೆ ನಾನು ಕುರುಡಾಗಲು ಸಾಧ್ಯವೇ? ವಿಚಾರದ ಬುದ್ಧಿಯಿಂದ ಇಂಥ ಅನ್ನಿಸಿಕೆಗಳನ್ನು ಹತ್ತಿಕ್ಕಲು ನಾನು ಪಡುವ ಪ್ರಯತ್ನವೆಷ್ಟು, ನಾನು ಹಾರುವನೆಂದರೆ ಕೂಡಲಸಂಗಮ ದೇವ ನಗುವನಯ್ಯಾ! ಜೋರಾಗಿ ಅನ್ನದೇ ಮನಸ್ಸಿನಲ್ಲಿಯೇ ಅಂದುಕೊಂಡರೂ ನಗದೇ ಇರುವನೇ. ಆದ್ದರಿಂದಲೇ ಬಹಿರಂಗದ ನಡವಳಿಕೆಯಲ್ಲಿ, ಮಾತಿನಲ್ಲಿ, ವಚನಗಳಲ್ಲಿ ನನ್ನ ಕ್ಷುಲ್ಲಕತೆಯನ್ನು ತುಳಿಯುವ ಪ್ರಯತ್ನ ಮಾಡುತ್ತೇನೆ.

ಅಂಥ ಹಾಗೆ, ನಾಗಿದೇವನ ಪ್ರಸಂಗ. ಅವನ ಮನೆಗೆ ಹೋದೆ. ವ್ಯಕ್ತಿಯ ಮನಸ್ಸು ಶುಭ್ರವಾಗಿರಬೇಕಾದದ್ದು ಸರಿ, ಬಾಹ್ಯಶುದ್ಧಿಗಿಂತ ಅದು ಮುಖ್ಯ. ಆದರೆ ಬಹಿರಂಗಶುದ್ಧಿಯೂ ಬೇಕು. ನಾಗಿದೇವ ಚಿನ್ನದಂತಹ ಮನಸ್ಸಿನವನು. ನಾನು ಬರುವೆನೆಂದು ಮನೆಯನ್ನು ಆದಷ್ಟೂ ಚೊಕ್ಕಟವಾಗಿಟ್ಟಿದ್ದ, ಆದರೂ ನನಗೆ ಒಗ್ಗಿರುವ ಚೊಕ್ಕಟತನ ಅಲ್ಲೆಲ್ಲಿ ಬರಬೇಕು? ಅಲ್ಲಿದ್ದದ್ದು ಸ್ವಲ್ಪವೇ ಕಾಲ. ಅವನು ನೀಡಿದ್ದರಲ್ಲಿ ಕೊಂಚವನ್ನು ಸ್ವೀಕರಿಸಿದ್ದೆ. ನನ್ನ ಆಹಾರವೇ ಮಿತ. ಆದರೂ ನಮ್ಮ ಮನೆಯಲ್ಲಿ ಉಣ್ಣುವಾಗಿನ ತೃಪ್ತಿ, ಅಲ್ಲಿ ನನಗೆ ಬರಲಿಲ್ಲ. ಆಸೆಪಟ್ಟು ತಿನ್ನುವ ಹಾಗಿರಲಿಲ್ಲ. ರುಚಿ ಬೇರೆ, ಶುಚಿಯ ಸ್ವರೂಪ ಬೇರೆ. ಚಳುವಳಿಯ ಐಕ್ಯದ ದೃಷ್ಟಿಯಿಂದ ಇದನ್ನು ಸಹಿಸಿಕೊಳ್ಳಬೇಕು. ಅಲ್ಲಮಪ್ರಭುಗಳ ಹಾಗೆ ಸಮಾಜವನ್ನು ತಿದ್ದಿದರೂ ಹೊರಗಿದ್ದುಕೊಂಡರೆ ಒಂದು ರೀತಿ, ನನ್ನ ಹಾಗೆ ಒಳಸಂಘಟನೆ ಮಾಡುವವನಾದರೇ?

ನಾನು ನಾಗಿದೇವನ ಮನೆಯಿಂದ ಅರಮನೆಗೇ ಹೋಗಬೇಕಾಗಿತ್ತು. ಪ್ರಭುಗಳಲ್ಲಿ ಕೆಲಸವಿತ್ತು. ಆದರೆ ಅರಮನೆ ತಲುಪುವ ಹೊತ್ತಿಗೆ ಸುದ್ದಿ ತಲುಪಿತ್ತು; ನಾನು ನಾಗಿದೇವನ ಮನೆಗೆ ಭೇಟಿಕೊಟ್ಟು ನೇರವಾಗಿ ಬರುತ್ತಿದ್ದೇನೆಂದು ರಾಜರು ಹೊರ ಆವರಣದಲ್ಲಿ ಪೀಠಗಳನ್ನು ಹಾಕಲು ಹೇಳಿದ್ದರಂತೆ. ನನಗೆ ಅಸಮಾಧಾನವಾಯಿತು. ವ್ಯವಹಾರವೆಲ್ಲ ಮುಗಿಯಿತು. ಹೊರಡುವಾಗ ಪ್ರಭುಗಳು ತಮ್ಮೆಡೆಗೆ ಬರಹೇಳಿ ಮಲ್ಲನೆ ಉಸುರಿದರು; "ಬಸವಣ್ಣನವರೇ, ಈ ಏರ್ಪಾಡಿಗೆ ತಪ್ಪು ತಿಳಿಯಬೇಡಿ, ನಮ್ಮ ರಾಜಗುರುಗಳ ಆಗ್ರಹ. ನಿಮ್ಮನ್ನು ಹೀಗೆಳೆಯುವ ಉದ್ದೇಶವಲ್ಲ." ಬಿಜ್ಜಳ ಎಂದೂ ಹಾಗೆಯೇ; ಮಿತವಚನ ಅವರದು. ಆದರೆ ಅಧಿಕಾರಗಳಿಕೆಯಲ್ಲಿ ಅವರ ಕಣ್ಣು ಸದಾ ಆಕಾಶಗಾಮಿ. ನನಗೇನು? ಅದು ಅವರ ಸ್ವಂತ ವಿಷಯ. ನಾನೇನೂ ಅಧಿಕಾರದ ವಿಷಯದಲ್ಲಿ ಅವರ ಪ್ರತಿಸ್ಪರ್ಧಿಯಲ್ಲ. ನನ್ನ ಬಗ್ಗೆ ಅವರೆಂದೂ

ವಿಶ್ವಾಸ–ಗೌರವದಿಂದಲೇ ನಡೆದುಕೊಂಡಿದ್ದಾರೆ. ಅವರ ಬಗ್ಗೆ ಅಸಮಾಧಾನಕ್ಕೆ ಅವಕಾಶವೇ ಇಲ್ಲ. ನಾಗಿದೇವನ ಪ್ರಸಂಗದಲ್ಲಿ ನನಗೆ ಬೇಸರವಾದುದ್ದಕ್ಕೆ ಅನೇಕ ಭಕ್ತರೇ ನನ್ನ ಭೇಟಿಯ ಬಗ್ಗೆ ಹೀಗಳೆದು ಮಾತಾಡಿದ್ದು ಕಾರಣವಾಯಿತು. ನನ್ನೆದುರಿಗೆ ಮಾತನಾಡಿಯಾರೇ? ಹೀಗೇ ಇಂಥ ಮಾತುಗಳು ಕಿವಿಯ ಮೇಲೆ ಬೀಳುತ್ತದೆ. ಹಾಗೆ ಹೇಳಿದವರನ್ನು ಪೂರ್ಣ ನಂಬಬಹುದೇ ಎಂಬುದೂ ಅನುಮಾನಾಸ್ಪದ. ಆದರೂ ಒಂದು ರೀತಿಯಲ್ಲಿ ವಿಷಯ ಸತ್ಯವೇ. ಯಾರು ಕರೆದರೂ ಮನೆಗೆ ಹೋಗದ ನಾನು ನಾಗಿದೇವನ ಮನೆಗೆ ಹೋದದ್ದು ಅಚ್ಚರಿಯ ಸಂಗತಿಯೇ. ಆದರೆ ಒಂದು ರೀತಿ ಪ್ರಚಾರಕ್ಕೆ ನಾನು ಹೀಗೆ ಮಾಡುತ್ತಿರುವೆನೆಂದು ಕೆಲವರು ಭಕ್ತರೇ ಅಂದುಕೊಂಡರಂತೆ.

ಜಾತಿ ಎಂದರೆ ಇಂತಹುದು. ಬೇರೆ ಬೇರೆ ಜಾತಿಗಳ ಕೇರಿಗಳಲ್ಲಿ ಆಂದೋಲನ ಸಭೆಗಳನ್ನು ನಾವು ಮಾಡುತ್ತಿದ್ದುದು ಇದಕ್ಕಾಗಿ. ಸ್ವಭಾವದಲ್ಲಿಯೇ ಆಳವಾಗಿ ಬೇರೂರಿರುವ ಜಾತಿತನವನ್ನು ಸರ್ವಪ್ರಯತ್ನದಿಂದ ಹೊಡೆದೋಡಿಸಬೇಕು. ಈ ಪೀಳಿಗೆಯವರಾದ ನಾವು ಎಚ್ಚರದಿಂದ ವರ್ತಿಸಿದರೆ ಮುಂದಿನ ಪೀಳಿಗೆಯ ಜನರು ಸರಿಯಾದಾರು. ಅಥವಾ ಹಳೆಯ ಚಾಳಿ ಇನ್ನೂ ಅಷ್ಟು ಉಳಿದಿದ್ದರೆ, ಮೂರನೆಯ ಪೀಳಿಗೆಯ ಹೊತ್ತಿಗೆ ಅದು ಪೂರ್ತಿ ಕಣ್ಮರೆಯಾದೀತು. ಆದ್ದರಿಂದ ಸರ್ವಪ್ರಯುತ್ನದಿಂದ ಅದರ ವಿರುದ್ಧ ಹೋರಾಡುತ್ತಿದ್ದದ್ದು. ಅದಕ್ಕೆ 'ಶಿವಾಚಾರ ಆಂದೋಲನ' ವೆಂದೇ ಹೆಸರಿತ್ತಿದ್ದೆವು. ಬೇರೆ ಬೇರೆ ಕಡೆ ಹೋಗಿ ಜಾತಿಯ ವಿರುದ್ಧದ ಕಾರ್ಯಮಾಡುತ್ತಿದ್ದೆವು.

ಇದರಿಂದಾದ ಒಂದು ಮುಖ್ಯ ಉಪಯೋಗವೆಂದರೆ ಕೆಳವರ್ಗದ ಜನರಲ್ಲಿ ಉಂಟಾದ ಅರಿವು. ಅಕ್ಷರ ಕಲಿಯಬೇಕೆಂಬ ಉತ್ಸಾಹ, ತಾವೂ ಏನಾದರೂ ಹೇಳಬೇಕೆಂಬ ತವಕ ಅವರಲ್ಲಿ ಚಡಪಡಗುಡುತ್ತಿತ್ತು. ಅವರ ತರ್ಕಸರಣಿ ಎಷ್ಟೋ ಸಲ ಬೆರಗುಗೊಳಿಸುವಂತಹುದು. ಒಮ್ಮೆ ಹೀಗೇ ಆಂದೋಲನ ಸಭೆ. ಯಾವುದೋ ಕೇರಿ. ನಾನೂ ಅಲ್ಲಿದ್ದೆ. ನಮ್ಮ ಅಂಬಿಗರ ಚೌಡಯ್ಯನವರ ಮಾತು. ಅವರ ಭಾಷಣವೆಂದರೆ ಸಿಡಿಲುಗುಡುಗುಗಳೇ ತುಂಬಿರುತ್ತಿದ್ದವು. ಅವರ ವಾದ ವೈಖರಿಯೂ ಅಂಥದೇ, ಕತ್ತಿ ಝುಳಪಿಸುವ ರೀತಿಯದು. ಮಿಕ್ಕ ಪ್ರಾಣಿಗಳ ಮಾಂಸ ತಿನ್ನುವ ಜನ ಊರೊಳಗೆ ಇರಬಹುದು, ಅಮೃತವನ್ನು ನೀಡುವ ಗೋವನ್ನು ತಿಂಬ ಜನ ಊರ ಹೊರಗಿರಬೇಕೆ? ದನದ ಮಾಂಸ ತುಪ್ಪ ಎಣ್ಣೆ ತುಂಬಲು ಸಿದ್ದಲಿಕೆ ಬುದ್ದಲಿಕೆ ಮಾಡಲು ಬೇಕು. ಅದು ಪವಿತ್ರ. ಬುದ್ದಲಿಕೆಯ ತುಪ್ಪ, ಎಣ್ಣೆ ಪವಿತ್ರ. ದನದ ಚರ್ಮದಿಂದ ಮಾಡಿದ ಮದ್ದಳೆ ನಮ್ಮ ಅಲ್ಲಮಪ್ರಭುವಿನಂತಹವರ ಕೈಲಿ ಶಿವನಿಗೂ ತಲುಪುತ್ತದಲ್ಲ. ಆದ್ದರಿಂದ ದನ ತಿನ್ನುವವರನ್ನು ಹೀನವೆಂದು ಊರ ಹೊರಗೆ ಇರಿಸುವ ಜನ ಗುಜ್ಜ ಹೊಲೆಯರು! ವಾದ ಸರಿ. ಆದರೆ ತನ್ನ ಮನಸ್ಸಿನಲ್ಲಿ ಅಂಥ ಸಂದರ್ಭದಲ್ಲಿ ಯೋಚನೆಗಳ ಸರಣಿಯೇ

ಪ್ರಾರಂಭವಾಗುತ್ತದೆ. ಮಾಂಸ, ದನದ ಮಾಂಸ ತಿನ್ನುವವರನ್ನು ಕೀಳು, ಅತಿಕೀಳು ಎಂದು ಪರಿಗಣಿಸಬಾರದು. ಆದರೆ ಮಾಂಸ ತಿನ್ನಬೇಕೆ? ಸಸ್ಯಾಹಾರಿಗಳಾಗಲು ಎಲ್ಲರಿಗೂ ಸಾಧ್ಯವಿಲ್ಲವೇ? ನನ್ನ ದೃಷ್ಟಿಯಿಂದ ಮಾಂಸಾಹಾರ ಸರಿಯಲ್ಲ, ಏಕೆಂದರೆ ನಾನು ಮಾಂಸಾಹಾರಿಯಲ್ಲ. ಆದರೆ ಮಾಂಸ ತಿನ್ನುವವನ ದೃಷ್ಟಿಯಲ್ಲಿ ಅದು ಸರಿಯೇ ಇರಬಹುದು. ದೀಕ್ಷೆ ಕೊಡುವಾಗ ಇವನ್ನೆಲ್ಲ ವಿಚಾರಿಸಲು ಸಾಧ್ಯವೇ? ಆದಷ್ಟು ಜನ ನಮ್ಮ ಮಾರ್ಗಕ್ಕೆ ಬರಲಿ, ಆಗ ಅವರು ನಮ್ಮವರಾಗುತ್ತಾರೆ. ಅವರನ್ನು ಆಮೇಲೆ ನಾವು ಬದಲಾಯಿಸಬಹುದು–ಇದು ಚಳುವಳಿ ಮಾರ್ಗದ ಮುಂಚೂಣಿಯ ಜನರ ಕಾರ್ಯವಿಧಾನ.

ಅಲ್ಲದೆ, ಇನ್ನೊಂದು ತೊಂದರೆಯೂ ಇದೇ ಈಗಾಗಲೇ ಊರುಗಳಲ್ಲಿ ಜಾತಿಗನುಗುಣವಾದ ವಸತಿ ವೈಖರಿ. ಒಂದೇ ಜಾತಿಯ ಜನರೆಲ್ಲ ಒಂದೆಡೆ ವಾಸ. ನಾವು ದೀಕ್ಷೆ ಕೊಟ್ಟವರು ಅದೇ ಜಾತಿಯ ಜನರ ಮಧ್ಯೆ ಶಿವಾಚಾರದವರಾಗಿ ಬಾಳುತ್ತಾರೆ. ಆದರೆ ಅವರಂತೆಯೇ ತಮ್ಮ ಬಾಳನ್ನು ಮುಂದುವರೆಸುತ್ತಾರೆ. ಲಿಂಗಾಯತರ ಗುಂಪೆಂಬುದು ಬೇರೆಯೇ ಆಗಿದ್ದರೆ ಸುಧಾರಣೆ ಬೇಗ ನಡೆಯಬಹುದು, ಆದರೆ ಅದೆಲ್ಲಿ ಸಾಧ್ಯ?

## ೫೪

ಕೇತಗ–ಚಂದಲೆಯರ ಮದುವೆ ನಳಸಂವತ್ಸರದ ಚೈತ್ರ ಕೃಷ್ಣ ತೃತೀಯೆ ಸೋಮವಾರ. ಈಗಿನ್ನೂ ರಾಕ್ಷಸ ಸಂವತ್ಸರ ಪುಷ್ಯ ಮಾಸದ ಶುಕ್ಲಪಕ್ಷವೇ ನಡೆಯುತ್ತಿದೆ. ಅಂದರೆ ಇನ್ನೂ ಮೂರು ತಿಂಗಳು. ಮದುವೆಯ ಏರ್ಪಾಟಿಗೆ ಕಾಲ ಬೇಕೆಂಬ ಉದ್ದೇಶದಿಂದ ಅಲ್ಲ, ಮೂರು ತಿಂಗಳ ನಂತರದ ತೇದಿಯನ್ನು ನಿರ್ಧರಿಸಿದುದು. ಮದುವೆಯೇನೂ ರಾಜಕುಟುಂಬದ್ದಲ್ಲವಲ್ಲ, ಅದ್ದೂರಿಯಾಗಿ ನಡೆಯಬೇಕೆನ್ನಲು. ದೂರದ ರಾಜಕುಟುಂಬಗಳಿಗೆ ಸಾಮಂತರಿಗೆ ಆಹ್ವಾನ ಪತ್ರಿಕೆಗಳನ್ನು ಕಳಿಸಿ ಅವರೆಲ್ಲ ಬಂದು ಸೇರಲು ಅವಕಾಶಕೊಡುವಂತಹದ್ದೇನೂ ಇಲ್ಲವಲ್ಲ. ಬಡವರ ಮದುವೆ; ಅಲ್ಲದೆ, ಶರಣಮಾರ್ಗದಲ್ಲಿ ಸ್ಥಿತಿವಂತರ ಮದುವೆಯೂ ಸರಳವಾಗಿಯೇ ನಡೆಯಬೇಕೆಂಬುದೇ ಆದರ್ಶವಲ್ಲವೇ? ಖರ್ಚಿನಲ್ಲೂ ಸರಳತೆ, ವಿಧಿವಿಧಾನದಲ್ಲೂ ಸರಳತೆ. ಜೊತೆಗೆ, ಶರಣರು ಹಣಸಂಗ್ರಹಿಸುವ ಮಾರ್ಗ ಸೀಮಿತವಾದದ್ದು. ನ್ಯಾಯವಾಗಿ ಆದರ್ಶವಾದಿಯಾದ ಶರಣ ಹಣಸಂಗ್ರಹ ಮಾಡುವಂತೆಯೇ ಇಲ್ಲ. ಎಷ್ಟು ಬೇಕೋ ಅಷ್ಟು ತಾನೇ ಅವನ ಆದರ್ಶ? ದುಡಿದು ಸಂಪಾದಿಸುವುದು, ದೇಹದ–ಮನಸ್ಸಿನ ಶ್ರಮದಿಂದ ಮಾಡುವ ಕಾಯಕ. ದುಡಿಮೆಗೆ ತಕ್ಕಂತೆ ಪ್ರತಿಫಲ ಗಳಿಕೆ. ಅದರಲ್ಲಿ ಜೀವನ ನಿರ್ವಹಣೆಗೆ ಬೇಕಾದಷ್ಟು ಮಾತ್ರ ಉಳಿಸಿಕೊಂಡು ಮಿಕ್ಕದ್ದನ್ನು ದಾಸೋಹಕ್ಕೆ ವಿನಿಯೋಗಿಸುವುದು. ಅಂದರೆ ಉಳಿಯುವ ಮಾತೇ ಇಲ್ಲ. ಜೊತೆಗೆ ಬಡ್ಡಿವ್ಯವಹಾರ ಶರಣನಾದವನಿಗೆ ನಿಷಿದ್ಧ, ಹಾಗಾಗಿ ಆಸ್ತಿ ಎಂಬುದೇ ಸಾಧ್ಯವಿಲ್ಲ. ಆದರೆ ಈ ಆದರ್ಶವನ್ನು ಕಟ್ಟುನಿಟ್ಟಾಗಿ ಪಾಲಿಸುವವರು ಎಷ್ಟು ಮಂದಿ. ಆದರ್ಶವೆಲ್ಲ ಕೈಲಾಗದವನಿಗೆ ಎಂಬುದು ಎಲ್ಲ ಕಾಲದ ವ್ಯಂಗ್ಯವಲ್ಲವೇ? ಜೊತೆಯಲ್ಲಿ ಜೀವನ ನಿರ್ವಹಣೆಗೆ ಸಾಕಾಗುವಷ್ಟನ್ನು ಮಾತ್ರ ಉಳಿಸಿಕೊಳ್ಳಬೇಕು ಎಂದರೆ ಅದನ್ನು ನಿಗದಿಗೊಳಿಸುವುದು ಹೇಗೆ? ಒಬ್ಬೊಬ್ಬರ ಜೀವನ ವಿಧಾನ ಒಂದೊಂದು ರೀತಿ; ಒಂದೊಂದು ಕುಟುಂಬದ ಗಾತ್ರ – ಜೀವನ ಕ್ರಮಕ್ಕೆ ತಕ್ಕಂತೆ ವೆಚ್ಚದಲ್ಲಿ ಬದಲಾವಣೆ ಇರುತ್ತದ್ದಲ್ಲ. ಆದರ್ಶವೆಂದರೆ ಇದೇ ಏನೋ. ನಿಗದಿಗೊಳಿಸಲಾರದ ಗುರಿ; ಅನುಸರಿಸುವವನ ಸಾಮರ್ಥ್ಯಕ್ಕೆ ತಕ್ಕಂತೆ, ಅವನ ಕಾಣ್ಕೆಗೆ ಸರಿಯಾದ ಕಲ್ಪನೆ!

ಅಳ್ಳಯ್ಯ–ಮಧುವಯ್ಯಗಳು ಸ್ಥಿತಿವಂತರೂ ಅಲ್ಲ, ಅದ್ದೂರಿಯನ್ನು ಬಯಸುವಂತಹವರೂ ಅಲ್ಲ. ಮಧುವಯ್ಯನವರಂತೂ ಅಸೀಮ ಆದರ್ಶವಾದಿ.

ಅಂತಹವರು ಹಳೆಯ ಕಾಲದ, ವೈದಿಕ ಪರಂಪರೆಯ ದೀರ್ಘ ವಿವಾಹ ವಿಧಿಯನ್ನು ಅನುಸರಿಸುವ ಮನೋಭಾವದವರಲ್ಲ. ಧರ್ಮಸೂತ್ರಗಳು ವಿಧಿಸುವ ವಾಗ್ದಾನದಿಂದ ಚತುರ್ಥಿಕ ಕರ್ಮದವರೆಗಿನ ಹನ್ನೆರಡು ಬಗೆಯ ವಿವಾಹವಿಧಿ ಶರಣನಿಗೆ ನಿಷಿದ್ಧ. ನಮ್ಮ ಚೆನ್ನಬಸವಣ್ಣ ಇಂಥ ವಿಚಾರದಲ್ಲೆಲ್ಲ ಶರಣ ಅನುಸರಿಸಬೇಕಾದ ರೀತಿಯನ್ನು ಕರಾರುವಾಕ್ಕಾಗಿ ಹೇಳಿಬಿಟ್ಟಿದ್ದಾರೆ. ಜೀವನದ ಪ್ರತಿಘಟ್ಟದಲ್ಲಿ ಶರಣ ನಡೆಯಬೇಕಾದ ದಾರಿಯನ್ನು, ಹಂತಗಳ ನಿಷ್ಕೃಷ್ಟ ಸ್ವರೂಪವನ್ನು ಅವರಂತೆ ಖಚಿತವಾಗಿ ರೂಪಿಸಿದವರು ಯಾರೂ ಇಲ್ಲ. ಒಂದು ರೀತಿಯಲ್ಲಿ ಚೆನ್ನಬಸವಣ್ಣ ಶರಣರ ಸ್ಮೃತಿಕಾರ. ಲಿಂಗಧಾರಣೆ, ಲಿಂಗಪೂಜೆ, ಮದುವೆ, ಸಾವು, ವಿಭೂತಿ ತಯಾರಿಕೆ–ಶರಣನಿಗೆ ಸಂಬಂಧಿಸಿದ ಯಾವ ನಡವಳಿಕೆಯೇ ಇರಲಿ, ಹೀಗೇ ಆಗಬೇಕೆಂದು ಅವರು ಹೇಳಿದ್ದಾರೆ. ಅವರು ತಮ್ಮ ವಚನದಲ್ಲಿಯೇ ಇವನ್ನೆಲ್ಲ ಹೇಳಿರುವುದರಿಂದ ಅವರ ವಚನಗಳ ಕಟ್ಟು ಎಂದರೆ ಶರಣನಿಗೆ ಮಾರ್ಗದರ್ಶಿಸೂತ್ರಗಳ ಸಂಹಿತೆ ಎಂದೇ ಅರ್ಥ. ಬಹಳ ಚುರುಕು, ಬಹಳ ಸೂಕ್ಷ್ಮ ನಮ್ಮ ಚೆನ್ನಬಸವರು. ಜೊತೆಗೆ, ಅವರ ಓದು ಎಷ್ಟೊಂದು ಆಳ, ವಿಸ್ತಾರ; ಈ ವಿಚಾರದಲ್ಲಿ ಅವರು ಖಚಿತ ಆಲೋಚನಾ ವಿಧಾನ ಎಂತಹದು! ಅದಕ್ಕೇ ಶರಣರು ಅವರನ್ನು ಜ್ಞಾನಿ ಎನ್ನುವುದು. ಜ್ಞಾನಿ ಚೆನ್ನಬಸವ!

ಮದುವೆ ನಡೆಯಬೇಕಾದ ಬಗ್ಗೆಯೂ ಅವರು ಒಂದು ವಚನದಲ್ಲಿ ಸ್ಪಷ್ಟವಾಗಿ ಹೇಳಿದ್ದಾರು: "ಲಿಂಗಭಕ್ತನ ವಿವಾಹದಲ್ಲಿ ಶಿವಗಣಂಗಳಿಗೆ ವಿಭೂತಿ ವೀಳಯವ ಕೊಟ್ಟು ಆರೋಗಣೆಯ ಮಾಡಿಸಿ ಶಿವಗಣಂಗಳು ಸಾಕ್ಷಿಯಾಗಿ ಪ್ರಸಾದವನಿಕ್ಕುವುದೇ ಸದಾಚಾರವಲ್ಲದೆ, ವಾರ ತಿಥಿ ಸುಮೂಹೂರ್ತವೆಂದು ಲೌಕಿಕದ ಕರ್ಮವ ಮಾಡಿದಡೆ ನಿಮ್ಮ ಸದ್ಭಕ್ತರಿಗೆ ದೂರವಯ್ಯಾ, ಕೂಡಲ ಚೆನ್ನ ಸಂಗಮದೇವಾ". ಮಧುವಯ್ಯ ಹೀಗೆ ಎಂದಾದರೂ ಲೌಕಿಕ ಕರ್ಮವನ್ನು ಮಾಡಿಯಾರೆ, ಸದ್ಭಕ್ತರಿಗೆ ದೂರವಾದಾರೆ? ಅಳ್ಳಯ್ಯನೂ ಅಷ್ಟೆ, ಅವರ ತಿಳಿವಳಿಕೆ ಕಡಿಮೆಯಿರಬಹುದು, ಅವರ ಹೃದಯವಂತಿಕೆ ಕಡಿಮೆಯಲ್ಲ. ಮಧುವಯ್ಯನವರಲ್ಲಿ ಅವರಿಗೆ ಅಪಾರ ಗೌರವ, ಹಾಕಿದ ಗೆರೆ ದಾಟಲಾರರು. ಹಾಗೆ ನೋಡಿದರೆ, ತಮ್ಮ ಮಗನಿಗೆ ಚಂದಲೆಯನ್ನು ತಂದುಕೊಳ್ಳಲು ಅವರಿಗೆ ಅಂಜಿಕೆ. ಮಧುವಯ್ಯನವರ ಬಗೆಗಿನ ಗೌರವದಿಂದಲೇ ಅದಕ್ಕೆ ಒಪ್ಪಿದ್ದು. ಅಂಜಿಕೆಯ ಜನ ಸನ್ಮಾರ್ಗಕ್ಕೆ ಕೆಲವೇಳೆ ಇಂತಹ ಜುಲುಮೆಯ ಕಾರಣದಿಂದಲೇ ಅಲ್ಲವೇ ಕಾಲಿಡುವುದು? ಒಮ್ಮೆ ಸರಿದಾರಿಗೆ ಬಂದರಾಯಿತು, ಆಮೇಲೆ ಆ ದಾರಿಯಲ್ಲಿ ನಡೆಯುವುದು ಸಲೀಸು.

ಮಧುವಯ್ಯನವರ ಆಸೆಯೆಂದರೆ ಈ ಮದುವೆ ವಿಶಿಷ್ಟವಾದದ್ದು. ಜಾತಿವಿನಾಶಕ ಪ್ರಯತ್ನದಲ್ಲಿ ಇದು ದಿಟ್ಟ ಹೆಜ್ಜೆ, ಖಚಿತ ಹೆಜ್ಜೆ, ಆತ್ಯಂತಿತ ಹೆಜ್ಜೆ. ಇದು ಇಷ್ಟು ಸಲೀಸಾಗಿ ನಿಶ್ಚಿತವಾಗಿರುವುದು ಆಶ್ಚರ್ಯಕರವೇ ಸರಿ. ಕೇತಗ–ಚಂದಲೆ ಪರಸ್ಪರ ಒಪ್ಪಿರುವುದರ ಹಿಂದೆ ಶಿವನ ನಿಶ್ಚಯವಿದೆಯೆಂದೇ

ಅವರ ನಂಬಿಕೆ. ಬಹುತೇಕ ಇಂತಹ ಘಟನೆಗಳು ವೈಯಕ್ತಿಕ–ಕೌಟುಂಬಿಕ ನೆಲೆಯವು; ಆದರೆ ಈ ಮದುವೆ ಶರಣ ಚಳುವಳಿಗೆ ಒಂದು ಹೊಸ ರೂಪು ಕೊಡುವುದೆಂದು ಅವರ ನಂಬಿಕೆ; ಮುಂದಿನವರಿಗೆ ಮಾರ್ಗದರ್ಶಕವಾಗುವುದೆಂದು ಅವನ ಅನ್ನಿಸಿಕೆ. ಹಾಗಾಗಿ ಇದು ಶರಣರೆಲ್ಲರ ಗಮನಕ್ಕೆ ಬರಬೇಕು. ಎಲ್ಲ ಶರಣರನ್ನೂ ಮದುವೆಗೆ ಆಹ್ವಾನಿಸಬೇಕೆಂದೇನೂ ಇದರ ಅರ್ಥವಲ್ಲ, ಕುತೂಹಲಿಗಳು ಬರಬಹುದು. ಆದರೆ ಇಂಥ ಮದುವೆ, ಶರಣರಲ್ಲಿ ಜಾತಿಯನ್ನರಸದೆ ರಕ್ತಸಂಬಂಧ ಬೆಳೆಸುವುದು, ನಮ್ಮ ನೀತಿಯಾಗಬೇಕೆಂಬುದು ಅವರ ಆಸೆ. ಅವರ ಹೆಂಡತಿ ನಾಗಲಬ್ಬೆ ಬದುಕಿದ್ದರೆ ಇದಕ್ಕೆ ಸುಲಭವಾಗಿ ಒಪ್ಪುತ್ತಿರಲಿಲ್ಲವೇನೋ. ಬಲವಂತ ಮಾಡಿದ್ದರೆ, ಹಟ ಹಿಡಿದಿದ್ದರೆ ಒಪ್ಪಿಗೆ ನೀಡಲೇಬೇಕಾಗಿತ್ತು. ಹಿಂದಿನಿಂದ ಹೆಣ್ಣು ಅನುಸರಿಸಿಕೊಂಡು ಬಂದ ಅಥವಾ ಅನುಸರಿಸಲೇಬೇಕಾದ ಮಾರ್ಗ ಇದೇ ಅಲ್ಲವೇ? ಗಂಡನ ಮಾರ್ಗವೇ ಅವಳ ಮಾರ್ಗ. ಕೊಸರಾಡಬಹುದು, ಸ್ವಂತ ನಿರ್ಧಾರಕ್ಕೆ ಆಸ್ಪದವೆಲ್ಲಿ? ಅಳ್ಳಯ್ಯನ ಹೆಂಡತಿ ಬದುಕಿದ್ದಾಳೆ. ಪರವ್ವ ಅವಳ ಹೆಸರು. ಅವಳನ್ನು ಕೇಳಿದರೆ ಏನು ಹೇಳಿಯಾಳು? "ನಂಗೇನು ತಿಳೀತದೆ. ನಾನೊಂದು ಮುಕ್ಕಿ" ಎನ್ನುತ್ತಾಳೆ. ನಿಜವಾಗಿಯೂ ಹಾಗಿದ್ದಳೋ, ಅಥವಾ ಹೆದರಿ ಒಪ್ಪಿಗೆಯಿತ್ತಿದ್ದಳೋ ಅಥವಾ ಅವಳ ಒಪ್ಪಿಗೆ ಬಯಸಿದವರಾರು? ಕೇತಗನ ತಮ್ಮ ಒಬ್ಬ, ಲಕ್ಕ ಅವನ ಹೆಸರು, ಇದ್ದ. ಅದೇನು ಇನ್ನು ಕೂಸು, ಅದಕ್ಕೆ ಬುದ್ಧಿಯಿದ್ದೀತೇ?

ಹಾಗಾಗಿ ಈ ಮದುವೆಯ ರೂಪುರೇಷೆ ಸಂಪೂರ್ಣವಾಗಿ ಮಧುವಯ್ಯನವರದು. ಈ ಮದುವೆ ಶರಣರ ಗಮನಕ್ಕೆ ಬರಬೇಕೆಂಬುದು ಅವರ ಹಂಬಲ. ಒಂದು ರೀತಿಯಲ್ಲಿ ಮದುವೆಗೆ ಪ್ರಚಾರ ಆಗಬೇಕು ಎಂಬುದು ಅವರ ಇರಾದೆ. ಹಾಗಾಗಿ ಗದ್ದುಂಬಳ್ಳಿಯಿಂದ ಬಸವಣ್ಣನವರು ವಾಪಸಾದ ಮೇಲೆ ಕಲ್ಯಾಣದಲ್ಲಿ ಈ ವಿಷಯವನ್ನು ವಿವರಿಸುವ ಸಲುವಾಗಿ ಒಂದು ಶರಣಸಭೆ ನಡೆಯಬೇಕೆಂದು ನಿಶ್ಚಿತವಾಗಿತ್ತು. ಮಧುವಯ್ಯ – ಅಳ್ಳಯ್ಯರನ್ನೂ ಆ ಸಭೆಗೆ ಕರೆಸಿಕೊಳ್ಳಬೇಕೆಂದು ತೀರ್ಮಾನವಾಗಿತ್ತು. ಗದ್ದುಂಬಳ್ಳಿಗೆ ಅಣ್ಣನವರು ಹೋದ ದಿನ ಬೃಹಸ್ಪತಿವಾರ. ಅದಕ್ಕೆ ಮುಂದಿನ ಶನಿವಾರ ಸಂಜೆ ಆ ಸಭೆ ಏರ್ಪಾಟಾಗಿತ್ತು. ಕಲ್ಯಾಣದಲ್ಲಿನ ಹಿರಿಯ ಶರಣರೆಲ್ಲ ಅಲ್ಲಿಗೆ ಬರಬೇಕೆಂಬ ಆಹ್ವಾನ.

ಆ ಶನಿವಾರ ಸಂಜೆ ಸೂರ್ಯಾಸ್ತಕ್ಕೆ ಮುಂಚೆಯೇ ಬಸವಣ್ಣನವರ ಮಹಮನೆಯ ಅಂಗಳದಲ್ಲಿ ಸಭೆಗೆ ಏರ್ಪಾಟು. ವಿಶಾಲವಾದ ಅಂಗಳ ಅದು. ಬಂದ ಶರಣರು ಕುಳಿತುಕೊಳ್ಳಲು ಅಣ್ಣನವರ ಹೃದಯದಂತೆಯೇ ಮೃದುವಾದ ಮೆತ್ತೆಯನ್ನು ಹಾಸಲಾಗಿತ್ತು. ಒಂದು ಕಡೆ, ವೇದಿಕೆಯೆನ್ನಲಾಗದಿದ್ದರೂ, ಪ್ರಮುಖರು ಕುಳಿತುಕೊಳ್ಳಲು ಮಿಕ್ಕ ಮೆತ್ತೆಗಳಿಗೆ ಎದುರಾಗಿ ಗೋಡೆಯ ಬದಿಗೆ ಕೆಲವು ಮೆತ್ತೆಗಳು. ಬೀದಿಗೆ ಅಂಟಿಕೊಂಡ ಪೌಳಿಗೋಡೆಗೆ ತಡಿಕೆ

ಕಟ್ಟುವ ಏರ್ಪಾಟು. ಇದೊಂದು ಬೀದಿಯ ವಿಚಾರವಾಗಬಾರದಲ್ಲ. ಒಳಗೆ ನಡೆಯುವುದು ಹಾದಿಹೋಕರಿಗೆ ಕಾಣಬಾರದು. ಅದಕ್ಕೇ ಈ ವ್ಯವಸ್ಥೆ. ಸೂರ್ಯಾಸ್ತದನಂತರ ಅಲ್ಲಲ್ಲಿ ದೀವಟಿಗೆಗಳಿಗೆ ಅವಕಾಶ. ದೊಂದಿ ಕಟ್ಟಿ, ಎಣ್ಣೆಯಲ್ಲಿ ಅದ್ದಿ ಅವು ಆಗಲೇ ಸಜ್ಜಾಗಿದ್ದವು. ಕತ್ತಲಾದರೆ ಉರಿಯಲು ಅವು ಸಿದ್ಧ. ಬಂದವರಿಗೆ ಉಪಚರಿಸಲು ಅಡುಗೆಮನೆಯಲ್ಲಿ ವಿಶೇಷ ಸಿದ್ಧತೆ. ಸೊಂಟಕ್ಕೆ ವಸ್ತ್ರ ಕಟ್ಟಿ ಸೇವಕರು ಉಪಚರಿಸಲು ಈಗಾಗಲೇ ಅಣಿಯಾಗಿದ್ದಾರೆ.

ಬಸವಣ್ಣನವರ ಮಹಮನೆಯ ಸಭೆಗಳೆಂದರೆ ಗಿಜಿಗಿಜಿ. ಆದರೆ ವಿಶೇಷ ಪ್ರವಚನ ಕಾರ್ಯಕ್ರಮವಿದ್ದರೆ ಗೋಷ್ಠಿ ಪ್ರಾರಂಭವಾದ ಕ್ಷಣಗಳಲ್ಲಿಯೇ ನಿಶ್ಶಬ್ದ. ಈ ಗೋಷ್ಠಿಗಳಿಗೆ ಎಂತೆಂತಹವರು ಬಂದಿದ್ದಾರೆ, ಏನು ಕತೆ! ಕಲ್ಯಾಣಕ್ಕೆ ಬಂದ ದೊಡ್ಡ ಶರಣರ ದರ್ಶನಲಾಭ, ಪ್ರವಚನ ಲಾಭ ಇತರರಿಗೂ ಸಿಕ್ಕಲೆಂಬ ಉದ್ದೇಶದಿಂದ ಇಂಥ ಸಭೆಗಳನ್ನು ಏರ್ಪಾಡಿಸಲಾಗುತ್ತಿತ್ತು. ಅಲ್ಲಮಪ್ರಭು, ಅಕ್ಕಮಹಾದೇವಿ, ಸಿದ್ಧರಾಮರಾದಿಯಾಗಿ ಅನೇಕರು ಇಲ್ಲಿ ಬಂದಿದ್ದರು. ಅವರೆಲ್ಲರಿಗೂ ಬಸವಣ್ಣನವರ ಆತಿಥ್ಯ, ಸೇವೆ. ನಿಜವಾದ ಭೃತ್ಯಾಚಾರಿಯೆಂದರೆ ಬಸವಣ್ಣನವರೊಬ್ಬರೇ ಎಂದು ಎಲ್ಲ ಶರಣರ ಅಂಬೋಣ. ಬಂದವರನ್ನು ಮಹಮನೆಯ ಹೊರಪಾಳಿಯ ಬಾಗಿಲಲ್ಲಿಯೇ ಪುಷ್ಪ-ಸುಗಂಧಗಳನ್ನಿತ್ತು ಸ್ವಾಗತಿಸಿ, ತಾವೇ ದಾರಿ ತೋರುತ್ತ ಬಿಡಾರದೆಡೆಗೆ ಒಯ್ಯುವುದು, ಅವರು ಮಹಮನೆಯಲ್ಲಿ ಉಳಿದಿರುವಷ್ಟು ಕಾಲವೂ ಖುದ್ದಾಗಿ ಅವರ ಸೇವೆಗೆ ನಿಲ್ಲುವುದು ಬಸವಣ್ಣನವರ ವಿಶೇಷಗುಣ. ಬಂದ ಶರಣನ ಮನದಿಂಗಿತವರಿತು ಅವರಿಗೆ ಪ್ರಿಯವಾಗುವ ಸರಂಜಾಮು ಒದಗಿಸಿ, ಹಿತವಾಗುವಂತೆ ಉಪಚರಿಸುವ ಗುಣದಿಂದಾಗಿ ಬಸವಣ್ಣನವರು ಅನೇಕ ವೇಳೆ ಪೇಚಿಗೆ ಸಿಲುಕಿರುವುದೂ ಉಂಟು. ಅವರ ಒಳ್ಳೆಯ ಗುಣವನ್ನು ದುರುಪಯೋಗಪಡಿಸಿಕೊಂಡು ಲಾಭ ಪಡೆದ ಜನರಿಗೇನು ಕಡಿಮೆಯೇ? ಹೀಗಾಗಿ ಒಬ್ಬರಲ್ಲ ಒಬ್ಬರು ಅವರ ಮನೆಯಲ್ಲಿ ಸದಾ ಇರುತ್ತಾರೆ. ಹಾಕುವವರಿರುವಾಗ ತಿನ್ನುವವರಿಗೇನು ಕಡಿಮೆ! ಅಲ್ಲದೆ, ತಮ್ಮೂರಲ್ಲಿ ಕಾಣಿಯ ಬೆಲೆ ತಮಗೆ ದೊರೆಯದಿದ್ದರೂ ಇಲ್ಲಿ ಪಣದ ಬೆಲೆ ದೊರೆಯುವಾಗ! ಹೀಗಾಗಿ, ಇಲ್ಲಿಗೆ ಬರುವವರಲ್ಲಿ ಹೆಚ್ಚು ಮಂದಿ ಬಂದ, ತಿಂದ, ಹೋದ ಎನ್ನುವಂಥವರು.

ಶರಣರ ಬಗ್ಗೆ ಬಸವಣ್ಣನವರು ಇಷ್ಟು ಮಿದುವಾಗಿರುವುದು ಸರಿಯೇ ಎಂದೂ ಕೆಲವರಿಗನ್ನಿಸಿದೆ. ಯೋಗ್ಯತೆಯಿರದವನಿಗೆ ಗೌರವ ದೊರೆತರೆ, ಅವನ ಯೋಗ್ಯತೆ ಹೆಚ್ಚುವುದೇನೂ ಇಲ್ಲ; ಅಲ್ಲದೆ, ಅವನು ತನ್ನಲ್ಲಿರುವುದೇ ಯೋಗ್ಯತೆಯೆಂದು ಸಮಾಜಕ್ಕೆ ಭಾರವಾಗಿರುವುದೇ ಹೆಚ್ಚು. ಹೀಗಾಗಿ ಅರ್ಹರಿಗೆ ಮಣೆ ಹಾಕಬೇಕಾದದ್ದು ನ್ಯಾಯ. ಹೀಗಂದರೆ ಬಸವಣ್ಣ ಮುಗುಳು ನಗುತ್ತಾರೆ. ಲಾಂಛನಧಾರಿಗಳೆಲ್ಲ ಅರ್ಹರೇ ಎನ್ನುತ್ತಾರೆ. ಆದರೆ ಜನರ

ಯೋಗ್ಯತೆಯನ್ನು ಅರಿಯುವ ಶಕ್ತಿಯೇ ಅಣ್ಣನವರಿಗೆ ಇಲ್ಲ ಎಂದೇನೂ ಅಲ್ಲ. ಎಷ್ಟೋ ಸಲ ಅವರೇ ಈ ಶರಣರ ಬಾಯಿಚಾಪಲ್ಯಕ್ಕೆ, ವಿಷಯಚಾಪಲ್ಯಕ್ಕೆ ಬೇಸರಪಟ್ಟುಕೊಂಡಿರುವುದೂ ಉಂಟು. ಶಿವನಾಮ ಬರಬೇಕಾದ ಬಾಯಲ್ಲಿ ಅಸಹ್ಯಕರವಾಗಿ ಜೊಲ್ಲು ಸುರಿದರೆ ಯಾರಿಗೆ ತಾನೇ ಮೆಚ್ಚಿಕೆ? ಆದರೆ ಅವರು ಅನ್ನಲಾರರು, ಅನುಭವಿಸಲಾರರು. ನಮ್ಮ ಸಮಾಜ ಜೇನು ಹುಟ್ಟಿನಂತೆ ಒಂದಾಗಬೇಕು. ಆ ಹುಟ್ಟು ಕಟ್ಟಲು ಎಲ್ಲ ಜೇನು ಹುಳುಗಳಿಗೂ ತನ್ನದೇ ಆದ ಕೆಲಸವಿದೆ ಎಂಬ ನಂಬಿಕೆ ಅವರದು. ಹೀಗಾಗಿ ಸಮಾಜದ ಒಳಿತಿಗಾಗಿ ಅವರು ಶರಣರ ಚಾಪಲ್ಯಗಳನ್ನು ಕಂಡರೂ ತಣ್ಣಗಿರುತ್ತಾರೆ.

ಆದರೆ ಭಕ್ತದ್ವೇಷಿಗಳ ಬಗ್ಗೆ ಅವರದು ಸದಾ ಗಡಸು ನಡವಳಿಕೆಯೇ. ಇಡೀ ಮನುಜ ಸಂಕುಲದಲ್ಲಿರುವುದು ಎರಡೇ ಗುಂಪು; ಭಕ್ತ, ಭವಿ. ಭಕ್ತರು ನಮ್ಮವರು. 'ಕೆಮ್ಮುವವಳಾದರೂ ನಮ್ಮವಳು' ಎಂಬ ಗಾದೆಯೇ ಇದೆಯಲ್ಲ, ಕೊರೆಯಿದ್ದರೇನಂತೆ ಭಕ್ತ ಭಕ್ತನೇ, ಇತರರಿಗಿಂತ ಹೆಚ್ಚು. ಹಾಗಾಗಿ ಅವನಿಗೆ ಮನ್ನಣೆಯ ಮಣೆ. ಭವಿ, ಅವನ ವಿಚಾರ ನಮಗೇಕೆ? ನಮ್ಮ ಗಮನಕ್ಕೆ ಅವನು ದೂರ. ಆದರೆ ನಮ್ಮ ತಂಟೆಗೆ ಬಂದರೆ, ಎಂದರೆ ಭಕ್ತನಿಗೆ ತೊಂದರೆಯಿತ್ತರೆ, ಅವರ ಮೇಲೆ ಹಾರುವರು. ಆದರೆ ಭವಿಗಳು ತಮ್ಮ ಪಾಡಿಗೆ ತಾವಿದ್ದರೆ ನಮಗವರ ಗೋಜು ಬೇಡ ಎನ್ನುವವರು ಬಸವಣ್ಣ. ಆದರೆ ಅಂಥವರ ಜೊತೆಯ ಅವರ ನಡವಳಿಕೆಯೂ ಸೌಜನ್ಯಪೂರಿತವಾದದ್ದು; ಅನಮಾನವೇ ಇಲ್ಲ. ಹೀಗಾಗಿಯೇ ಇತರರೂ ಅಂದರೆ ಭವಿಗಳೂ ಬಸವಣ್ಣನವರಲ್ಲಿ ಕುಂದು ಕಾಣಲಾರರು. ಅಷ್ಟೇಕೆ ಎಷ್ಟೋ ವೇಳೆ, ಅವರ ಬಗ್ಗೆ ಅನಾದರ ಕುಚೋದ್ಯ ತಳೆದವರೂ ಬಾಗಲಿಲ್ಲವೇ?

ಅವತ್ತೊಂದು ದಿನ ಅವರ ಮಹಮನೆಗೆ ಐದು ಮಂದಿ ಶರಣರು ಬಂದರು. ಜಂಗಮರೇನಲ್ಲ. ದೂರ ದೇಶದ ಶಿವಭಕ್ತರಂತೆ. ದೂರದೇಶವೆಂದರೆ ನಮ್ಮ ನಾಡಿನವರೇ; ಸ್ವಲ್ಪ ಬೇರೆಯ ರೀತಿಯಲ್ಲಿ ಅವರ ಮಾತು, ಅಷ್ಟೆ. ಅಣ್ಣನವರ ದರ್ಶನ ಪಡೆಯಲು ಎಂದರು; ದರ್ಶನ ಪಡೆದರು. ಇಲ್ಲೇ ಇಂದು ಉಳಿಯಿರಿ ಎಂದು ಅಣ್ಣನವರು ಉಪಚರಿಸಿದರು. ಈ ಉಪಚಾರದ ಮಾತಿಗೇ ಅವರು ಕಾಯುತ್ತಿದ್ದರೆಂದು ಕಾಣುತ್ತದೆ, ಹ್ಞೂ ಎಂದರು. ಉಳಿದರು. ರಾತ್ರಿ ಪ್ರಸಾದದ ಹೊತ್ತು. ಎಂದಿನಂತೆ ಶರಣರನ್ನು ಸತ್ಕರಿಸಲು ಅಣ್ಣನವರು ಬಿಡಾರಕ್ಕೆ ಬಂದರು. ಶಿವಪೂಜೆ ನಡೆಯಲಿ ಎಂದರು ಬಂದವರಿಗೆ ಏನೋ ಅಳುಕು "ನಾವು ಪ್ರಸಾದ ತೆಗೆದುಕೊಳ್ಳುತ್ತೇವೆ ದಣ್ಣಾಯಕರು ತಮ್ಮ ಕಾರ್ಯದೆಡೆ ಗಮನ ಹರಿಸಬಹುದು" ಎಂದವರು ಮೃದುವಾಗಿಯೇ ಹೇಳಿದರು. "ಮಹಮನೆಯಲ್ಲಿ ನಾನು ಮಾಡಬೇಕಾದ ಕಾರ್ಯ ಇದೇ. ರಾಜಕಾರ್ಯ ಕೇವಲ ಬೊಕ್ಕಸದ ಮನೆಯಲ್ಲಿ" ಎಂದವರೇ ಅಣ್ಣನವರು ಬಂದವರಲ್ಲಿ ಒಬ್ಬನ ಬಳಿ ಹೋಗಿ ಅವನ ಭುಜದ ಮೇಲೆ ಕೈ ಹಾಕಿ "ಬನ್ನಿ" ಎಂದರು. ಇನ್ನೇನಾಗುತ್ತದೋ ಎಂದು ಅವರಿಗೆ ಭಯವೆನಿಸಿರಬೇಕು.

ಕಳ್ಳನ ಮನಸ್ಸು ಹುಳ್ಳಗೆ ಅಲ್ಲವೇ? ಐವರೂ ಅಣ್ಣನವರ ಕಾಲಮೇಲೆ ಬಿದ್ದರು. ತಾವು ನಿಜವಾಗಿಯೂ ಲಿಂಗವಂತರಲ್ಲ ಎಂದರು. ಬಸವಣ್ಣನವರನ್ನು ವಂಚಿಸಿ ಅವರ ಮಹಮನೆಯಲ್ಲಿ ಉಂಡು ಬರುವುದಾಗಿ ಗೆಳೆಯರೊಂದಿಗೆ ಪಂತ ತೊಟ್ಟು ಬಂದವರಂತೆ. ದೂರದ ಊರವರೂ ಅಲ್ಲ, ಇಲ್ಲೇ ಹತ್ತಿರದ ಒಂದು ಹಳ್ಳಿ. ದೂರದವರಂತೆ ಕನ್ನಡ ಮಾತನಾಡಿದ್ದರು, ಅಷ್ಟೆ. ದೊಡ್ಡ ವಸ್ತ್ರದೊಳಗೆ ಕರಡಗೆಯಿದೆ ಎಂದು ಹೊರಗೆ ಉಬ್ಬಿ ತೋರಲು ಗುಂಡುಬದನೆಗಳನ್ನು ಕಟ್ಟಿಕೊಂಡಿದ್ದರು. "ಎಲ್ಲಿ?" ಎಂದರು ಅಣ್ಣನವರು ನಗುತ್ತ, ಒಬ್ಬನ ಮೈಮೇಲಿನ ವಲ್ಲಿಯನ್ನು ಸೆಳೆದರು ದಾರಕ್ಕೆ ಸಣ್ಣ ಗುಂಡುಬದನೆಯನ್ನವನು ಕಟ್ಟಿದ್ದ. "ಶಿವಲಿಂಗದಂತೆಯೇ ಇದೆಯಲ್ಲ" ಎನ್ನುತ್ತ ಆ ಕಾಯನ್ನು ಕೈಲಿ ಹಿಡಿದು, "ನೋಡಿ ಲಿಂಗದ ಮೇಲೆ ಸಂಪಿಗೆಯೆಸಳನ್ನು ಜೋಡಿಸಿದ ಹಾಗೆ ಇದೆಯಲ್ಲ ಇದು" ಎಂದು ತೊಟ್ಟನ್ನು ತೋರಿಸಿದರು. "ಲಿಂಗವೆನ್ನುವುದೂ ಒಂದು ಸಂಕೇತವಲ್ಲವೇ? ಸಾಕ್ಷಾತ್ ಶಿವನನ್ನೇ ಕೊರಳಲ್ಲಿ ಕಟ್ಟಿಕೊಳ್ಳಲು ಸಾಧ್ಯವೇ? ಯಾವ ಕಾರಣಕ್ಕೋ ನಿಮಗೆ ಶಿವಸಂಕೇತವನ್ನು ಕಟ್ಟಿಕೊಳ್ಳಬೇಕೆಂಬ ಮನಸ್ಸಾಯಿತಲ್ಲ" ಎಂದು ಅಣ್ಣನವರೆಂದದ್ದೇ ತಡ, ಆ ಐವರೂ ಗೊಳೋ ಎಂದು ಅಳಲು ಪ್ರಾರಂಭ. "ಅಣ್ಣನವರೇ, ತಪ್ಪಾಯಿತು. ತಾವು ಎಂಥ ದೊಡ್ಡವರೆಂಬುದು ಈಗ ತಿಳಿಯಿತು. ಇನ್ನೊಮ್ಮೆ ಇಂಥ ಅಪರಾಧ ಮಾಡುವುದಿಲ್ಲ" ಎಂದು, ಹೇಗಾದರೂ ಹೋದರೆ ಸಾಕೆಂದು ಚಡಪಡಿಸಿದರು. ಅಣ್ಣನವರದು ಅರಮನೆಯಲ್ಲೇನು ಕಡಿಮೆಯ ಹುದ್ದೆಯೇ? ಬೊಕ್ಕಸದ ಮನೆಯ ಎತ್ತರದ ಅಧಿಕಾರಿ ಅವರು. ರಾಜನಿಗೇನಾದರೂ ದೂರಿತ್ತರೆ ತಮ್ಮ ಚರ್ಮ ಸುಲಿಸಿಯಾನು, ಅಲ್ಲದೆ ಈ ವಿಷಯ ತಿಳಿದರೆ ಅಣ್ಣನವರ ಅಭಿಮಾನಿ ಬಳಗ ತಮ್ಮನ್ನು ನುಚ್ಚುನೂರು ಮಾಡಬಹುದು ಎಂಬ ಅರಿವು ಅವರಿಗಾಗಿತ್ತು. ಆದರೆ ಅಣ್ಣನವರು ಅವರನ್ನು ಊಟಮಾಡಿಕೊಂಡು ಹೋಗುವವರೆಗೂ ಬಿಡಲೇ ಇಲ್ಲ. "ನಮ್ಮ ಮನೆಯಲ್ಲಿ ಪ್ರಸಾದ ತೆಗೆದುಕೊಳ್ಳಿರಿ. ನೀವು ಭಕ್ತರಾಗಿಯೇ ಆಗುವಿರಿ" ಎಂದು ಹೇಳಿ ಉಪಚರಿಸಿದರು. ಬಂದ ಸುಳ್ಳರು ಬಿಕ್ಕುತ್ತಲೇ, ಕಣ್ಣಲ್ಲಿ ನೀರು ಸುರಿವಂತೆಯೇ ಉಂಡರು, ಹೋದರು. ಈ ಮಹಮನೆಗೆ ಬಂದ ಶರಣರದು ಹೀಗೇ ಎಷ್ಟೋ ಕತೆಗಳು.

ಸಂಜೆಯಾಗುತ್ತಿದ್ದಂತೆ ಸಭೆಗೆ ಶರಣರು ಬರಲಾರಂಭಿಸಿದರು. ಬಂದವರು ಆಗಲೇ ಅಲ್ಲಿದ್ದವರಿಗೆಲ್ಲ ಶರಣಾರ್ಥಿ ಹೇಳುವುದು, ಕ್ಷೇಮ ಸಮಾಚಾರ ವಿಚಾರಿಸುವುದೂ ನಡೆಯಿತು. ಬಾಯ ಮೇಲೆ ಕೈಯಿಕ್ಕಿಕೊಂಡು ಮಾತನಾಡುವ ಶರಣರ ರೀತಿಗೆ ಬಸವಣ್ಣನವರದೇ ಮೇಲ್ಪಂಕ್ತಿ. ಬಂದವರು ತಮ್ಮ ತಮ್ಮ ಜಾಗದಲ್ಲಿ ಕೂತರು. ಪಿಸುದನಿಯಲ್ಲಿ ಮಾತನಾಡಿಕೊಂಡರು. ಇವತ್ತಿನ ಸಭೆಯ ವಿಶೇಷವೇನೆಂದು ತಿಳಿಯಲು ಎಲ್ಲರಿಗೂ ಕುತೂಹಲ. ಅಲ್ಪಸ್ವಲ್ಪ ವಿಷಯವಾಗಲೇ ಕೆಲವರ ಕಿವಿಯ ಮೇಲೆ ಬಿದ್ದಿರಲಿಕ್ಕೆ ಸಾಕು. ಆದರೆ ಅದರ ಸ್ಪಷ್ಟ ಸ್ವರೂಪವೇನೆಂದು ಅರಿಯರು.

ಬಂದವರಲ್ಲಿ ಪ್ರಮುಖರೆಂದರೆ ಅಂಬಿಗರ ಚೌಡಯ್ಯನವರು, ಮಡಿವಾಳ ಮಾಚಿದೇವರು. ಚೆನ್ನಬಸವಣ್ಣ ಮಹಮನೆಯಲ್ಲಿಯೇ ಇದ್ದವರು. ಮನೆಯ ಹೆಣ್ಣುಮಕ್ಕಳು ಬಂದಿರಲಿಲ್ಲ. ಯಜಮಾನರು ತೀರ್ಮಾನಿಸಿದ್ದಕ್ಕೆ ತಮ್ಮ ಬೆಂಬಲ ಅವರು ಯಾವತ್ತೂ ನೀಡುತ್ತ ಬಂದಿರುವುದು. ಇಂಥ ವಿವೇಕಿಗಳು, ಜ್ಞಾನಿಗಳು ತಪ್ಪಿಯಾರೆ; ಅವರು ತುಳಿದದ್ದೇ ತಮ್ಮ ಮಾರ್ಗ ಎಂಬುದು ಅವರ ನಂಬಿಕೆ, ಅಭಿಪ್ರಾಯ.

ಮಧುವಯ್ಯ–ಅಳ್ಳಯ್ಯರನ್ನು ಕರೆತರಲು ಮೇನೆ ಹೋಗಿತ್ತು. ಸಮಯಕ್ಕೆ ಮುಂಚೆಯೇ ಅವರು ಬಂದರು. ಗದ್ದುಂಬಳ್ಳಿಯ ಮತ್ತೆ ಕೆಲವು ಭಕ್ತರೂ ಇದ್ದರು. ಆದರೆ ಆ ಇಬ್ಬರೂ ಮೇನೆ ಹತ್ತಲಿಲ್ಲ. ಅದರಲ್ಲಿ ಕುಳಿತು ಅಣ್ಣನವರ ಮಹಮನೆಗೆ ಬರುವುದೇ, ನಡೆದೇ ಬರುತ್ತೇವೆ ಎಂದರು. ಮೇನೆ ಊರು ತಲುಪುವ ಮುಂಚೆಯೇ ಅವರೆಲ್ಲರೂ ಕಲ್ಯಾಣದ ಕಡೆಗೆ ಹೊರಟಿದ್ದರು. ಹಾಗಾಗಿ ದಾರಿಮಧ್ಯದಲ್ಲಿಯೇ ಮೇನೆ ಹೊತ್ತವರೂ ಗದ್ದಂಬಳ್ಳಿಯವರೂ ಭೇಟಿಯಾದರು. ಖಾಲಿ ಮೇನೆ ಹೊತ್ತ ಸೇವಕರಿಗೆ ಭಾರ ಹೊರಬೇಕಾದ ಪ್ರಮೇಯ ಬರಲಿಲ್ಲ. ಎಲ್ಲ ಕಲ್ಯಾಣದ ಕಡೆಗೆ ಬಂದರು.

ಬಂದವರಿಗೆ ವಿಭೂತಿ ವೀಳಯದ ವಿನಿಯೋಗ, ಬಾಯಾರಿದವರಿಗೆ ಸಿಹಿನೀರು. ಸಭೆ ಮುಗಿದ ಮೇಲೆ ಎಲ್ಲರಿಗೂ ಪ್ರಸಾದಕ್ಕೆ ಏರ್ಪಾಟಾಗಿದೆ. ಹೀಗಾಗಿ ಆತಂಕವಿಲ್ಲದೆ, ವಿಷಯ ಪರಿಶೀಲನೆಗೆ ಅವಕಾಶ. ಗೋಡೆಯ ಬದಿಯಲ್ಲಿ ಹಾಕಿದ್ದ ಮೆತ್ತೆಗಳ ಎರಡೂ ಬದಿಗಳಲ್ಲಿ ಹಡಪದಪ್ಪಣ್ಣ, ಪಡಿಹಾರಿ ಉತ್ತಣ್ಣ ನಿಂತರು. ಮೆತ್ತೆಗಳಲ್ಲಿ ಅಣ್ಣನವರು, ಚೆನ್ನಬಸವಣ್ಣ, ಮಡಿವಾಳ ಮಾಚಿದೇವ, ಅಂಬಿಗರ ಚೌಡಯ್ಯ ಕೂತರು. ಅವರ ಬುಡಕ್ಕೆ ಅಳ್ಳಯ್ಯ–ಮಧುವಯ್ಯನವರು. ಎಷ್ಟು ಹೇಳಿದರೂ ಅವರು ಹಿರಿಯರ ಜೊತೆಗೆ ಕೂರಲು ಒಪ್ಪಲಿಲ್ಲ.

ಅಣ್ಣನವರೇ ವಿಷಯ ಪ್ರಸ್ತಾಪಕ್ಕೆ ಮೊದಲು ಮಾಡಿದರು. ಗದ್ದುಂಬಳ್ಳಿಗೆ ತಾವು ನೀಡಿದ ಭೇಟಿ, ಅದರ ಉದ್ದೇಶ, ಅಲ್ಲಿ ಎದುರಾದ ಪರಿಸ್ಥಿತಿ, ಅಲ್ಲಿನ ಸಭೆಯಲ್ಲಿ ಆದ ತೀರ್ಮಾನ– ಎಲ್ಲವನ್ನೂ ಸಾವಧಾನವಾಗಿ ವಿವರಿಸಿದರು. ಇಂದಿನ ಸಭೆಯ ಉದ್ದೇಶವನ್ನು ಸೂಚ್ಯವಾಗಿ ಹೇಳಿದರು. ಅಳ್ಳಯ್ಯ–ಮಧುವಯ್ಯಗಳನ್ನು ನೋಡಲು ಸೇರಿದ್ದ ಜನರ ಗುಂಪು ಅವರೆಡೆಗೆ ಕಣ್ಣು ಹಾಯಿಸುವುದು. ಅವರ ಬಗ್ಗೆ ಬಸವಣ್ಣನವರು ಹೊಗಳಿದಷ್ಟು ಜನರಿಗೆ ಕುತೂಹಲ, ಅವರ ಕತ್ತು ಕೊಕ್ಕರೆ ಕತ್ತಾಗುತ್ತದೆ, ಕಣ್ಣು ಅರಳುತ್ತವೆ, ಪರಸ್ಪರ ಪಕ್ಕದವರೊಡನೆ ಬಾಯಿಗಳು ಪಿಸುಗುಟ್ಟುತ್ತವೆ. ಒಂದು ರೀತಿಯಲ್ಲಿ ಅಳ್ಳಯ್ಯ–ಮಧುವಯ್ಯಗಳೇ ಮದುಮಕ್ಕಳಂತೆ ಈ ಸಭೆಯ ಕೇಂದ್ರ ಬಿಂದುಗಳಾಗಿಬಿಟ್ಟರು.

ಕೇತಗ–ಚಂದಲೆಯರ ಮದುವೆ ಹೇಗೆ ಚಳುವಳಿಗೆ ನಿರ್ಣಾಯಕ ತಿರುವು ನೀಡಬಹುದೆಂದು ಬಸವಣ್ಣನವರು ವಿವರಿಸಿ, ಇದರಿಂದ ಚಳುವಳಿ ಪಡೆಯಬಹುದಾದ ಲಾಭವನ್ನು ತಿಳಿಸಿ ಹೇಳಿ, ಕೊನೆಗೆ ಈ ವಿಚಾರ ಚರ್ಚಿಸಬಹುದು ಎಂದರು.

"ತೀರ್ಮಾನಾನೇ ಮಾಡಿದ್ದೀರಿ, ಇನ್ನೇನು ಚರ್ಚೆ" ಎಂದರು ಯಾರೋ. ಆ ಕಡೆಗೆ ಎಲ್ಲರ ಗಮನ ಹರಿಯಿತು.

"ಮದುವೆಯಾಗುವುದು ಗಂಡು-ಹೆಣ್ಣುಗಳ ತೀರ್ಮಾನ. ಅದನ್ನು ನಡೆಸಬೇಕೆನ್ನುವುದು ಅವರ ತಾಯ್ತಂದೆಯರ ತೀರ್ಮಾನ. ಈಗ ಇದನ್ನು ಶರಣಧರ್ಮಕ್ಕೆ ಅನುಕೂಲವಾಗುವಂತೆ ಹೇಗೆ ನಡೆಸಬೇಕೆಂದು ತಾವು ತೀರ್ಮಾನಿಸಿ" ಎಂದು ಬಸವಣ್ಣನವರು ನಿಧಾನವಾಗಿಯೇ ಹೇಳಿದರೂ, ಮಾತನಾಡಿದ ವ್ಯಕ್ತಿಯ ಧ್ವನಿಯಲ್ಲಿದ್ದ ಮೊನಚಿನಿಂದ ಅವರಿಗೆ ವಿಷಾದವಾದಂತಿತ್ತು.

"ಇದರಿಂದ ಒಳ್ಳೆಯದೇ ಆದೀತೆಂದು ತಾವಾಗಲೇ ತೀರ್ಮಾನಿಸಿದ್ದಂಗಿದೆಯಲ್ಲ" ಎಂದು ಇನ್ನೊಂದು ಕತೆಯಿಂದ ಕೂಗು.

"ಭೇಷಾಯಿತು, ಅಣ್ಣನವರೇ, ಇದು ನಡೆಯಬೇಕು. ಭವಿಗಳ ಬಾಯಿ ಮುಚ್ಚಿಸಬೇಕು," ಎಂದು ಮತ್ತೊಬ್ಬ.

"ಮೇಲಿನವರ ಅಟ್ಟಹಾಸ ಇದರಿಂದ ತಣ್ಣಗಾಗ್ತದೆ"

"ಜಾತಿ ಮೊಟ್ಟೆ ಒಡೀಬೇಕು, ಒಡೆಯ" ಇತ್ಯಾದಿ, "ಕೆಳಗಿನೋರಿಗೆ ಸ್ವಲ್ಪ ಮೇಲೆ ಜಾಗ ಸಿಕ್ಕಂಗಾಯ್ತು", "ಇದು ನಡೆದರೆ ಏನೇನು ಆಯ್ತದೋ", "ಚಳುವಳಿಗೆ ಬಲವಾದ ಕಬ್ಬಿಣದ ಚೌಕಟ್ಟು ಹಾಕಿದ ಹಾಗೆ, ಈ ಮದುವೆ" ಇತ್ಯಾದಿ ಮಾತುಗಳು ಕೇಳಿಬಂದವು. ಬೇರೆ ಬೇರೆ ಕಡೆಯಿಂದ ಕೆಲವು ಕ್ಷಣಗಳು ಈ ಮಾತುಗಳು ಡಿಕ್ಕಿ ಹೊಡೆದದ್ದರಿಂದಾಗಿ ಗಲಿಬಿಲಿ. ಆದರೆ ಆನಂತರ ಸ್ವಲ್ಪ ಮೌನ. ಆದರೂ ಮುಂದುವರಿದ ಗುಜುಗುಜು.

ಮುಂದೇನು ಎಂದು ತಕ್ಷಣ ಬಹುಜನಕ್ಕೆ ಹೊಳೆಯಲಿಲ್ಲ. ಇಂಥದೇ ವಿಚಾರಕ್ಕಾಗಿ ಸಭೆ ಎಂದು ಮೊದಲೇ ಗೊತ್ತಿದ್ದರೆ ಎಲ್ಲರ ಮನಸ್ಸಿನಲ್ಲೂ ವಿಚಾರ ತಿರುವಿದಂತಾಗಿ, ಒಂದು ಅಭಿಪ್ರಾಯ ಈ ಹೊತ್ತಿಗೆ ಮೂಡಿಬರುತ್ತಿತ್ತೇನೋ. ಆದರೆ ಇದ್ದಕ್ಕಿದ್ದಂತೆ ಈ ಬಗ್ಗೆ ಹೇಳಲು ಸ್ವಲ್ಪ ತೊಂದರೆ. ಇದು ಹೆಚ್ಚು ಕಾಲ ಮುಂದುವರೆಯುವಂತಿರಲಿಲ್ಲ. ಅಂಬಿಗರ ಚೌಡಯ್ಯನವರು ಎದ್ದರು, ಗಂಟಲು ಸರಿಪಡಿಸಿಕೊಂಡರು. ಆ ಹೊತ್ತಿಗೆ ಸಭೆ ಸುಮ್ಮಗಾಯಿತು. ಎಲ್ಲರ ಕಣ್ಣುಗಳೂ ಅವರ ಮೇಲೆ ನಟ್ಟವು. ಆ ಹೊತ್ತಿಗೆ ಕತ್ತಲಾಗತೊಡಗಿದ್ದರಿಂದ ಒಳಗಿನಿಂದ ದೊಂದಿಗಳು ಬಂದವು. ಅಂಗಳದ ಅಲ್ಲಲ್ಲಿ ಹತ್ತಾರು ಮೇಲೇರಿ ನಿಂತವು. ಬೆಳಕಿನಲ್ಲಿ ಚೌಡಯ್ಯನವರ ಮುಖ ಸ್ಪಷ್ಟವಾಗಿ ಕಾಣತೊಡಗಿತು.

ಚೌಡಯ್ಯನವರು ನಿಧಾನವಾಗಿಯೇ, ತಗ್ಗಿದ ದನಿಯಲ್ಲಿಯೇ ಮಾತು ಪ್ರಾರಂಭಿಸಿದರು. ಬರುಬರುತ್ತ ಅದು ವೇಗವಾಯಿತು, ಜೋರಾಯಿತು, ಕಾವು ಪಡೆಯಿತು. ಅವರು ಮಂಡಿಸಿದ ಒಟ್ಟು ವಾದ ಇದು: ಲಿಂಗಕಟ್ಟಿಕೊಂಡಾಕ್ಷಣ ಲಿಂಗವಂತರೆಲ್ಲ ಸಮಾನರು ಎಂಬ ಭಾವನೆ ಇಲ್ಲ, ಬಹುಮಂದಿಗೆ ತಾನು ಮೇಲು-ನೀನು ಕೀಳು ಅನ್ನುವ ವೈದಿಕತನ ಇನ್ನೂ ನಮ್ಮನ್ನು ಪ್ರಾರಬ್ಧವಾಗಿ

ಕಾಡುತ್ತಿದೆ. ಶಿವಾಚಾರವನ್ನು ಸರಿಯಾದ ರೀತಿಯಲ್ಲಿ ಆಚರಣೆಗೆ ತಂದಿರುವ ಶರಣರು ಬಹು ಕಡಿಮೆ. "ಎಲ್ಲ ಭಕ್ತರೂ ಬಸವಣ್ಣನವರಾಗಲು ಸಾಧ್ಯವೇ?" ಎಂದರು.

"ಅದ್ಕೇ ಮತ್ತೆ ಈ ಥರ ಲಗ್ನ ಥರವಾ ಅನ್ನೋದು?" ಎಂದು ಒಬ್ಬ ಹೇಳಿದ ಸಭೆಯಿಂದ.

'ಶ್' ಎಂದು ಇತರರು ಅವನ ಬಾಯಿ ಮುಚ್ಚಿಸಿದರು. "ಅವರು ಹೇಳಿದ ಮೇಲೆ ಮಾತಾಡಿ, ಶಿವ" ಎಂದರು ಕೆಲವರು. "ಹೇಳೋದ್ನ ಹೇಳಿ, ಬುದ್ಧಿ" ಎಂದು ಇತರರೆಂದರು. ಚೌಡಯ್ಯನವರು ಮಾತು ಮುಂದುವರಿಸಿದರು. ಅವರು ತಮ್ಮ ಮಾತನ್ನು ಪ್ರಾರಂಭಿಸಿದ ರೀತಿ ಧಾಟಿ ನೋಡಿದರೆ ಹೆಚ್ಚು ಹೊತ್ತು ಮಾತು ಮುಂದುವರೆಸುವಂತೆ ಕಾಣುತ್ತಿತ್ತು. ಆದರೆ ಯಾರೋ ಮಧ್ಯೆ ಬಾಯಿ ಹಾಕಿದ್ದರಿಂದ ಮಾತು ವೇಗವಾಯಿತು. "ಶರಣ ಧರ್ಮ ಕೆಳಗಿರೋರಿಗೆ ಬಾಯಿ ಕೊಟ್ಟಿದೆ, ಧೈರ್ಯಕೊಟ್ಟಿದೆ, ಮೇಲು ಜಾತಿಯವರಿಗೆ ತಾವು ಸಮನಾಗಿ ಬೆಳೀಬೇಕು ಅಂಬೋ ಕೆಚ್ಚು ತಂದುಕೊಟ್ಟಿದೆ. ಈಗ ಈ ಲಗ್ನ ಆದರೆ ತಾವು ಮೇಲೇರಿದಿವಿ ಅಂಬೋ ಭಾವನೆ ತಂದುಕೊಟ್ಟಂಗೆ ಆಗ್ತದೆ, ಇದು ನಡೀಬೇಕು. ಇಲ್ಲದಿದ್ದರೆ, ಬೇರೆಯೋರಿಗೂ ಲಿಂಗವಂತರಿಗೂ ಏನು ವ್ಯತ್ಯಾಸ? ನಾವೆಲ್ಲ ಇದಕ್ಕೆ ಬಂದು ಸೇರಿಕೊಂಡದ್ದಕ್ಕೆ ಸಾರ್ಥಕ ಏನು?" ಎಂದು ಮಾತು ಮುಗಿಸಿದರು.

ಅವರು ಮಾತು ಮುಗಿಸಿದ ಮೇಲೆ ಮತ್ತೆ ಧ್ವನಿಗಳ ಗೊಂದಲ. "ಅಲ್ಲ ಕಣ್ರೆ ಒಡೆಯರಾ, ಕೈಯಾಗೆ ಐದು ಬೆಳ್ಳು ಒಂದೇ ಉದ್ದ ಅವಾ? ಮನುಷ್ಯರಲ್ಲೂ ಹಂಗೇನೇ ಅಲ್ಲವಾ? ಏಣಿ ಹತ್ತೋವಾಗ ಕೆಳಗಿನಿಂದ ಒಂದೊಂದಾಗಿ ಮೆಟ್ಟಿಲು ಹತ್ತಬೇಕೇ ಹೊರತು, ಕೊನೆ ಮೆಟ್ಟಲಿಗೇ ಹಾರಕ್ಕಾದಾತಾ?" "ಇವೆಲ್ಲ ನಿಧಾನವಾಗಿ ನಡೀಲಿ, ಗುರುವೇ?" ಎಂದು ಒಬ್ಬ ಎದ್ದು ನಿಂತು ನುಡಿದ. "ನಿಮ್ಮ ಹೆಸರೇನು?" ಎಂದು ಯಾರೋ ಕೇಳಿದರು. "ನಾನು ಗದ್ದುಂಬಳ್ಳಿ ಪಕ್ಕದ ಪುರಗೂರುನೋನು, ಗುರುವೇ. ನಾನೂ ಭಕ್ತನೇ. ಈ ವಿಚಾರ ನಂಗೂ ತಿಳೀತು. ಅದಕ್ಕೇ ಇಲ್ಲಿಗೆ ಬಂದೇ. ನನ್ನ ಹೆಸರು ಉಪ್ಪಾರ ಮುನಿಯ ಅಂತ," ಎಂದ. ಜನರಲ್ಲಿ ಮತ್ತೆ ಗುಜುಗುಜು.

"ಆಯಿತು ಮುನಿಯಣ್ಣನವರೇ, ಈ ಮದುವೆ ನಡೆದರೆ ತೊಂದರೆಯೇನು?" ಎಂದು ಬಸವಣ್ಣನವರು ಕೇಳಿದರು.

"ಯಾರೋ ಏನೋ ಏಳ್ತಾರೆ ಅಂತ ನಡೆಯೋ ಕಾರ್ಯ ನಿಲ್ಲಿಸಾಕಾಯ್ತದಾ?" ಎಂದು ಮತ್ತಾರೋ ಜಬರಿಸಿದರು.

"ಸ್ವಾಮಿ, ಈ ರೀತಿ ಜಬರಿಸೋದಾದರೆ ಈ ಸಭೇನ ಯಾಕೆ ಕರೀಬೇಕಾಗಿತ್ತು? ಚರ್ಚೆ ಮಾಡೋದಕ್ಕೆ ಬಿಡದಿದ್ದರೆ ಬೇಕಾದ ಹಾಗೆ ಮಾಡಿಕೊಳ್ಳಿ" ಎಂದರು ಮತ್ತಾರೋ.

"ದಯವಿಟ್ಟು ನಿಶ್ಯಬ್ದವಾಗಿರಬೇಕು" ಎಂದು ನಿಂತು ಚೆನ್ನಬಸವಣ್ಣನವರು ಕೈಮುಗಿದು ಕೇಳಿಕೊಂಡರು: "ಈ ವಿಚಾರ ಗಂಭೀರವಾದದ್ದು. ಚೌಡಯ್ಯನವರೆಂದಂತೆ ಇದು ನಡೆಯಬೇಕು. ಶರಣಧರ್ಮ ಇತರರಿಗಿಂತ ಬೇರೆಯಾಗಬೇಕು. ಶಿವನ ಒಕ್ಕಲಿನೋರು ನಾವು. ನಮ್ಮಲ್ಲಿ ಭೇದವಿಲ್ಲ ಅಂತ ಇತರರಿಗೆ ತೋರಿಸಬೇಕು." ಪುಳಂಗನೆ ಒಬ್ಬ ಮೇಲೆದ್ದು ಜೋರಾಗಿ ಎಂದ.

"ಸ್ವಾಮಿ, ಬೇರೆಯೋರಿಗೆ ನಮ್ಮ ದೊಡ್ಡಸ್ತಿಕೆ ತೋರಿಸೋದು ಮುಖ್ಯವೋ, ನಾವು ಮಾಡಿದ ಕೆಲಸದಿಂದ ಏನು ಪರಿಣಾಮ ಆಗತ್ತೇಂತ ಯೋಚಿಸಿ ಹಾಗೆ ನಡೆಯೋದು ಮುಖ್ಯವೋ? ನಾನು ಈ ಊರಿನವನೇ, ಹೆಸರು ಸಣ್ಣರಸ ಅಂತ. ವ್ಯಾಪಾರ ಗೀಪಾರ ಮಾಡ್ಕೊಂಡಿದ್ದೀನಿ. ಮಲ್ಲಕ್ಕೊಂಡಿದ್ದವನು ಕೂತು ನಿಂತುಕೋಬೇಕು, ದೇವರೇ. ಹಂಗೇ ನಿಲ್ಲಕ್ಕಾಯ್ತದ?"

"ಯ್ಯೋ, ಕೂತ್ಕಳ್ಳಯ್ಯ, ಸಾಕು" "ಹಿರಿಯೋರಿಗೆ ಇವ್ನ ಬುದ್ಧಿ ಏಳೋವಷ್ಟಾದನಾ?" "ಅಣ್ಣನವರಿಗೆ ತಿಳಿಯದ್ದು ನಿಂಗೆ ಹೊಳೀತದಾ?" ಎಂದು ಕೆಲವರು ಕೂಗಾಡಲಾರಂಭಿಸಿದರು.

"ಅಪ್ಪಾ, ಶರಣಸಂಕುಳವೇ, ನೀವು ಬೇಕಾದ್ದು ಮಾಡ್ಕಳ್ಳಿ. ಇಲ್ಲಿ ಬನ್ನಿ ಮಾತಾಡಬೇಕು ಅಂದು ಕರೆಸಿಕೊಂಡಿರಿ. ಈಗ ಮಾತಾಡಿದರೆ ಮುಚ್ಕಳಯ್ಯ ಅಂತೀರಿ. ಅದೇನು ಬೇಕೋ ಮಾತಾಡಿಕೊಳ್ಳಿ, ನಾವು ಇಲ್ಲಿದ್ರೆ ತಾನೇ" ಎಂದು ಸಣ್ಣರಸ ಹೊರಗೆ ಹೊರಟ. "ನಡೀರಪ್ಪಾ, ನಾವೂ ಬರ್ತೀವಿ" ಎಂದು ಅವನೊಡನೆ ಇನ್ನೂ ಕೆಲವರು ಹೊರಟರು. ಹೋಗುತ್ತಾ ಒಬ್ಬನೆಂದ "ಅಣ್ಣನವರೇ, ನೀವು ಹಿರಿಯರು. ನೀವು ಏನೇ ಮಾಡಿ ನಮ್ಮ ಒಪ್ಪಿಗೆಯಿದೆ" ಎಂದು ಹೇಳಿದ. ಅವನ ಮಾತಿನಲ್ಲಿ ಪ್ರಾಮಾಣಿಕತೆಯಿತ್ತೋ, ವ್ಯಂಗ್ಯವಿತ್ತೋ ತಿಳಿಯಲಿಲ್ಲ, ಆ ಗೊಂದಲದಲ್ಲಿ ಹಾಗೆ ತಿಳಿಯುವುದು ಸಾಧ್ಯವೂ ಇರಲಿಲ್ಲ, ಇತರರಿಗೆ ತಿಳಿಯುವ ವ್ಯವಧಾನವೂ ಇರಲಿಲ್ಲ.

"ದಯವಿಟ್ಟು ಹೋಗಬೇಡಿ; ಒಂದು ತೀರ್ಮಾನಕ್ಕೆ ಬರೋಣ" ಎಂದು ಬಸವಣ್ಣನವರೇ ಎದ್ದು ನಿಂತು ಬಿನ್ನವಿಸಿಕೊಂಡರೂ ಪ್ರಯೋಜನವಾಗಲಿಲ್ಲ. "ಹೋಗುವವರನ್ನು ಕಟ್ಟಿ ಯಾಕೆ ಹಾಕ್ತೀರಿ, ಒಡೆಯರೇ" ಎಂದರು ಕೆಲವರು. ಹೋದವರು ಹೋದರು. ಉಳಿದವರು ತೆಪ್ಪಗೆ ಕುಳಿತರು, ಹಿರಿಯರು ಏನು ಹೇಳುವರೋ ಎಂದು ಕಾದರು.

ಮುಂದೆ ನಡೆದ ಸಭೆ ಶಾಂತವಾಗಿತ್ತು. ಅಡ್ಡಮಾತುಗಳಿರಲಿಲ್ಲ. ಆದರೆ ಮುಂದೆ ತಮ್ಮ ಅಭಿಪ್ರಾಯ ಹೇಳುವವರ ಮಾತಿನಲ್ಲಿ ಹೊಸ ಅಂಶವೇನೂ ಇರಲಿಲ್ಲ, ಚರ್ವಿತ ಚರ್ವಣ. ಹೇಳಬೇಕಾದದ್ದು ಹೇಳಿಯಾಗಿತ್ತು. ಹಾಗೆ ಮಾತಾಡಿದವರ ಸಂಖ್ಯೆ ಕೂಡ ಕಡಿಮೆಯೇ. ಅಪಸ್ವರಗಳು ಹೋದಮೇಲೆ ಮುಂದೆ ಸಮೇಳವೇ ಕಾಣಿಸಿತು. ಮದುವೆ ಆಗಬೇಕು, ಜನರಿಗೆ ಈ ವಿಷಯ ತಿಳಿಸಬೇಕು, ಲಿಂಗವಂತರೆಲ್ಲ ಸಮಾನರು, ಅವರಲ್ಲಿ ಭೇದವಿಲ್ಲ ಎಂದು ಸಾರಿ ಹೇಳಬೇಕು–ಇಷ್ಟು ತೀರ್ಮಾನ.

ಕೊನೆಯಲ್ಲಿ ಮಧುವಯ್ಯ ಎದ್ದರು. ತಮ್ಮ ಪರಿಚಯ ಹೇಳಿಕೊಂಡರು; ತಮ್ಮ ಬೀಗರಾಗಲಿರುವ ಅಳ್ಳಯ್ಯನವರನ್ನು ತೋರಿಸಿದರು; ಅವರ ವಿಚಾರ ಕೆಲವು ಮಾತನ್ನಾಡಿದರು. ಹೇಗೆ ಪರಿಸ್ಥಿತಿ ಈ ಮದುವೆಗೆ ಒದಗಿ ಬಂದಿದೆ ಎಂದು ವಿವರಿಸಿದರು. ನಾವು ಒಂದಾಗುವುದಕ್ಕೆ ಶಿವನೇ ಸೃಷ್ಟಿಸಿರುವ ಸನ್ನಿವೇಶ ಇದು ಎಂದರು. ಅವರು ಮಾತಾಡುವಾಗ ಕಣ್ಣಂಚಿನಲ್ಲಿ ಕಾಣಿಸಿಕೊಂಡು ದೊಂದಿಗಳ ಬೆಳಕಲ್ಲಿ ಹೊಳೆದ ಹನಿಗಳು ಅವರ ಪ್ರಾಮಾಣಿಕತೆಯ ದ್ಯೋತಕವಾಗಿತ್ತು.

ಸಭೆಯ ತೀರ್ಮಾನ ಸ್ಪಷ್ಟವಾಗಿತ್ತು. ಈಗಾಗಲೇ ಅಂದುಕೊಂಡಂತೆ ಮದುವೆ ನಡೆಯಬೇಕು. ಶರಣರ ಕರ್ತವ್ಯ ಎಂದರೆ ಈ ಮದುವೆಯ ವಿಶೇಷವನ್ನು ಇತರ ಭಕ್ತರಿಗೆ ತಿಳಿಸುವುದು; ಅದನ್ನು ಅನುಸರಿಸುವಂತೆ ಪ್ರೇರಿಸುವುದು.

ಕೊನೆಯಲ್ಲಿ ಪ್ರಸಾದ ಸೇವನೆ. ಗಲಿಬಿಲಿಯೆಲ್ಲ ಮುಗಿದು ಬಸವಣ್ಣನವರು ತಮ್ಮ ಒಳಕೋಣೆಗೆ ಸರಿಯುವಾಗ ಸಾಕಷ್ಟು ಹೊತ್ತಾಗಿತ್ತು. ಗದ್ದಲದಿಂದಾದ ಆಯಾಸ, ಪರಿಸ್ಥಿತಿ ಉಂಟುಮಾಡಿದ್ದ ಬಿಗಿವಿನಿಂದಾಗಿ ಮನಸ್ಸಿನಲ್ಲೇನೋ ಭಾವದ ಅನಿಸಿಕೆ. ಈ ಸಭೆ ಹೀಗಾಯಿತಲ್ಲ ಎಂಬ ಆತಂಕ. ಬಹು ಜನರು ಈ ಮದುವೆಗೆ ಒಪ್ಪಿದ್ದು, ಉತ್ಸಾಹದಿಂದ ಸ್ವಾಗತಿಸಿದ್ದರಿಂದ ಒಂದು ಬಗೆಯ ಸಮಾಧಾನ. ಒಟ್ಟಾರೆ ಅಣ್ಣನವರ ಮನಸ್ಸಲ್ಲಿ ವಿಚಾರಗಳ ಸಂತೆ. ಯಾವುದೂ ಸ್ಪಷ್ಟವಿಲ್ಲ, ಗದ್ದಲ ಮಾತ್ರ ಎದ್ದು ಕಾಣುವ ಹಾಗೆ. ಆದರೂ ಹೃದಯವಾಳದ ಮೂಲೆಯೊಂದರಲ್ಲಿ ಚಿಂತೆಯ ಎಳೆ, ಬಿದಿಗೆಯ ಚಂದ್ರನ ರೇಖೆಯಂತೆ. ಏನಾಗುವುದೋ!

೬

ಮದುವೆಯೆಂದರೆ ತಾನು ಮದುವೆ ನಿಂದ ಸಂದರ್ಭವೇ ನೆನಪಿಗೆ ಬರುತ್ತದೆ. ಮದುವೆಯೆಂದರೆ ತನ್ನದು ಸಾಧಾರಣ ಮದುವೆಯೇ? ಎಂದರೆ ವೈಭವದ್ದೆಂದು ಅರ್ಥವಲ್ಲ, ಒಟ್ಟಿಗೇ ಇಬ್ಬರು ಕನ್ಯೆಯರೊಡನೆ ಮದುವೆಯಾದದ್ದು ವಿಶೇಷ. ಒಬ್ಬನಿಗೆ ಇಬ್ಬರು ಹೆಂಡಿರಿರುವುದೇನೂ ಅತಿಶಯವಲ್ಲ. ಆದರೆ ಇಬ್ಬರನ್ನೂ ಒಂದೇ ಹಸೆಯ ಮೇಲೆ ಮದುವೆಯಾಗುವುದು ನಿಜವಾಗಿಯೂ ಅಪರೂಪವೇ!

ಗಂಗೆ–ನೀಲ ಅವರಿಬ್ಬರನ್ನು ನೆನಪಿಸಿಕೊಂಡರೆ ಕೂಡಲ ಸಂಗಮದಲ್ಲಿನ ಕೃಷ್ಣ–ಮಲಪ್ರಹರಿಗಳು ಮನಸ್ಸಿನಲ್ಲಿ ಮೂಡುತ್ತಾರೆ. ಇಬ್ಬರೂ ಎಲ್ಲೆಲ್ಲಿಂದಲೋ ಹರಿದು ಬಂದು ಅಲ್ಲಿ ಸೇರುವ ದೃಶ್ಯ ರಮಣೀಯವಾದದ್ದು. ಅದೂ ಅವುಗಳ ನೆಲೆಯಲ್ಲಿ ಮಳೆಯಾದರೆ ತುಂಬಿ ಹರಿಯುವಾಗ ನೋಡಬೇಕು ಅವರ ವೈಭವವನ್ನು ಕಣ್ತುಂಬ ಕಾಣಲು. ಸೇರುವ ಜಾಗದಲ್ಲಂತೂ ಕಣ್ಣೋಡಿಸಿದಷ್ಟೂ ನೀರು. ದಡದಗುಂಟ ಮಳೆಗಾಲದಲ್ಲಿ ಬೆಳೆದು ನಿಂತ ಹಸಿರಿನ ನಡುವೆ ಹರಿವ ಆ ನದಿಯ ಸಂಗಮ ಸ್ಥಳ ಕಂಡರೆ ಮೈಮರೆಸುವಂಥದು. ಎರಡೂ ಸೇರುವ ಮೂಲೆಯಲ್ಲಿ ನಿಂತರೆ ಮುಂದೆ ಉದ್ದಕ್ಕೆ ಒಂದಾಗಿ ಹರಿಯುವ ನದಿ ದಿಗಂತದವರೆಗೂ ಚಾಚಿ ಮುನ್ನಡೆಯುತ್ತದೆ. ಕವಿಯ ಕಲ್ಪನೆಯಂತೆ ಅದರ ದೀರ್ಘತೆ, ಸಮೃದ್ಧಿಯಂತೆ ಅದರ ಬಾಹುಳ್ಯ. ಹೊಸ ನೀರನ್ನು ಹೊತ್ತು ತಂದ ನದಿ ಸೇರಿದಾಗ ಒಂದು ಹರದಾರಿ ದೂರ ಗೆರೆ ಬೀಳುತ್ತದೆ ಮಧ್ಯೆ. ಎಡದ ನೀರು ಬೆಳ್ಳಗೆ, ಬಲಗಡೆಗೆ ಸ್ವಲ್ಪ ಕೆಂಪುಮಿಶ್ರಿತ ಕಪ್ಪು. ಇಬ್ಬರು ಹುಡುಗರು ಕೈಕೈಹಿಡಿದು ಹಾರುತ್ತ ಹೋದರೆ ಒಂದಷ್ಟು ದೂರದವರೆಗೆ ಎರಡು ದೇಹಗಳು ಕಾಣುತ್ತಿದ್ದು, ಮುಂದೆ ದೃಷ್ಟಿ ಮಸುಕಾದಾಗ ಒಂದೇ ಆಗಿ ಕಾಣುವಂತೆ ಅವರಿಬ್ಬರ ಸೇರುವಿಕೆ. ಗಂಡಹೆಂಡಿರು ಮುನಿಸಿಕೊಂಡು ಒಂದೇ ಪಲ್ಲಂಗದ ಮೇಲೆ ಮುಖ ತಿರುಪಿ ಮಲಗಿದವರು ರಾಜಿಯಾದಾಗ ಒಂದಾಗುವರಲ್ಲ ಹಾಗೆ ಅದರ ನೋಟ! ಕಪ್ಪು–ತಿಳಿಬಣ್ಣಗಳ ಸಂಗಮ!

ಗಂಗೆ–ನೀಲರಿಬ್ಬರೂ ಅಂತೆಯೇ ಮನಸ್ಸಿನಲ್ಲಿ ಚಿತ್ರ ಮೂಡಿದರೆ ನನಗನ್ನಿಸುವುದು. ಗಂಗೆಯ ಮೈಬಣ್ಣ ತಿಳಿ; ನೀಲಳದು ಕಪ್ಪಲ್ಲ, ಸ್ವಲ್ಪ ಕಂದು. ಬಾಳೆಯ ಗೊನೆಯ ಮುಂದೆ ಮೋತೆ ಇರುತ್ತದಲ್ಲ ಅದರ ಬಣ್ಣ. ಹಾಗೆಯೇ

ಸ್ವಭಾವದಲ್ಲಿಯೂ ಸ್ವಲ್ಪ ವ್ಯತ್ಯಾಸ: ಗಂಗೆ ಮಿದು, ನೀಲಳದು ಸ್ವಲ್ಪ ದುಡುದುಡು ಸ್ವಭಾವ. ಮಾತೂ ಹಾಗೆ, ನಡೆಯೂ ಹಾಗೆ. ಅವರಿಬ್ಬರನ್ನೂ ಒಟ್ಟಿಗೆ ನೆನಸಿಕೊಂಡರೆ ,ಮನಸ್ಸಿನಲ್ಲಿ ಮೂಡುವುದು ಯೌವನದ ದಿನಗಳಲ್ಲಿ ತಾನವರನ್ನು ಕಂಡ ಸನ್ನಿವೇಶದ ಚಿತ್ರ.

ಅವರನ್ನು ಮೊದಲು ಎಲ್ಲಿ ಹೇಗೆ ಕಂಡೆ ಎಂಬುದು ನೆನಪಿಲ್ಲ, ಆದಾಗಲೇ ಆಗಿ ಮೂವತ್ನಾಲ್ಕು ಮೂವತ್ತೈದು ಸಂವತ್ಸರಗಳೇ ಆಗಿರಬೇಕು. ಎಲ್ಲಿ ಉಳಿಯಬೇಕು ನೆನಪು? ಅಂತೆಯೇ ಅವರನ್ನು ಮೊದಲ ಬಾರಿಗೆ ಕಂಡಾಗ ಒಟ್ಟಿಗೇ ಕಂಡದ್ದೇ, ಬೇರೆಬೇರೆಯಾಗಿ ನೋಡಿದ್ದೇ ಗೊತ್ತಿಲ್ಲ ಅಥವಾ ಮೊದಲ ಬಾರಿಗೆ ಒಟ್ಟಿಗೆ ಕಂಡದ್ದು ಎಲ್ಲಿ ಎಂಬುದೂ ಸ್ಪಷ್ಟವಿಲ್ಲ.

ಈಗ ಹೇಗೇ ಇರಲಿ ಅಥವಾ ಈಗಲೂ ಅವರ ನೆನಪು ಮನಸ್ಸಿನಲ್ಲಿ ಮಾಧುರ್ಯವನ್ನು ತರಬೇಕೆಂದರೆ, ಅವರನ್ನು ಒಟ್ಟಿಗೇ ಮನಸ್ಸಿನಲ್ಲಿ ಕಲ್ಪಿಸಿಕೊಳ್ಳಬೇಕು. ಮತ್ತು ಆ ನೆನಪು ಮೂವತ್ನಾಲ್ಕು-ಮೂವತ್ತೈದು ವರ್ಷಗಳು ಹಿಂದಕ್ಕೆ ಹೋಗಬೇಕು. ಈಗವರು ಮನಸ್ಸಿಗೆ ಸಂತೋಷವೀಯಲಾರರೆಂದು ಇದರ ಅರ್ಥವಲ್ಲ. ವಯಸ್ಸಾಗಿದೆ, ಮೂವರಿಗೂ, ಹಿಂದಿನ ಭಾವನೆಗಳ ಭರ ಇಂದಿಗೆ ಸಾಧ್ಯವೇ? ಈಗ ಪ್ರತಿದಿನವೂ ಅವರನ್ನು ಕಾಣುತ್ತೇನೆ, ಒಟ್ಟಿಗೆ ಎಷ್ಟೋ ಬಾರಿ. ಆದರೆ ಆಗಿನ ನೆನಪು ಕಲ್ಪನೆಗೆ ಬಾರದು ಅಥವಾ ಹೀಗೆ ಹೇಳಬಹುದೇನೋ: ಆಗ ಕಂಡ ಗಂಗೆ-ನೀಲರು ಮಳೆಗಾಲದ ಕೂಡಲಸಂಗಮದಂತೆ, ಸಮೃದ್ಧ, ಅಪಾರ. ಕಂಡರೆ ಧುಮುಕಬೇಕು, ಆ ದಡಕ್ಕೆ ಈಜಬೇಕು ಎಂಬ ಹಂಬಲ. ನೀರೇ ಸುಖ, ದಡವಲ್ಲ ಎಂಬ ಭಾವನೆ. ದಡವಿರುವುದು ಈಜಿ ದಣಿದು ಆಯಾಸ ಕಳೆದುಕೊಳ್ಳಲು, ಮತ್ತೆ ಧುಮುಕಲು. ಈಗ ಅವರ ಚಿತ್ರವೆಂದರೆ ಇದೇ ಪುಷ್ಯಮಾಸದ ಸಂಗಮ. ಸಣಕಲು ಶರೀರ, ಅಲ್ಲಲ್ಲಿ ಎದ್ದು ಕಾಣುವ ಮರಳು ದಿನ್ನೆಗಳು, ದಡಗಳೆಲ್ಲ ಒಣಕಲು. ಆದರೆ ನೀರು ತುಂಬಿದ್ದಾಗ ಆ ಸಂಗಮದ ಮಂಟಪದ ಕೋಡು-ಕಳಶ ಮಾತ್ರ ಕಾಣುತ್ತದೆ. ಬೇಸಗೆಯಲ್ಲಿ ಸಂಗಮದಲ್ಲಿ ಪ್ರಮುಖವಾಗಿರುವುದು ಆ ಕೂಡಲ ಸಂಗಮದೇವನ ಮಂಟಪವೇ. ಅದನ್ನು ಕಂಡರೆ ಉಕ್ಕುವ ಭಾವನೆ ಉತ್ಸಾಹವಲ್ಲ, ಪ್ರಾಂಜಲತೆ.

ಅಕ್ಕ-ತಂಗಿ; ಗಂಗೆ-ನೀಲ. ಇಬ್ಬರ ಮಧ್ಯೆ ಒಂದು-ಒಂದೂವರೆ ವರ್ಷದ ಅಂತರವಿರಬೇಕು, ಅಷ್ಟೆ. ಸಿದ್ಧರಸರ ಇಬ್ಬರು ಮುದ್ದಿನ ಮಕ್ಕಳು. ತಾನು ಮಂಗಳವಾಡಕ್ಕೆ ಬಂದಾಗ ಅವರ ತಾಯಿಯಾಗಲೇ ತೀರಿಕೊಂಡಾಗಿತ್ತು. ಅಚ್ಚಬ್ಬೆಯಂತೆ ಅವರ ಹೆಸರು. ನೀಲಳನ್ನು ಹೆತ್ತ ಒಂದೆರಡು ವರ್ಷದಲ್ಲಿಯೇ ತೀರಿಕೊಂಡರಂತೆ. ಏಕೆ ಸತ್ತರು? ಸಾವಿಗೆ ಕಾರಣ ಬೇಕೆ? ಬದುಕು ಪ್ರಾರಂಭವಾಗುವ ಕ್ಷಣದಿಂದಲೇ ಇರುವಿಕೆಯಲ್ಲಿ ಶಾಶ್ವತ ಸ್ಥಾನ ಪಡೆದ ಸಾವು ಯಾವಾಗ ಆವರಿಸಿಬಿಡುವುದೋ ಬಲ್ಲವರಾರು? ಸಾವು ಬಂತು ಎನ್ನುತ್ತೇವೆ. ಅದು ಬರುತ್ತದೆಯೇ? ಮೊದಲೇ ಇರುವುದು ಬರುವುದು ಹೇಗೆ

ಸಾಧ್ಯ? ಒಳಗೆ ಇದ್ದದ್ದು ಹೊರಗೆ ಸುಳಿಯುವುದೇ? ಅದನ್ನು ಕಾಣಲಾಗುವುದಿಲ್ಲವಲ್ಲ. ಅಥವಾ ಇದ್ದ ಜೀವ ಹೋಗುವುದೇ? ಇದ್ದದ್ದೂ ಕಾಣದು. ಜೀವವೆಂದರೆ ಉಸಿರಾಟವೇ? ಹಾಗಾದರೆ ಉಸಿರೇ ಜೀವವೇ? ಜೀವ ಹೋದರೆ, ಸಾವು ಬಂದರೆ ಉಸಿರಾಟ ನಿಲ್ಲುತ್ತದೆ ಎಂಬುದು ನಿಜವಾದರೂ ಅದು ಎಲ್ಲಿ ಅಡಗುತ್ತದೆ? ಹೊರಗಿನ ಗಾಳಿಯಲ್ಲಿ ಸೇರುತ್ತದೆ ಎಂದೇನೋ ವಿವರಿಸಬಹುದು. ಆದರೆ ಹೊರಗಿನ ಗಾಳಿಗೂ ಉಸಿರಾಡುವ ಗಾಳಿಗೂ ವ್ಯತ್ಯಾಸವೇ ಇಲ್ಲವೇ? ಇರಬಹುದು. ಇರದಿರಬಹುದು. ಏನೂ ಅರ್ಥವೇ ಆಗದು. ಅಂತೂ ಅಚ್ಚಬ್ಬೆ ಸತ್ತರು. ಆ ಮಕ್ಕಳಿಗೆ ತಾನೇ ತಮ್ಮ ತಾಯಿ ಏಕೆ ಸತ್ತರು, ಹೇಗೆ ಸತ್ತರು ಎಂದು ತಿಳಿಯುವ ವಯಸ್ಸೇ ಅದು! ನನ್ನ ತಾಯಿಯ ಸಾವು ಹಾಗೇ ತಾನೇ, ನನಗಾಗ ತೀರ ಕಿರುವಧೆಯ! ಏನೂ ನೆನಪಿಲ್ಲ. ಗಂಗೆ–ನೀಲ–ನಾನು ತಾಯಿಯರನ್ನು ಕಳೆದುಕೊಂಡದ್ದರಲ್ಲಿ ಸಮಾನರು! ಅದಕ್ಕೆ ನಮ್ಮ ಮದುವೆ ಒಂದು ರೀತಿಯಲ್ಲಿ ಸರಿಯಾಯಿತು. ತಾಯಿಯಿಲ್ಲದವರ ಮದುವೆ.

ಈಚೆಗೆ ಏಕೋ ಇಂಥದೆಲ್ಲದರ ನೆನಪು ಎಂದರೆ ಮನಸ್ಸಿನಲ್ಲಿ ಶೂನ್ಯತೆಯೇ ಏರ್ಪಡುತ್ತದೆ. ಒಂದು ಕಾಲದಲ್ಲಿ ನಾವು ಎಂದೆಂದಿಗೂ ಇರುವವರು ಎನಿಸುವ ಭಾವನೆ ಎಷ್ಟು ಬರಡು ಎನಿಸುತ್ತದೆ. ಎಂದೆಂದಿಗೂ ಇರಲಾರದ್ದು ಎಂತಹ ವರ ಎಂದೂ ಅನಿಸುತ್ತದೆ. ಒಂದೇ ರೀತಿಯ ಈ ಜೀವನವನ್ನು ಕೊನೆಯಿರದೆ ಕಳೆಯುವುದೆಂದರೆ ಎಂಥ ನರಕ! ಸದ್ಯ, ಸಾವು ಎಂಬುದೊಂದಿದೆಯಲ್ಲ, ಅದೇ ಪುಣ್ಯ!

ಗಂಗೆ–ನೀಲ, ಮೊದಮೊದಲು ನನ್ನ ಎರಡು ಕಣ್ಣುಗಳೆನಿಸಿದ್ದರು. ಏಕೆಂದರೆ ನಮ್ಮ ವಯಸ್ಸು ಅಂಥದ್ದು ಆಗ. ಒಬ್ಬರಲ್ಲಿ ಒಬ್ಬರು ಸೇರಿಹೋಗಬಹುದಾದ ಯೌವನ! ಒಬ್ಬರಲ್ಲಿ ಇನ್ನೊಬ್ಬರು ತಮ್ಮತನವನ್ನು ಹುದುಗಿಸಿಡಬಹುದಾದ ಮನಸ್ಸು. ತಾನು ತಾನಾಗಿರದೇ ಅವರಲ್ಲಿ ಸೇರಿಹೋಗಬೇಕು ಎಂಬುದೇ ಸದಾ ತುಡಿಯುವ ಭಾವನೆ! ಕಾಲ ಸರಿದಂತೆ ಒಂದು ಕಣ್ಣಲ್ಲೇ ಕಾಣುವುದು ಸಾಕು ಎನಿಸುತ್ತದೆ. ಅಥವಾ ಒಬ್ಬರದೇ ಎರಡು ಕಣ್ಣುಗಳಲ್ಲಿ ನೋಟ ಒಂದಾಗುವಂತೆ, ಇಬ್ಬರ ಒಂದೊಂದು ಕಣ್ಣು ಸೇರಿದರೆ ಒಂದು ನೋಟ ಆಗಲಾರದು ಎಂಬ ಅರಿವು. ಕಣ್ಣು ಸೇರಿದರೆ ನೋಟಗಳು ಥಿಕ್ಕಿ ಹೊಡೆದಾವು ಎಂಬ ಕಳವಳ. ಹಿಂದೆ ಕಣ್ಣುಗಳು ಸೇರಿದರೆ ಪರಸ್ಪರರ ದೃಷ್ಟಿಯಲ್ಲಿ ಕಣ್ಣ ಕಾಂತಿ ಕರಗಿಬಿಡುತ್ತಿದ್ದವಲ್ಲ!

ಕೃಷ್ಣ–ಮಲಪ್ರಹರಿ, ಗಂಗೆ–ನೀಲ. ತಾಯಿಲ್ಲದ ಹೆಣ್ಣು ಮಕ್ಕಳನ್ನು ತಂದೆ ಸಿದ್ಧರಸರು ಪಾಲಿಸಿದರು; ಮತ್ತೆ ಮದುವೆಯಾಗದೆ ಸಾಕಿದರು. ಮಲತಾಯಿಯನ್ನು ತಂದರೆ ಮಕ್ಕಳಿಗೆ ತೊಂದರೆಯಾದೀತೆಂದು ಮತ್ತೆ ಮದುವೆಯಾಗಲಿಲ್ಲವೋ, ಅವರಲ್ಲಿ ದೈಹಿಕಸೌಖ್ಯದ ಕಾವು ಇಳಿದಿತ್ತೋ, ಮೊದಲ ಹೆಂಡತಿಯ ಸಹವಾಸ ಸೌಖ್ಯದ ನೆನಪಿನಲ್ಲಿ ಹೊಸ ಹೆಂಡತಿಯೊಡನೆ ನಡೆಸುವ ಸಂಸಾರ ಸುಖಮಯವಾಗಲಾರದೆಂದೋ, ಕಾರ್ಯಬಾಹುಳ್ಯದ ನಡುವೆ ಮದುವೆಯ

ಬಗ್ಗೆ ಯೋಚಿಸುವ ವ್ಯವಧಾನ ದೊರೆಯಲಿಲ್ಲವೋ ಅಥವಾ ಹೊರ ಬಾಳಿ! ಛೇ, ನನಗೇಕೆ ಈಗ ಅಂಥ ವಿಚಾರಗಳು ಬರುತ್ತಿವೆ! ಏನಾದರಾಗಲಿ, ಸಿದ್ಧರಸರು ಮದುವೆಯಾಗಲಿಲ್ಲ ಮತ್ತೆ.

ಐಶ್ವರ್ಯಕ್ಕೇನು ಕಡಿಮೆ, ಅವರಿಗೆ? ಭಂಡಾರದ ಮುಖ್ಯಸ್ಥರು. ಹಾಗೆಂದು ಅವರ ಕೈಯೆಂದೂ ಕಲುಷಿತವಾಗಲಿಲ್ಲ. ಅವರನ್ನು ಆ ಮುಂದೆ ತಾನು ಎಷ್ಟು ವರ್ಷ ಕಂಡೆ. ಅವರ ನಡವಳಿಕೆಯೆಂದರೆ ಅಚ್ಚ ಸ್ಫಟಿಕಸದೃಶವಾದದ್ದು, ಪಾರದರ್ಶಕ. ನಿಸ್ಪೃಹವಾದ ಅವರ ಸೇವೆಗೆ ರಾಜ ಎಂದೂ ಕಡಿಮೆ ಮಾಡಿದವನಲ್ಲ. ಹಾಗೆಯೇ ಸಿದ್ಧರಸರು ಕೂಡ; ಧಾರಾಳಿ. ಮಕ್ಕಳನ್ನು ಬೆಳೆಸಿದ್ದು, ಐಶ್ವರ್ಯದ ಬಲದಿಂದಲ್ಲ, ಈ ಧಾರಾಳತನದಿಂದ. ಕಂಡವರ ಜೊತೆಯಲ್ಲೆಲ್ಲ ಅವರದ್ದು ವಿಶ್ವಾಸದ, ಪ್ರೀತಿಯ ಮಾತು. ಅವರ ಪ್ರೀತಿಯ ಜೇನುತುಪ್ಪದಲ್ಲಿ ಬೆಳೆಸಿದ್ದರು ಮಕ್ಕಳನ್ನು, ಗಂಗೆ–ನೀಲರನ್ನು. ಅದಕ್ಕೇ ತಾನು ಮೊದಲ ಬಾರಿಗೆ ಅವರನ್ನು ಕಂಡಾಗ ಅವರು ಅಷ್ಟು ಸಿಹಿಯಾಗಿದ್ದದ್ದು!

ಮಂಗಳವಾಡದಲ್ಲಿ ತಾನಿದ್ದದ್ದು ಅಕ್ಕ ನಾಗಕ್ಕ–ಚನ್ನಬಸವರೊಂದಿಗೆ ಬೇರೊಂದು ಬೀದಿಯಲ್ಲಿ. ತಮಗೆ ಎಲ್ಲ ಅನುಕೂಲಗಳನ್ನೂ ಸಿದ್ಧರಸರು ಖುದ್ದಾಗಿ ಒದಗಿಸಿದ್ದರು. ಬೊಕ್ಕಸದ ಮನೆಯಲ್ಲಿಯೇ ನನಗೂ ಕೆಲಸ, ಅವರ ಅಡಿಯಲ್ಲಿಯೇ. ಸೇರಿದ್ದು ಕರಣನಾಗಿ; ಅವರಾಗಲೇ ಭಂಡಾರಿ. ನೇರವಾಗಿ ಅವರ ಕೈಕೆಳಗೆ ಕೆಲಸಮಾಡುವಷ್ಟು ಉನ್ನತ ಹುದ್ದೆಯಲ್ಲ ಆಗ. ಅಧಿಕಾರ ಶ್ರೇಣಿಯಲ್ಲಿ ತನ್ನದು ಕೆಳಗಿನ ಹಂತ, ಅವರಿದ್ದದ್ದು ಮೇಲೆ. ಆದರೆ ಅವರಿಗೆ ನನ್ನ ಬಗ್ಗೆ ಮಮತೆಯೋ ಬಹಳ. ಹಾಗಾಗಿ ಚಿಕ್ಕ ಹುದ್ದೆಯವನೆಂದೇನೂ ಭಾವಿಸದೆ ತಮ್ಮ ಮನೆಗೇ ಬಂದು ಆಗಾಗ ಯೋಗಕ್ಷೇಮ ವಿಚಾರಿಸುವರು, ನಾಗಕ್ಕನನ್ನು ಮಾತಾಡಿಸುವರು, ಚೆನ್ನಬಸವನ ಕೆನ್ನೆ ಹಿಂಡಿ ಕೈತುಂಬ ಮಿಠಾಯಿಯಿಟ್ಟು ಹೋಗುವರು. ತಮ್ಮಿಬ್ಬರ ಒಂದೇ ಕುಲವಂತೆ, ನಮ್ಮ ಪೂರ್ವಜರ ವಿಷಯವೆಲ್ಲ ಕೇಳಿ ತಿಳಿದ ಮೇಲೆ ನಾನು ಅವರಿಗೆ ದೂರದ ಸಂಬಂಧಿಕನೆಂಬುದನ್ನು ಗುರುತಿಸಿದ್ದರು. ಅಲ್ಲದೆ ಗಂಡುಮಕ್ಕಳಿದ್ದಿದ್ದರೆ ನನ್ನ ವಯಸ್ಸಿನವರಲ್ಲದಿದ್ದರೂ ಕೆಲವರ್ಷ ಚಿಕ್ಕವರಾದ ಮಕ್ಕಳಿರುತ್ತಿದ್ದರು. ಗಂಗೆ–ನೀಲರೇ ಗಂಡಾಗಬಹುದಿತ್ತಲ್ಲ. ಹಾಗಾಗಲಿಲ್ಲ. ಆಗಿದ್ದಿದ್ದರೆ, ನನ್ನ ಗತಿ! ಸಂಬಂಧ ಸರಿಹೋದರೆ ನನ್ನನ್ನು ಅಳಿಯನನ್ನಾಗಿಸಿಕೊಳ್ಳುವ ಯೋಚನೆಯೂ ಕನ್ಯಾಪಿತೃಗಳಿಗೆ ಬಾರದಿರುತ್ತದೆಯೇ! ಪಾಪ, ಅದಕ್ಕಾಗಿಯೇ ನನ್ನನ್ನು ವಿಶ್ವಾಸದಿಂದ ಕಂಡರೆಂದು ಹೇಳಲಾದೀತೆ? ನಾನವರನ್ನು ಭೇಟಿಮಾಡಿದ ಕ್ಷಣದಿಂದಲೇ ನನ್ನ ಮೇಲೆ ಅವರು ಅಕ್ಕರೆ ತೋರಿಸಿದ್ದರು. ತುಂಬ ಮೃದುವಾದ ವ್ಯಕ್ತಿ. ಆದರೆ ವ್ಯವಹಾರದಲ್ಲಿ ಜಿಗುಟು. ಸರಿಯಾದ ಕೆಲಸಗಾರರ ಜಾಣ್ಮೆ ಅವರ ಕಣ್ಣಿಗೆ ಬೀಳದೆ ಹೋಗದು. ನಾನು ಲೆಕ್ಕಾಚಾರದಲ್ಲಿ ತೋರಿಸಿದ ಚುರುಕುತನ ಸಿದ್ಧರಸರ ಮೇಲೆ ಪರಿಣಾಮ ಬೀರಿದ್ದರಿಂದಲೇ ಒಮ್ಮೆ ನನ್ನನ್ನವರು

ಪೆರ್ಮಾಡಿ ಪ್ರಭುಗಳ ಭೇಟಿಮಾಡಿಸಿ, ಜೀವಿತ ಹೆಚ್ಚಿಸಿದ್ದರು. ಅವರ ಮುಂದೆ ನನ್ನ ಬುದ್ಧಿವಂತಿಕೆಯನ್ನು ಹೊಗಳಿದ್ದರು, ಪ್ರಭುಗಳ ಭಂಡಾರಕ್ಕೆ ಸರಿಯಾದ ಕಾವಲುಗಾರ ಸಿಕ್ಕಿದ್ದಾನೆ, ಅವನ ಮೇಲೆ ಕಣ್ಣಿಡಿ ಎಂದು ಸೂಚಿಸಿದ್ದರು.

ನಾನೂ ಆಗಾಗ ಸಿದ್ಧರಸರ ಮನೆಗೆ ಹೋಗಿಬರುತ್ತಿದ್ದೆ; ಹೋಗಿಬರಬೇಕಾಗುತ್ತಿತ್ತು ಕೂಡ. ಹಿರಿಯ ಅಧಿಕಾರಿಗಳ ಮನೆಗೆ ಕಿರಿಯ ಹುದ್ದೆಯವನು ಹೋಗಬೇಕಾದ ಸಮಯ ಒಂದೇ ಎರಡೇ. ಭಂಡಾರದ ವಿಷಯ ಅರಿಕೆ ಮಾಡಿಕೊಳ್ಳಲು, ಇರುವ ಸಮಸ್ಯೆಗಳ ಬಗ್ಗೆ ವಿವರಿಸಲು, ಮೇಲಧಿಕಾರಿಗಳ ಆಜ್ಞೆಯನ್ನು ಪಾಲಿಸಲು– ಹೀಗೇ; ಹೋಗುತ್ತಿದ್ದೆ. ವಿಶಾಲವಾದ ಅಂಗಳವನ್ನು ದಾಟಿ ತಲೆಬಾಗಿಲಿಗೆ ಹೋಗಬೇಕಾದಂಥ ಮನೆ. ಹೊರದ್ವಾರದಲ್ಲಿಯೇ ಪಡಿಹಾರಿ. ಮೊದಲು ಕೆಲವು ಬಾರಿ ನನ್ನ ಪರಿಚಯ ಕೇಳಿಕೊಂಡು, ಭಂಡಾರಿಗಳ ಸಮಯವರಿತ ಮೇಲೆ ಒಳಕ್ಕೆ ಬಿಡುತ್ತಿದ್ದರು. ಬರುಬರುತ್ತ, ನಾನು ಭಂಡಾರದಲ್ಲಿ ನೌಕರಿ ಮಾಡುವೆನೆಂದು ಗೊತ್ತಾದ ಮೇಲೆ, ಪರಿಚಯವನ್ನು ಹೇಳಿಕೊಳ್ಳಬೇಕಾದುದಿರಲಿಲ್ಲ. ಬರಬರುತ್ತ ಭಂಡಾರಿಯವರಿಗೆ ನಾನು ಆಪ್ತನೆಂದು ತಿಳಿದ ಮೇಲೆ ನೌಕರರು ನೇರವಾಗಿ ಒಳಗೆ ಕರೆದೊಯ್ಯುತ್ತಿದ್ದರು, ಕಾಯುವ ಕೋಣೆಯಲ್ಲಿ ಕೂರಿಸುತ್ತಿದ್ದರು. ಅಲ್ಲಿಗೇ ಪಾನೀಯ ಬರುತ್ತಿತ್ತು. ಕೆಲವು ವೇಳೆ, ಪ್ರಸಾದದ ಸಮಯವಾಗಿದ್ದರೆ, ಅಲ್ಲಿಯೇ ಊಟವೂ. ನನಗೆ ಎಂದೇನೂ ಅಲ್ಲ. ಯಾವ ಯಾವ ಸಮಯಕ್ಕೆ ಏನು ಮನೆಯವರಿಗೆ ನಡೆಯುವುದೋ ಅಂಥ ಹೊತ್ತಲ್ಲಿ ಅಲ್ಲಿ ಹೋದ ಸಂದರ್ಶಕರಿಗೂ ಅದೇ. ಅದು ಭಂಡಾರಿಯವರ ಆದೇಶ. ಕೆಲವು ತಿಂಗಳ ನಂತರವಂತೂ ನಾನು ಅವರೊಡನೆ ಸಪಂಕ್ತಿಭೋಜನಕ್ಕೆ ಅರ್ಹನಾದೆ. ಅಂಥ ಸಂದರ್ಭದಲ್ಲಿ ಅವರ ಹೆಣ್ಣುಮಕ್ಕಳೂ ಆಗಾಗ ಜೊತೆಯಲ್ಲಿ ಊಟಕ್ಕೆ ಕೂರಲು ತಂದೆ ಆದೇಶಿಸುತ್ತಿದ್ದರು.

ಮೊದಮೊದಲು ಅಂಥ ಸನ್ನಿವೇಶದಲ್ಲಿ ಅಕ್ಕ–ತಂಗಿ ಪರಸ್ಪರರತ್ತ ನೋಡಿ ಮುಗುಳ್ನಗುತ್ತಿದ್ದರು. ಅಕಸ್ಮಾತ್ತಾಗಿ ನನ್ನ ದೃಷ್ಟಿ ಅತ್ತ ಸರಿದರೆ ಮುದುಡಿಕೊಳ್ಳುವರು, ಓರೆನೋಟ ಬೀರುವರು. ಬರುಬರುತ್ತಾ ಮುಗುಳುನಗು ಸಶಬ್ದವಾಗುತ್ತಿತ್ತು. ನಾನೂ ಮುಗುಳ್ನಗೆ ಹರಿಸಲು ಕಲಿತಿದ್ದೆ. ಇನ್ನೂ ಕೊಂಚ ಕಾಲವಾದ ಮೇಲೆ ನನ್ನ ಕಂಡರೆ ಅವರೇ ಮಂದಹಾಸ ಬೀರುತ್ತಿದ್ದರು. “ಮನೆಯಲ್ಲಿ ಎಲ್ಲ ಆರೋಗ್ಯವಾ?” ಎಂದು ವಿಚಾರಿಸುತ್ತಿದ್ದರು. ಹಬ್ಬ–ಹುಣ್ಣಿಮೆಗಳಂದು ನಮ್ಮ ಮನೆಗೆ ವಿಶೇಷ ಪಡಿ ಬರುತ್ತಿತ್ತು. ಕೆಲವೇಳೆ ಔತಣಕ್ಕೆಂದು ಭಂಡಾರಿಯವರ ಮನೆಯಿಂದ ಆಹ್ವಾನ ಬರುತ್ತಿತ್ತು. ಯಾವಾಗಲಾದರೂ ಒಮ್ಮೆ ನಾಗಕ್ಕ–ಚೆನ್ನಬಸವರೂ ಅಂಥ ಆಹ್ವಾನದ ಮೇರೆಗೆ ಭಂಡಾರಿಗಳ ಮನೆಗೆ ಬರುತ್ತಿದ್ದರು. ಅವರ ಮನೆಯಲ್ಲಿ ಊಟ–ತಿಂಡಿ ಎಂಬುದು ಎಷ್ಟು ಸಾಮಾನ್ಯ ವಿಷಯವಾಗಿಬಿಟ್ಟಿತೆಂದರೆ ನಮ್ಮ ಮನೆಯಲ್ಲಿ ಊಟಕ್ಕೆ ಕೂತಾಗ ನೀಡಿದ್ದನ್ನು ಸಾಕು ಎಂದರೆ ನಾಗಕ್ಕ “ಭಂಡಾರಿಯವರ

ಮನೆಯಲ್ಲಿ ಏನು ತಿಂದೆ?" ಎಂದು ಕೇಳುತ್ತಿದ್ದಳು; ಇಲ್ಲವೆಂದರೂ ಅವಳಿಗೆ ನಂಬಿಕೆಯೆ ಬಾರದು.

"ತಿನ್ನಲೇಬೇಕೂಂತಿಲ್ಲಪ್ಪ, ನೋಡಿದರೆ ಸಾಕು ಹೊಟ್ಟೆ ತುಂಬಿಬಿಡುತ್ತೆ" ಎಂದು ಚೇಷ್ಟೆ ಮಾಡುವಳು. ಅವಳು ಯಾವುದನ್ನು ಕುರಿತು ಈ ಮಾತು ಆಡುತ್ತಿದ್ದಳೆಂದು ನನಗೆ ಹೊಳೆಯದೇ ಇರಲು ಸಾಧ್ಯವೇ?

"ಏನೇನೋ ಹೇಳಬೇಡ, ಅಕ್ಕ. ಅದು ಭಂಡಾರಿಗಳ ಮನೆ ಅವರು ನಮ್ಮ ಮೇಲಧಿಕಾರಿಗಳು. ರಾಜಕಾರ್ಯಕ್ಕಾಗಿ ಅಲ್ಲಿಗೆ ಹೋಗುವುದು" ಎನ್ನುತ್ತಿದ್ದೆ.

"ರಾಜಕಾರ್ಯದ ಜೊತೆ ರಾಣಿಕಾರ್ಯವೂ ಆಗಬಾರದೆಂದು ಎಲ್ಲಾದರೂ ಹೇಳಿದೆಯ?" ಈ ನಾಗಕ್ಕ ಯಾವಾಗಲೂ ಹೀಗೆಯೇ. ನನ್ನನ್ನು ಛೇಡಿಸುತ್ತಾಳೆ, ನಿಜವಾಗಿಯೂ ಕಾರ್ಯಭಾರದ ಮೇಲೆ ತಾನೇ ನಾನು ಭಂಡಾರಿಗಳ ಮನೆಗೆ ಹೋಗುವುದು! ಚಕ್ಕಂದವಾಡಲು, ಕೆಲಸವಿಲ್ಲದಾಗ ಹೋಗಲು ನನಗೇನು ಅವರು ಗೆಳೆಯರೇ? ನನ್ನ ವಯಸ್ಸೇನು, ಅವರದೇನು! ಆದರೆ ಅಕ್ಕ ಹೇಳಿದ್ದು ಪೂರ್ತಿ ಏನೂ ಸುಳ್ಳಾಗಿರಲಿಲ್ಲ. ಬೇಕೆಂದು ಭಂಡಾರಿಗಳ ಮನೆಗೆ ಹೋಗುವುದು ಸಾಧ್ಯವಿಲ್ಲವಾದರೂ ಹೋದಾಗ, ಕಣ್ಣು ಏನನ್ನೋ ಅರಸುವುದೇನೂ ಸುಳ್ಳಾಗಿರಲಿಲ್ಲವಲ್ಲ! ಗಂಗೆ ಕಂಡರೆ ನೀಲ ಎಲ್ಲಿ ಅನ್ನಿಸುವುದು; ನೀಲ ಕಣ್ಣಿಗೆ ಬಿದ್ದರೆ ಗಂಗೆ ಮನೆಯಲ್ಲಿಲ್ಲವೇನೋ ಎಂಬ ಅನುಮಾನವಾಗುವುದು. ಇಬ್ಬರೂ ಕಾಣದಿದ್ದರೆ ಇವತ್ತು ಬರಲೇಬಾರದಿತ್ತು ಎನ್ನಿಸುವುದು. ಆದರೆ ಕೆಲಸದ ಮೇಲೆ ಬರಬೇಕಾದಾಗ ಅಂಥ ಆಯ್ಕೆಯ ಅವಕಾಶ ನನಗೆಲ್ಲಿ? ಮನಸ್ಸಿನ ಉತ್ಸಾಹ ಕುಂದುತ್ತಿತ್ತು.

ಭಂಡಾರಕ್ಕೆ ಸಂಬಂಧಿಸಿದ ಲೆಕ್ಕಾಚಾರ ಒಪ್ಪಿಸಿಯಾದ ಮೇಲೆ ಹೊರಡುವಾಗ ಉಪಚಾರದ ಮಾತುಗಳ ಜೊತೆ, ಒಂದಷ್ಟು ಕುಡಿಯಲು ಪಾನೀಯವಾದರೂ ನೀಡಬೇಕು. ಅದೂ ಎಷ್ಟೋ ವೇಳೆ ಸೇವಕ ತಂದ ಪಾತ್ರೆಯನ್ನು ಭಂಡಾರಿಗಳು ತಾವೇ ಎತ್ತಿ ನನಗೆ ನೀಡಿದ್ದುಂಟು. ಕೆಲವು ವೇಳೆ ಹೋಗುವಾಗ ಮಕ್ಕಳನ್ನು ಕರೆದು "ಬಸವರಾಜರು ಹೊರಡುವರಂತೆ ಕಣಮ್ಮ" ಎನ್ನುವರು. ಕುಡಿದ ಪಾನಕ ಹೊಟ್ಟೆಯಲ್ಲಿಯೇ ಸಿಹಿಯಾದಂತೆ ಅವರನ್ನು ಕಂಡಾಗ. ಹೋಗುವಾಗ ಹಗುರವಾದರೂ, ಹಾರಿ ಹೋಗುವಂತಾದರೂ, ಮನಸ್ಸು ಭಾರವಾಗುವುದು. ಸಿದ್ಧರಸರು ಬೇಕೆಂದೇ ನಾನು ಹೊರಟಾಗ ಮಕ್ಕಳನ್ನು ಕರೆಯುತ್ತಿದ್ದರೇನೋ ಎಂದು ಆಮೇಲೆ ಅನ್ನಿಸುತ್ತಿತ್ತು. ಆಗ ಅವೆಲ್ಲ ಯೋಚನೆಬಾರದು. ಆ ಜಗತ್ತೇ ಬೇರೆ, ಅಲ್ಲಿ ಸದಾ ಬೆಳುದಿಂಗಳು, ಯೌವನವೆಂದರೆ ಒಂದು ಸಾರ್ವರ್ತುಕೋದ್ಯಾನ!

ಒಮ್ಮೆ ನಾನು ಮನೆಯಲ್ಲಿಯೇ ಇದ್ದಾಗ, ಸಂಜೆ ತಮ್ಮನ್ನು ಮನೆಯಲ್ಲಿ ಕಾಣಬೇಕೆಂದು ಹೇಳಿಕಳಿಸಿದ್ದರು ಭಂಡಾರಿಗಳು. ಅಂದು ಭಂಡಾರಕ್ಕೆ ಬಿಡುವಿನ ದಿನ. ಏನು ತುರ್ತುಕಾರ್ಯವೋ ಎಂದುಕೊಂಡೆ. ಮಾರನೇ ದಿನ

ಭಂಡಾರದ ಮನೆಯಲ್ಲಿ ಭೇಟಿಯಾಗುವುದು ನಿಶ್ಚಿತವಿರುವಾಗ ಈ ದಿನವೇ ಹೇಳಿಕಳಿಸಿದ ವಿಷಯವೇನೋ ಎಂಬ ಕುತೂಹಲವಾಯಿತು. ಅದಕ್ಕಿಂತ ಹೆಚ್ಚಾಗಿ ಆತಂಕ. ಯಾವ ಲೆಕ್ಕ ಎಲ್ಲಿ ತಪ್ಪಿದೆಯೋ, ಏನು ಮಾತು ಕೇಳಬೇಕಾದೀತೋ ಎಂಬ ಅಳುಕು. ಹಿಂದಿನ ದಿನಗಳ ವ್ಯವಹಾರ ನೆನಪಿಸಿಕೊಂಡೆ. ಭಂಡಾರದದಿಂದ ವ್ಯಯಕ್ಕಾಗಿ ತೆಗೆದುಕೊಟ್ಟಿದ್ದು, ಬಂದ ಆಯವನ್ನು ಒಳಗೆ ಸೇರಿಸಿದ್ದು– ಬೇರೆ ಬೇರೆಯ ಮೂಲದಿಂದ ಬಂದ ಹಣ; ಬೇರೆ ಬೇರೆ ಬಾಬಿಗೆ ಇತ್ತ ಹಣ – ಎಲ್ಲಾದರೂ ತಪ್ಪಿದೆಯೆ? ಎಷ್ಟು ನೆನಪಿಸಿಕೊಂಡರೂ ಯಾವ ತಪ್ಪು ತನ್ನಿಂದ ಆಗಿರಬಹುದೆಂಬ ಕಲ್ಪನೆ ಬರಲಿಲ್ಲ. ಏನಾದರಾಗಲಿ, ನನ್ನಿಂದ ತಪ್ಪಾಗದಿದ್ದರೆ ಸಾಕು, ಕೂಡಲ ಸಂಗ ಎಂದುಕೊಂಡೆ.

ಆದರೂ ಆ ಮಧ್ಯಾಹ್ನವೆಲ್ಲ ಒಂದು ರೀತಿಯಲ್ಲಿ ನನ್ನ ಎದೆಯ ಹೊಡೆತ ವೇಗವಾಗಿಯೇ ನಡೆದಿತ್ತು. ಮಾಡಿದ ಕೆಲಸವನ್ನೆಲ್ಲ ಅನ್ಯಮನಸ್ಕನಾಗಿಯೇ ಮಾಡಿದ್ದೆ. ನನ್ನ ರೀತಿಯನ್ನು ಕಂಡು ನಾಗಕ್ಕ ಹಣೆಯ ಮೇಲೆ ಕೈಯಿಟ್ಟು ನೋಡಿದ್ದಳು, ಬೆಚ್ಚಗಿರಲಿಲ್ಲವಲ್ಲ, "ತಲೆ ನೋವಾ ಬಸವರಾಜ?" ಎಂದಳು.

"ಇಲ್ಲಕ್ಕ"

"ಮತ್ತೆ ಯಾಕೋ ಒಂದು ರೀತಿಯಾಗಿರುವೆಯಲ್ಲ?" ಬಿಡುವಿನ ದಿನವಾದರೂ ಮನೆಯಲ್ಲಿಯೇ ತಮ್ಮನ್ನು ಕಾಣಲು ಭಂಡಾರಿಗಳು ಹೇಳಿಕಳಿಸಿರುವ ವಿಷಯ ತಿಳಿಸಿದೆ, ನನ್ನ ಮನಸ್ಸಿನಲ್ಲಿದ್ದ ಆತಂಕ ಹೇಳಿದೆ. ಏನು ತಪ್ಪಾಗಿದೆಯೋ ಎಂದು ಹಳಹಳಿಸಿದೆ.

"ನೀನೇನು ತಪ್ಪು ಮಾಡುತ್ತೀಯೋ? ಇನ್ನೇನೋ ಕಾರಣಕ್ಕೆ ಇರಬೇಕು ಬರಹೇಳಿದ್ದು."

"ನನ್ನ ಬಳಿ ಮಾತನಾಡುವುದು ಇನ್ನೇನಿರತ್ತೆ ನಾಗಕ್ಕ?" ಆಡುವ ಮಾತಿನಲ್ಲೆಲ್ಲ ಆತಂಕವೇ.

"ಧೈರ್ಯವಾಗಿ ಹೋಗು. ಅಕಸ್ಮಾತ್ತಾಗಿ ಏನಾದರೂ ಲೆಕ್ಕ ತಪ್ಪಾಗಿದ್ದರೆ ಕ್ಷಮೆ ಕೇಳಿಕೋ. ಭಂಡಾರಿಗಳು ದೇವರಂತಹ ಮನಷ್ಯರು." ಅದರಲ್ಲಿ ಅನುಮಾನವಿಲ್ಲ. ಅದಕ್ಕೇ ಹೆಚ್ಚು ಹೆದರಿಕೆ. ಅವರೂ ತುರ್ತಾಗಿ ವಿಚಾರಿಸಬೇಕಾದಂತಹ ತಪ್ಪು ನನ್ನಿಂದ ಆಗಿದ್ದರೆ! ನಾಗಕ್ಕ ಮೈದಡವಿ ಸಮಾಧಾನಮಾಡಿದ್ದಳು.

ಸಂಜೆ ಸಾಯಂವಿಧಿಗಳನ್ನೆಲ್ಲ ಆತುರದಿಂದ ಪೂರೈಸಿದೆ. ಭಂಡಾರಿಗಳ ಮನೆಯ ಕಡೆಗೆ ಅನುಮಾನದಿಂದ, ಭಾರವಾದ ಮನಸ್ಸಿನಿಂದ ಹೋದೆ; ಮನಸ್ಸಿನಲ್ಲಿ ಅಳುಕು–ಆತಂಕವಿದ್ದುದರಿಂದ ಹೆಜ್ಜೆ ಬೇಗ ಹಾಕುತ್ತಿತ್ತು ಕಾಲು. ಹೋಗಿ ಸೇರಿದಾಗ ಪಡಿಹಾರಿ ಒಳಗೆ ಸುದ್ದಿ ಮುಟ್ಟಿಸಿದ. ಮನೆಯ ತಲೆಬಾಗಿಲಿಗೆ ಭಂಡಾರಿಗಳೇ ಬಂದರು. ನನ್ನ ಕಡೆ ನೋಡಿ ಮುಗುಳ್ನಗುತ್ತ ವಿಶ್ವಾಸದಿಂದ "ಬನ್ನಿ, ಬಸವರಾಜರೇ" ಎಂದು ಒಳಗೆ ಕರೆದೊಯ್ದರು.

ಒಳನಡೆಯುವಾಗ "ತೊಂದರೆ ಕೊಟ್ಟೆನೇನೋ" ಎಂದರು. "ಏನಿಲ್ಲ, ನನಗೆ ಬೇರೆ ತಾನೇ ಏನು ಕೆಲಸ" ಎಂದೆ. ಅವರ ರೀತಿ ನೋಡಿ ಭಯವೇನೋ ಕಡಿಮೆಯಾಗಿತ್ತು. ಅವರ ಮುಖದಲ್ಲಿ ಕೋಪವಾಗಲೀ ಅಸಹನೆಯಾಗಲೀ ಇರದ್ದು ಕಂಡು ಎಷ್ಟೋ ಸಮಾಧಾನ. ಆದರೆ ಅನುಮಾನ ಉಳಿದೇ ಇತ್ತು. ಅದಕ್ಕೇ ಮಾತಾಡುವಾಗ ನಾಲಗೆ ತೊದಲಿತು.

ಒಳಕೋಣೆಗೆ ಕರೆದೊಯ್ದು ಕುಳ್ಳಿರುವಂತೆ ಹೇಳಿದರು. ಅಲ್ಲಿ ಆಗಲೇ ಅವರ ಸಂಬಂಧಿಕರಾದ ಹಿರಿಯರು ಕುಳಿತಿದ್ದರು. ಅವರನ್ನು ಕಂಡಾಗಲಂತೂ ಇದು ಭಂಡಾರದ ಕಾರ್ಯಕ್ಕೆ ಸಂಬಂಧಿಸಿದ ವಿಷಯವಲ್ಲ ಎಂದು ಸ್ಪಷ್ಟವಾಯಿತು, ಆದರೂ ಪರಿಸ್ಥಿತಿಯಲ್ಲಿ ಒಂದು ಬಗೆಯ ಅನಿಶ್ಚತತೆ, ಯಾತಕ್ಕಾಗಿ ಬರಹೇಳಿರಬಹುದು? ಯಥಾಪ್ರಕಾರ ಉಪಚಾರಗಳಾದವು. ಹಿರಿಯರು ಒಳಗಡೆಗೆ ತಲೆ ತಿರುಗಿಸಿ "ಬನ್ರವ್ವಾ, ಗಂಗಾ–ನೀಲ" ಎಂದು ಕರೆದರು. ಅವರು ನಿಧಾನವಾಗಿ ಒಳಬಂದರು, ಆದರೆ ನನ್ನ ಕಡೆ ತಿರುಗಿಯೂ ನೋಡಲಿಲ್ಲ. ಅವರನ್ನೇಕೆ ಕರೆಸಿದರು ಎನ್ನಿಸಿತು.

"ಬಸವರಾಜರೇ, ಇವರನ್ನು ಕಂಡಿದ್ದೀರಿ ಹೌದಲ್ಲೋ?" ಎಂದರು ಆ ಹಿರಿಯರು. ಅವರ ಹೆಸರೇನೋ ತಿಳಿಯದು. ಆದರೆ ಈ ಹಿಂದೆ ಒಂದೆರಡು ಬಾರಿ ಭಂಡಾರಿಯವರ ಮನೆಯಲ್ಲಿ ಅವರನ್ನು ಕಂಡ ಅಸ್ಪಷ್ಟ ನೆನಪು. ಇವರೇಕೆ ಇಲ್ಲಿ, ಈಗ? ಯಾತಕ್ಕೋ ಎನಿಸಿತು. "ಏನ್ರೀ, ಬಸವರಾಜರೇ, ಈ ಹುಡುಗೀರನ್ನ ನೋಡಿದ್ದೀರಿ ತಾನೇ?" ಎಂದರು ಮತ್ತೊಮ್ಮೆ. ಅದು ವಿಚಾರಣೆಯಾಗಿರದೆ ತಮಾಷೆಯ ಮಾತಾಗಿತ್ತು ಎಂಬುದು ಅವರ ಮುಖದಲ್ಲಿನ ನಗುವೇ ಸೂಚಿಸುತ್ತಿತ್ತು. ಹ್ಞೂ ಎಂಬಂತೆ ತಲೆಯಾಡಿಸಿದೆ. ಅವರೇ ಸನ್ನಿವೇಶದ ಹಿರಿತನ ವಹಿಸಿದಂತಿತ್ತು. ಎಲ್ಲ ಪೂರ್ವ ನಿಯೋಜಿತವೆಂಬಂತೆ ಭಂಡಾರಿಗಳೂ ಸುಮ್ಮನಿದ್ದರು, ಎಲ್ಲವನ್ನೂ ಆ ಹಿರಿಯರಿಗೇ ವಹಿಸಿದ್ದಂತೆ ಕಾಣಿಸುತ್ತಿತ್ತು.

"ಒಂದು ಬಾರಿ ಇಬ್ಬರ ಮುಖವನ್ನೂ ಸರಿಯಾಗಿ ನೋಡಿಬಿಡಿರಿ" ಎಂದರು ಮತ್ತೆ ನಗುತ್ತ, ನಾನು ಗಲಿಬಿಲಿಗೊಂಡೆ. "ನೋಡಿರಿ ಅಂದರೆ" ಎಂದು ನನ್ನ ಬಳಿ ಬಂದು ಮುಖ ಮೇಲಕ್ಕೆತ್ತಿ ಗಂಗೆ–ನೀಲರು ಕುಳಿತ ಕಡೆ ತಿರುಗಿಸಿಯೇಬಿಟ್ಟರು. ನಾನು ನಾಚಿ ನೀರಾದೆ. ಆದರೂ ಕಣ್ಣು ಅವರಿಬ್ಬರತ್ತ ಹೋಯಿತು. ಅವರೂ ಗಲಿಬಿಲಿಗೊಂಡಂತೆ ಕಾಣಿಸಿತು. ಮತ್ತೆ ಮುಖ ಮೊದಲಿನ ಸ್ಥಿತಿಗೆ ತಿರುಗಿಸಿಕೊಳ್ಳುವಾಗ ಭಂಡಾರಿಗಳು ಕಾಣಿಸಿದರು. ಅವರ ಮುಖದಲ್ಲಿ ಅಗಲವಾದ ನಗೆ!

"ಇನ್ನು ನೀವು ಹೋಗ್ರವ್ವ" ಎಂದು ಅವರು ಆಣತಿಯಿತ್ತ ಕ್ಷಣವೇ ಆ ಹುಡುಗಿಯರಿಬ್ಬರೂ ಬಿಡುಗಡೆಗೊಂಡ ಹಕ್ಕಿಗಳಂತೆ ಹಾರಿಹೋದರು. ಹಿರಿಯರು ಆಗ ನನ್ನೆಡೆ ತಿರುಗಿ, "ಬಸವರಾಜರೇ ಗಾಬರಿಯಾಗಬೇಡಿ" ಎಂದು ಮುಗುಳ್ನಕ್ಕರು. ಸಮಾಧಾನ ಪಡಿಸುವ ಧ್ವನಿಯಲ್ಲಿ ಹೇಳಿದರು: "ನಾನು

ಸಿದ್ಧರಸರಿಗೆ ದೂರದ ಸಂಬಂಧಿ. ಮಂಗಳವಾಡದವನಲ್ಲ ತುಂಬುಳ ಅಗ್ರಹಾರದವನು. ಹೆಸರು ಕೇಶವ ಘಳಿಸಾಸ ಅಂತ. ಹೀಗೇ ಇಲ್ಲಿಗೆ ಬಂದಿದ್ದೆ. ಸಿದ್ಧರಸರು ಹೇಳಿದರು, ಅವರಿಗೆ ಈ ವಿಚಾರ ನಿಮ್ಮ ಬಳಿ ಪ್ರಸ್ತಾಪಿಸಲು ನೇರವಾಗಿ ಬಾಯಿಬಾರದಂತೆ. ನಾನು ನಿಮ್ಮ ಮನಸ್ಸು ತಿಳಿಯುತ್ತೇನೆ ಎಂದೆ. ಬೇಸರ ಪಟ್ಟುಕೊಳ್ಳಬೇಡಿ" ಎಂದರು. ಬೇಸರವಿಲ್ಲವೆಂಬಂತೆ ತಲೆಯಾಡಿಸಿದೆ, ಮುಗುಳ್ನಕ್ಕೆ.

ಕೇಶವ ಘಳಿಸಾಸರೇ ವಿವರಿಸಿದರು, ನನ್ನನ್ನು ಅಲ್ಲಿಗೆ ಕರೆಸಿದ ಕಾರಣವನ್ನು. ಹೆಣ್ಣುಮಕ್ಕಳಿಗೆ ಮದುವೆಯ ವಯಸ್ಸು ಮೀರಿದೆ ಆಗಲೇ. ಈವರೆಗೆ ಸಿದ್ಧರಸರು ಆ ವಿಚಾರವನ್ನು ಯೋಚಿಸಿರಲಿಲ್ಲ, ಈಗ ಯೋಚಿಸಲೇಬೇಕಾಗಿದೆ. ಗಂಗೆಗೆ ಆಗಲೇ ಹದಿನಾರು, ನೀಲಳಿಗೆ ಹದಿನೈದು. ತಮಗೆ ಆಗಲೇ ವಯಸ್ಸಾದ್ದರಿಂದ ಈ ಬಗ್ಗೆ ತಮ್ಮ ಕರ್ತವ್ಯವನ್ನು ಬೇಗ ಮಾಡಿ ಪೂರೈಸಲು ತವಕ ಹೆಚ್ಚಾಗಿದೆ. ಅದೂ ನನ್ನ ಪರಿಚಯ ಚೆನ್ನಾಗಿ ಆದಾಗ ಯಾಕಾಗಬಾರದು ಎನ್ನಿಸಿತಂತೆ. ಸಹಾಯಕ್ಕೆ ಎಂಬಂತೆ ಕೇಶವರು ಬಂದದ್ದರಿಂದ, ವಿಚಾರಿಸುವ ಜವಾಬ್ದಾರಿಯನ್ನು ತಾವೇ ಹೊತ್ತದ್ದರಿಂದ ನನಗೆ ಹೇಳಿಕಳಿಸಿದರಂತೆ.

"ನೋಡಿ, ಬಸವರಾಜರೇ, ನೀವು ಮನಸ್ಸಲ್ಲಿರುವುದನ್ನು ಮುಚ್ಚಿಟ್ಟುಕೊಳ್ಳಬೇಡಿ. ಇಬ್ಬರಲ್ಲಿ ನಿಮ್ಮ ಮನಸ್ಸಿಗೆ ಬಂದವರನ್ನು ವರಿಸಿರಿ. ಇನ್ನೊಬ್ಬಳಿಗೆ ಬೇರೆ ಗಂಡು ನೋಡಿ ಒಂದೇ ಲಗ್ನದಲ್ಲಿ ಮದುವೆ ಮುಗಿಸಿಬಿಡೋಣ. ನಾನು ತಾನೇ ಹೆಚ್ಚು ಕಾಲ ಇರುವ ಭರವಸೆಯಿಲ್ಲ. ತಾಯಿಲ್ಲದ ಮಕ್ಕಳು; ಅವಳಿದ್ದಿದ್ದರೆ ಇವರಿಗೆ ಎಂದೋ ಮದುವೆಯಾಗಿರುತ್ತಿತ್ತು." ಈಗ, ಮೊದಲ ಬಾರಿಗೆ, ನಿಧಾನವಾಗಿ ನನ್ನೆಡೆ ತಿರುಗಿ ಒಂದು ರೀತಿಯ ಯಾಚನೆಯ ದನಿಯಲ್ಲಿ ಸಿದ್ಧರಸರು ಹೇಳಿದರು.

ನಾನು ನಿಜವಾಗಿಯೂ ಈ ಪ್ರಶ್ನೆಯನ್ನೆದುರಿಸಲು ಸಿದ್ಧನಾಗಿರಲಿಲ್ಲ. ಉತ್ತರ ಹೇಳುವುದು ಅಷ್ಟು ಸುಲಭದ್ದೇನೂ ಅಲ್ಲವಲ್ಲ, ಅದರಲ್ಲಿ ಕೇಳಿರುವ ಪ್ರಶ್ನೆಯಂತೂ ಇಬ್ಬರಲ್ಲಿ ಒಬ್ಬಳನ್ನು ಮದುವೆಯಾಗಬೇಕಾದ್ದರಿಂದ ಮತ್ತಷ್ಟು ಜಟಿಲವಾಗಿತ್ತು. ಮೊದಲೇ ಮನಸ್ಸು ಮಂಡಗೆ ತಿನ್ನುತ್ತಿತ್ತು. ಈಗ ಮಂಡಗೆಯೊಡನೆ, ಫೇಣಿಯೂ ಸೇರಿತು. ಅದು ಬೇಕೋ ಇದು ಬೇಕೋ! ಎರಡೂ ರುಚಿಯೇ ಸರಿ. ಗಂಗೆ–ನೀಲ ಯಾರಾಗಬಹುದು? ಗಂಗೆಯನ್ನು ನೆನೆದರೆ, ನೀಲ ತಾನು ಬೇಡವೇ? ಎಂದು ಕಣ್ಣೀರು ಹಾಕಿ ಕೇಳಿದಂತೆ ಭಾಸವಾಗುವುದು. ನೀಲ ಎಂದರೆ ನಾನು ನಿಮಗೆ ದೂರವಾದೆನೇ ಎಂದು ಮರುಗಿದಂತೆ ಅನ್ನಿಸುವುದು. ಬೇಡ–ಬೇಕು ಎಂಬುದು ಮಾತ್ರವಲ್ಲ ಯಾರು ಬೇಕು, ಯಾರು ಬೇಡ ಎಂಬ ಪ್ರಶ್ನೆ ಬೇರೆ. ನಾನು ಉತ್ತರಿಸಲಾರದೇ ಮೌನನಾದೆ.

"ಯಾಕ್ರೀ, ಬಸವರಾಜರೇ. ಸಮಸ್ಯೆ ಬಂದಿರುವುದು ಮದುವೆಯಾಗಬೇಕೋ ಬೇಡವೋ ಎಂಬ ವಿಷಯದಲ್ಲಿಯೋ, ಅಥವಾ ಯಾರನ್ನಾಗಬೇಕೆಂಬ

ವಿಷಯದಲ್ಲಿಯೋ?" ಎಂದು ನನ್ನ ಮನಸ್ಸನ್ನರಿತವರಂತೆ ಕೇಶವ ಫಳಿಸಾಸರು ಹಾಸ್ಯದ ದನಿಯಲ್ಲಿ ಕೇಳಿದರು.

"ಹಾಗೇನಿಲ್ಲ" ನಾನೆಂದೆ.

"ಮದುವೆಯಾಗುವ ಯೋಚನೆಯಿಲ್ಲವೇನೂ ನಿಮಗೆ?" ಮತ್ತೆ ಕೀಟಲೆಯ ಪ್ರಶ್ನೆ.

"ನಾನಂದದ್ದು ಅದಲ್ಲ" ಎಂದೆ ಮೆಲ್ಲಗೆ. ಆದರೆ ಮಾತಿನಲ್ಲಿ ಆತುರವಿತ್ತೆಂದು ನನಗೇ ಅನನ್ನಿಸಿತ್ತು. ನಾನೆಲ್ಲಿ ಮದುವೆಗೇ ಸಿದ್ಧನಿಲ್ಲವೆಂದು ಭಾವಿಸಿಬಿಡುವರೋ ಎಂಬ ಭಾವನೆಯಿಂದ ಹೀಗಾಗಿರಬಹುದೇ? ಮತ್ತೆ ಆತುರದಿಂದಲೇ ಹೇಳಿದೆ, ತಪ್ಪೆಲ್ಲಿ ತಿಳಿದುಬಿಡುತ್ತಾರೋ ಎಂದು, "ಅಕ್ಕನನ್ನು ಕೇಳಬೇಕು".

"ಯಾರು ಬೇಡವೆಂದವರು. ಮದುವೆಯಾಗುವವರು ನೀವು. ಆಮೇಲೆ ಆಶೀರ್ವಾದ ಮಾಡುವವರು ಅವರು" ಎಂದರು ಫಳಿಸಾಸರು.

"ಯಾರನ್ನಾಗಬೇಕು ಎಂದು ನಿರ್ಧರಿಸುವುದು ತೊಂದರೆಯಾದರೆ ಒಂದು ಕೆಲಸ ಮಾಡಿ, ಇಬ್ಬರನ್ನೂ ಆಗಿಬಿಡಿ. ಆಗ ನಿಮಗೂ ಕಷ್ಟವಿಲ್ಲ, ಸಿದ್ಧರಸರಿಗಂತೂ ಇನ್ನೂ ಸಲೀಸು. ಏನು ಸಿದ್ಧರಸ?" ಎಂದರು ತುಂಟನಗೆ ನಗುತ್ತ. ಸಿದ್ಧರಸರೂ ನಕ್ಕರು.

ಈಗ ಫಳಿಸಾಸರು ನಿಜವಾಗಿಯೂ ಗಂಭೀರರಾದರು. "ಹೌದಲ್ಲ, ಸಿದ್ಧರಸ ಇಬ್ಬರನ್ನೂ ತೋರಿಸಿ, ಒಬ್ಬರನ್ನು ಮದುವೆಯಾಗಿ ಅನ್ನೋದು. ಮಾತ್ರವಲ್ಲ. ಆ ಹುಡುಗಿಯರ ಮನಸ್ಸು ಏನು ಅಂತ ಕೇಳಲೇ ಇಲ್ಲವಲ್ಲಯ್ಯ. ಅವರಲ್ಲಿ ಯಾರಿಗೆ ಆಸೆಯಿದೆ ಎಂದು ಕೇಳುವುದಕ್ಕೆ ಹೋಗದೆ, ತಪ್ಪು ಮಾಡಿಬಿಟ್ಟೆನೇನೋ, ನನ್ನ ತಮಾಷೆಯಲ್ಲಿ" ಎಂದರು.

ಆದದ್ದೂ ಹಾಗೆಯೇ. ಮುಂದೆ ಗಂಗೆ–ನೀಲರನ್ನೇನೆಂದು ವಿಚಾರಿಸದರೋ ತಿಳಿಯದು. ಇಬ್ಬರೂ ನನ್ನ ಕೈಹಿಡಿಯಲು ಒಪ್ಪಿದರೇನೋ. ಮತ್ತೊಂದು ದಿನ ಹರಿವಾಣದ ತುಂಬ ಫಲತಾಂಬೂಲ ಕಳಿಸಿ ಸಿದ್ಧರಸರೇ ನಮ್ಮ ಮನೆಗೆ ದಯಮಾಡಿಸಿ, ನಾಗಕ್ಕನ ಮುಂದೆ ಕೈಜೋಡಿಸಿ ನನ್ನ ಮಕ್ಕಳನ್ನು ನಿಮ್ಮ ಮನೆ ತುಂಬಿಸಿಕೊಂಡು ನನ್ನ ವಂಶ ಉದ್ಧಾರ ಮಾಡಬೇಕೆಂದು ಕೇಳಿಕೊಂಡರು. ನನ್ನ ಮನಸ್ಸು ಇಬ್ಬರೂ ಯಾಕಾಗಬಾರದೆಂದು ಭಾವಿಸಿತೇನೋ! ಅಧಿಕಸ್ಯ ಅಧಿಕಂ ಫಲಂ. ನನ್ನ ಹಿತಕ್ಕೆ ನಾಗಕ್ಕ ಎಂದಾದರೂ ಅಡ್ಡಿಯಾದಾಳೇ?

೭

ಕೇತಗ–ಚೆಂದಲೆಯರ ಮದುವೆಯ ಮಾತು ನಿಧಾನವಾಗಿ ಕಲ್ಯಾಣದ ಶರಣ ಸಂಕುಲದಲ್ಲಿ ಹರಡುತ್ತ ಬಂತು. ಹಡಪದಪ್ಪಣ್ಣ ಪಡಿಹಾರಿ ಉತ್ತಣ್ಣಗಳ ಮೂಲಕ ಆ ಮಾತುಗಳ ರೀತಿ ಬಸವಣ್ಣನವರ ಕಿವಿಗೂ ಬೀಳುತ್ತಿತ್ತು. ಕೆಲವರು ಈ ಸುದ್ದಿಯನ್ನು ಉತ್ಸಾಹದಿಂದ ಸ್ವೀಕರಿಸಿದಂತೆ ಕಾಣಲಿಲ್ಲ. ಆದರೆ ಕೆಲವರು ನಿಜವಾಗಿಯೂ ಅದನ್ನು ದೊಡ್ಡ ಘಟನೆಯಂತೆ ಭಾವಿಸಿದ್ದರೆಂದೂ, ಮದುವೆಯ ಬಗ್ಗೆ ಉತ್ಸುಕರಾಗಿದ್ದರೆಂದೂ ಗೊತ್ತಾಗುತ್ತಿತ್ತು. ಯಾವುದೇ ಬದಲಾವಣೆ, ವಿಶೇಷವಾಗಿ ಅಂತರ್‌ವರ್ಣ ವಿವಾಹದಂತಹ ವಿಷಯವು ಜನರ ಮೇಲೆ ಒಂದೇ ಬಗೆಯ ಪರಿಣಾಮವನ್ನು ಮಾಡುವುದೆಂದು ನಿರೀಕ್ಷಿಸಲು ಸಾಧ್ಯವಿಲ್ಲ. ಶರಣ ಸಮುದಾಯವಾದರೇನು, ಅವರಲ್ಲಿಯೂ ಎಲ್ಲ ಬಗೆಯ ವ್ಯಕ್ತಿಗಳಿಲ್ಲವೇ? ಸುಮಾರು ಮೂವತ್ತು ವರ್ಷಗಳ ಕೆಳಗೆ ಪ್ರಾರಂಭಿಸಿದ ಭಕ್ತ ಸಮುದಾಯದ ಸುಧಾರಣ ಕಾರ್ಯವು ತಕ್ಕಷ್ಟು ಪರಿಣಾಮ ಬೀರಿತ್ತು, ನಿಜ. ಆದರೆ ಆಮೂಲಾಗ್ರ ಬದಲಾವಣೆ ಸಾಧ್ಯವಾಗಿಲ್ಲ ಎಂಬ ನಿರಾಶೆಯನ್ನು ಹಲವೇಳೆ ಚಳುವಳಿಯ ಮುಂಚೂಣಿಯಲ್ಲಿದ್ದ ಚಿಂತಕರಲ್ಲಿ ಮೂಡಿಸಿತ್ತು.

ಲಿಂಗಾಯತವೇನೂ ಹೊಸಮತವಲ್ಲ! ದೇಹದ ಮೇಲೆ ಲಿಂಗಧರಿಸುವ ಸಂಪ್ರದಾಯ ಹಳೆಯದೇ. ಆದರೆ ವೈದಿಕದ ವರ್ಣ–ಜಾತಿ ವಿಷಮತೆ, ಯಜ್ಞಕಾರ್ಯ, ಮೂರ್ತಿಪೂಜೆಗಳನ್ನು ಅಲ್ಲಗಳೆಯುವ ಹೊಸ ಆಂದೋಲವನ್ನಾಗಿ ರೂಪಿಸಲು ಶರಣ ಮುಖಂಡರು ಮಾಡಿದ ಪ್ರಯತ್ನವೆಷ್ಟು! ದೇವರು–ದಿಂಡರ ಹೆಸರಲ್ಲಿ ನಡೆಯುತ್ತಿದ್ದ ಶೋಷಣೆಯೆಷ್ಟು! ದೇವಸ್ಥಾನ ಕಟ್ಟಿಸಿದರೆ ಮೋಕ್ಷಕ್ಕೆ ದಾರಿಯೆಂದು ಭಾವಿಸಿ, ಅದಕ್ಕಾಗಿ ಹಣ ವೆಚ್ಚಮಾಡಿದ ಪರಿ ಹೇಗೆಂದು ಯೋಚಿಸಿದರೆ ಖಿನ್ನತೆ ಮೂಡುತ್ತದೆ. ಕೂಡಲಸಂಗಮದಲ್ಲಿ ಇದ್ದಾಗ ಒಂದು ಶಿಲಾಶಾಸನ ಕಣ್ಣಿಗೆ ಬಿದ್ದಿತ್ತು. ದೀರ್ಘವಾದ ಶಾಸನ. ಯಾರೋ ಭಾವನ ಗಂಧವಾರಣನಂತೆ. ಅದೇನು ಅವನ ಸ್ವಂತ ಹೆಸರಿದ್ದಂತೆ ಕಾಣುವುದಿಲ್ಲ, ಬಿರುದಿರಬೇಕು. ಯಾರೋ ಸಾಮಂತನಂತೆ. ಅಣ್ಣನವರಿಗೆ ಈ ಆಳುವವರ ಬಿರುದಿನ ಮೋಹ ಕಂಡರೆ ನಗು ಉಕ್ಕುತ್ತದೆ; ಎಂಥ ಢೋಂಗಿಗಳಿವರು ಎಂದು ಕೋಪವೂ ಬರುತ್ತದೆ. ತಮ್ಮಂಥ ಜನರೇ ಪ್ರಪಂಚದಲ್ಲಿ ಹಿಂದೆ ಹುಟ್ಟಿರಲಿಲ್ಲ, ಮುಂದೆ ಹುಟ್ಟುವುದಿಲ್ಲ ಎಂದು ಭಾವಿಸುವ ಮೂರ್ಖರಿವರು.

ಬಿಜ್ಜಳ ಮಹಾರಾಜರ ಬಿರುದುಗಳೇನು ಕಡಿಮೆಯೇ? ಮಹಾರಾಜಾಧಿರಾಜ, ರಾಜಪರಮೇಶ್ವರ, ಸುವರ್ಣವೃಷಭಧ್ವಜ, ಡಮರುಕ ತೂರ್ಯನಿರ್ಘೋಷ, ಕಲಂಜಪುರಾವರಾಧೀಶ್ವರ, ಅರಿರಾಯರ ಗಂಡ, ಕಲಿವೃಷಭಭೇರುಂಡ, ಮೂರು ಲೋಕದ ಗಂಡ ಇತ್ಯಾದಿ. ಅದಕ್ಕೇನು, ಒಂದಷ್ಟು ಸಂಸ್ಕೃತ ಕನ್ನಡ ಗೊತ್ತಿದ್ದರೆ ಸಾಕು, ಬಿರುದುಗಳನ್ನು ಹೆಣೆಯವುದೇನು ಕಷ್ಟ. ಒಂದೆರಡು ಪಣಗಳನ್ನು ಕೊಟ್ಟರೆ ಸಾಕು ದಕ್ಷಿಣೆಯಾಗಿ, ಆಸ್ಥಾನಕವಿಗಳು ರಾತ್ರಿಯೆಲ್ಲ ಯೋಚಿಸಿ ಬಿರುದು ನಿರ್ಮಾಣ ಮಾಡುತ್ತಾರೆ. ತನ್ನ ಬಣ್ಣಿಸಬೇಡ ಎಂದು ಬಸವಣ್ಣ ಹೇಳಿದರೇನು? ಬಣ್ಣಿಸುವ ಕೆಲಸವೇ ಕೆಲವರದಾಗಿರುವಾಗ!

ಈ ಭಾವನಗಂಧವಾರಣ ಅಂಥವನಿರಬೇಕು. ಈ ರಾಜ ಸಾಮಂತರಿಗೆ ದೈವಭಕ್ತಿ ಜಾಸ್ತಿಯೇನೋ! ತಾವು ಅಧಿಕಾರಕ್ಕೆ ಬರಲು, ಅಧಿಕಾರದಲ್ಲಿ ಉಳಿಯಲು ಮಾಡುವ, ಮಾಡಬೇಕಾದ ಪಾಪಕಾರ್ಯಗಳ ಬಗ್ಗೆ; ಯುದ್ಧಗಳಲ್ಲಿ ತೊಡಗಿ ಸೈನಿಕರನ್ನು ಕೊಲ್ಲುವುದು ಮಾತ್ರವಲ್ಲದೆ, ಅವರ ಸಂಸಾರಗಳನ್ನು ಹಾಳುಮಾಡುವ ಬಗ್ಗೆ; ನಿರಪರಾಧಿಗಳನ್ನು ಬವಣೆಗೆ ನೂಕುವ ಬಗ್ಗೆ; ರಾಜರಿಗೆ ಏಕಾಂತದಲ್ಲಿ ಯೋಚಿಸಿದಾಗ ಭಯವುಂಟಾಗುವುದೇನೋ. ಅದಕ್ಕೇ ಗುಡಿ–ಗುಂಡಾರಗಳನ್ನು ನಿರ್ಮಿಸಿ ದೇವರನ್ನು ತಮ್ಮ ಬುಟ್ಟಿಗೆ ಹಾಕಿಕೊಳ್ಳುವ ಹುನ್ನಾರವಿರಬೇಕು. ಹುಂಬರು, ಅಥವಾ ಇದೂ ಒಂದು ಬಗೆಯಲ್ಲಿ ಅವರ ರಾಜಕಾರಣಜಾಲದ ಭಾಗವೋ. ಈ ದೇವಸ್ಥಾನಗಳೆಂದರೆ ಜನಗಳು ಇಡಿಕಿರಿದಿರುವ ಜಾಗ. ಮುಗ್ಧರು ಬಂದುಹೋಗುವ ಜಾಗ. ಅಲ್ಲಿನ ಅರ್ಚಕರು, ದೇವಸ್ಥಾನಕ್ಕೆ ಅಂಟಿಕೊಂಡಿರುವ ಮಠಗಳ ಸ್ಥಾನಪತಿಗಳು ರಾಜರನ್ನು ದೇವರಿಗೆ ಹೋಲಿಸಿ ಜನರಿಗೆ ಹೇಳಬೇಕಲ್ಲ. ಅದಕ್ಕೇ ಅವರಿಗೆ ದತ್ತಿ, ದಾನ ನೀಡುವುದೇನೋ. ರಾಜಾಪ್ರತ್ಯಕ್ಷದೇವತಾ ಎಂದು ಹೇಳಿ ಹೇಳಿ ಜನರನ್ನು ಈ ಬುದ್ಧಿವಂತರು ನಂಬಿಸಿಬಿಟ್ಟಿದ್ದಾರಲ್ಲ. ಹಾಗೆ ತಮ್ಮ ಬಗ್ಗೆ ಹೇಳದಿರುವವರ ಬಗ್ಗೆ ರಾಜರಿಗೆ ಕೋಪವೂ ಇರಬಹುದು. ರಾಜರ ಕೋಪಕ್ಕೆ ಪಾತ್ರರಾಗಬಾರದೆಂದು ಈ ಸ್ಥಾನಪತಿ ಪಂಡಿತೋತ್ತಮರು ರಾಜರನ್ನು ಓಲೈಸುವ ರೀತಿಯೆಂತು! ಇಲ್ಲದಿದ್ದರೆ ತಮಗೆ ಗಂಡಾಂತರ! ಬಿಜ್ಜಳ ಮಹಾರಾಜರೇ ಬನವಾಸಿ ಪನ್ನಿರ್ಛಾಸಿರ ನಾಡಿನಲ್ಲಿರುವ ಕೇದಾರೇಶ್ವರ ಮಠದ ಸ್ಥಾನಪತಿ ವಾಮಶಕ್ತಿಗಳನ್ನು ಸೆರೆಹಿಡಿಸಿರಲಿಲ್ಲವೇ; ಅದೇ ಈಚೆಗೆ ಒಂದು ಐದಾರು ವರ್ಷದ ಹಿಂದೆ, ಇಮ್ಮಡಿ ವಾಮಶಕ್ತಿ ಪಂಡಿತರ ಕಾಲುತೊಳೆದು ಬೇಕಾದಷ್ಟು ದತ್ತಿ ಬಿಟ್ಟುಕೊಟ್ಟಿದ್ದರು! ಈ ಸ್ಥಾನಪತಿಗಳಿಗೆ ಕೊಟ್ಟವರೊಳು ಸಮ್ಮೇಳ ಕೊಡದವರೊಳು ಕ್ರೋಧ!

ಈ ಭಾವನ ಗಂಧವಾರಣ ಚಿಲ್ಲರೆ ರಾಜನಿರಬೇಕು. ಆದರೆ ಕೂಡಲಸಂಗಮದಲ್ಲಿದ್ದ ಆ ಶಿಲಾಶಾಸನ ಅವನು ಯಾವ ಯಾವ ದೇವಸ್ಥಾನಗಳಿಗೆ ದಾನಪಿತ್ತನೆಂಬ ದೊಡ್ಡಪಟ್ಟಿಯನ್ನೇ ಕೊಡುತ್ತದೆ. ಕಲ್ಯಾಣ, ಅಣ್ಣಿಗೆರೆ, ಮುಳುಗುಂದ, ಕೊಳ್ಳುಗೆ, ನಂದಾಪುರ, ಕೋಹಳ್ಳಿ, ಬೆಳ್ಗಲಿ, ನಪಿಲೆ,

ನಂದವಾಡಗೆ, ಪೊನಗುಂದ, ಪುರಗೂರು, ಕುಂದುರಗೆ, ಸಂಗಮ – ಎಲ್ಲ ಕಡೆಯ ದೇವರುಗಳಿಗೆ ಕೊಟ್ಟಿದ್ದಾನೆ. ವಿಷ್ಣುವಿಗೂ ಕೊಟ್ಟ, ಶಿವನಿಗೂ ಕೊಟ್ಟ, ಜಿನನಿಗೂ ಇತ್ತ – ಎಲ್ಲ ದೇವರಿಗೂ ಇವನು ಕೊಟ್ಟಿದ್ದಾನೆ. ಕಷ್ಟಬಂದರೆ ಈ ದೇವರಲ್ಲಿ ಯಾರಾದರೊಬ್ಬರು ಸಹಾಯ ಮಾಡಿದರೆ ಸಾಕು. ದೇವರು ತನಗೆ ಕೊಟ್ಟ ಭಕ್ತನನ್ನು ತಾನೇ ಕಾಪಾಡುವುದು! ತಮ್ಮನ್ನೇ ಕಾಪಾಡಿಕೊಳ್ಳಲಾರದ ದೇವರುಗಳು ಇತರರನ್ನು ಕಾಪಾಡಿಯಾರೇ! ದೇವರು ನಮಗೆ ಕೊಡಬೇಕೋ ನಾವು ದೇವರಿಗೆ ಕೊಡಬೇಕೋ!

ಅದಕ್ಕೇ ಶರಣಮಾರ್ಗದಲ್ಲಿ ಗುಡಿ ನಿರ್ಮಾಣಕ್ಕೆ ಅವಕಾಶವಿಲ್ಲ. ಗುಡಿಯೆಂದರೆ ಅನ್ಯಾಯದ ಆಗರಗಳಾಗಿವೇ; ಸುಲಿಗೆಯ ತಾಣಗಳೆನಿಸಿವೆ. ಉತ್ಸವಗಳೆಂದು ವಿಜೃಂಭಣೆಯೆಂದು ದೇವರನ್ನು ಮೆರೆಸುವುದೇನು, ಅವನ ಹೆಸರಲ್ಲಿ ನಡೆಸುವ ಆಚರಣೆಗಳೇನು, ಅವನಿಗೆ ಕಿವುಡೋ ಎಂಬಂತೆ ಮಾಡುವ ಅಬ್ಬರದ ವೇದಘೋಷ–ಮಂತ್ರೋಚ್ಚಾರಗಳೇನು, ತಮಟೆಗಳ ಸದ್ದೇನು! ಶರಣ ಸಂಕುಲ ಇದನ್ನು ಒಪ್ಪದು, ಹರೆಯ ಹೊಯಿಸಿ ಕುರುಹ ಪೂಜಿಸುವ ಡಂಬಕರ ಮೆಚ್ಚ ನಮ್ಮ ಕೂಡಲಸಂಗಮದೇವ. ಇವರು ಡಂಬಕರಲ್ಲದೆ ಮತ್ತೇನು. ಬಾಯಲ್ಲಿ ಮಂತ್ರೋಚ್ಚಾರ, ಮಾಡುವುದು ಅನಾಚಾರ!

ಕೇದಾರೇಶ್ವರ ಮಠದ ಒಬ್ಬ ಸ್ಥಾನಪತಿಗಳ ವಿಚಾರ ಸಾಕು, ಗುಡಿಗಳು–ಮಠಗಳು ಯಾವುದಕ್ಕೆ ಅಸ್ಪದವೀಯುತ್ತವೆ ಎಂದು ತಿಳಿಯಲು. ಒಮ್ಮೆ ಬಸವಣ್ಣನವರೂ ಬಳ್ಳಿಗಾವಿಗೆ ಹೋಗಿದ್ದರು. ರಾಜನ ಕೆಲಸ ಎಂದರೆ ಎಂದಾದರೊಮ್ಮೆ ಹೋಗಬೇಕಲ್ಲ. ಭಕ್ತಿಯಿಂದ ಗುಡಿಗೆ ಹೋಗದಿದ್ದರೂ ಕರ್ತವ್ಯನಿರ್ವಹಣೆಗೆ ಹೋಗಬೇಕಲ್ಲ. ಅಲ್ಲದೆ ಆ ಊರಿನ ಪರಿಸರ ಎಂಥ ಮನೋಹರ! ಸುತ್ತುಮುತ್ತಲ ಪ್ರಕೃತಿಯೆಂದರೆ ಚೆಲವು ಚೆಲ್ಲವರಿದ ತಾಣ. ಅಲ್ಲದೆ, ಪಕ್ಕದಲ್ಲಿಯೇ ಅಲ್ಲಮಪ್ರಭುಗಳ ಸಾಧಕಸ್ಥಾನ. ಕೇದಾರೇಶ್ವರ ಮಠವೂ ದೊಡ್ಡಮಠ, ಒಳ್ಳೆಯ ಕೆಲಸವೂ ಅಲ್ಲಿ ಆಗುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ವಿದ್ಯೆ, ಅನ್ನದಾನ–ಇವು ನಿರಂತರವಾಗಿ ಸಾಗುತ್ತಿದೆ. ನೂರಾರು ಹರದಾರಿಗಳಿಂದ ವಿದ್ವಾಂಸರು ಬರುತ್ತಾರೆ, ಓದುತ್ತಾರೆ, ಚರ್ಚಿಸುತ್ತಾರೆ. ಆದರೆ ಅವರಿಗೆ ಅನೇಕ ವೇಳೆ ಅನ್ನಿಸುತ್ತದೆ, ಈ ವಿದ್ಯೆಯಿಂದ ಏನು ಪ್ರಯೋಜನ? ಸಂಸ್ಕೃತದ ಶ್ಲೋಕಗಳನ್ನು ಕಂಠಗತಮಾಡಿಕೊಂಡು ಜೋರಾಗಿ ಹೇಳಿ ಸಾಧನೆ ಮಾಡುತ್ತೇನೆಂಬುದು ಮೂರ್ಖತನವಲ್ಲವೇ? ಅದೂ ಈ ವಿದ್ಯೆ ಎಲ್ಲರಿಗೂ ದಕ್ಕೀತೇ? ಕೆಲವರಿಗೆ ಮಾತ್ರ ಅದನ್ನು ಕಲಿಯುವ ಅಧಿಕಾರ. ಕೊನೆಯವರೆಗೂ ಕೆಲವರನ್ನು ಮೇಲೆ ನಿಲ್ಲಿಸುವ ಸಾಧನ.

ಆ ಮಠದಲ್ಲಿ ಒಂದು ಜಗುಲಿಯಿದೆ. ಅದನ್ನು ಚಂಗುಲಿಪೀಠ ಎಂದು ಕರೆಯುತ್ತಾರಂತೆ. ಅದಕ್ಕೆ ಆ ಹೆಸರೇಕೆ ಬಂತು ಎಂದು ಕೇಳಿದರೆ ಒಂದು ಕತೆ ಹೇಳುತ್ತಾರೆ. ಹಿಂದೆ ಆ ಮಠಕ್ಕೆ ಸ್ಥಾನಪತಿಯಾಗಿದ್ದವರೊಬ್ಬರು ದೊಡ್ಡ ಸಾಧಕರಾಗಿದ್ದರಂತೆ, ಹೆಸರು ಕೇದಾರಶಕ್ತಿಗಳೆಂದಿರಬೇಕು. ಅವರ ಕಾಲದಲ್ಲಿ

ಚಂಗುಲಿ ಎಂದೊಬ್ಬ ದೇವದಾಸಿ ನೃತ್ಯಸೇವೆಗಾಗಿ ಅಲ್ಲಿದ್ದಳು. ಸೂಳೆಯಾದರೂ ಎಲ್ಲರ ಬಗ್ಗೆ ಗೌರವವಂತೆ, ತುಂಬ ವಿನಯಶೀಲೆಯಂತೆ. ಒಂದು ಬಾರಿ ಅವಳು ಕೇದಾರಶಕ್ತಿಗಳನ್ನು ತಮ್ಮ ಮನೆಗೆ ಪಾದಪೂಜೆಗೆ ಆಹ್ವಾನಿಸಿದಳು. ಗುರುಗಳು ಯೋಚಿಸಿದರು, ಕರೆಯುತ್ತಿರುವವಳು ಸೂಳೆ, ತಾನು ಸನ್ಯಾಸಿ– ಹೋಗಬಹುದೇ, ಹೋಗಬಾರದೇ. ಆದರೆ ಚಂಗಲೆಯ ನಡತೆಯ ಬಗ್ಗೆ ಅವರಿಗೆ ವಿಶ್ವಾಸ; ಹೋದರು. ಮಠದ ರಾಜಕೀಯ ಏನಿತ್ತೋ. ಬಳ್ಳಿಗಾವಿಯ ಪಟ್ಟಣಸ್ವಾಮಿ ಈ ವಿಷಯ ತಿಳಿದು ಕೆಂಡಾಮಂಡಲವಾದ. ಗುರುಗಳು ಸೂಳೆಮನೆಗೆ ಹೋಗುವುದೆ! ತಮ್ಮೂರಿಗೆ ಇದು ಅವಮಾನಕರ ಎಂದು ಕೂಗಾಡಿದ. ಮಠಕ್ಕೆ ಬಂದು ಕೇದಾರಶಕ್ತಿಗಳೆದುರು ಹಾರಾಡಿದ. ಗುರುಗಳು “ಅದರಲ್ಲಿ ತಪ್ಪೇನು ಪಟ್ಟಣಸ್ವಾಮಿಗಳೇ? ಆಕೆ ಭಕ್ತಳು, ನಿಗರ್ವಿ, ಸುಶೀಲೆ. ಕರೆದಳು; ಹೋದೆ” ಎಂದರು ಸಾವಧಾನವಾಗಿ.

“ಸೂಳೆ ಕರೆದಳು, ನೀವು ಹೋದಿರಿ!” ಎಂದು ವ್ಯಂಗ್ಯವಾಗಿ ನುಡಿದು ಈ ವಿಷಯವನ್ನು ರಾಜನಿಗೆ ದೂರುಕೊಟ್ಟ. ರಾಜ ಎಂದರೆ ಸಾಮಂತ. ಅವನ ಹೆಸರು ವಿಕ್ರಮನಂತೆ. ರಾಜ ವಿಚಾರಣೆ ನಡೆಸಿದ. ವಿಚಾರಣೆ ನಡೆಸಲು ಏನಿದೆ ಅಲ್ಲಿ! ಚಂಗಲೆಯ ಮನೆಗೆ ತಾವು ಹೋಗಿದ್ದುದಾಗಿ ಕೇದಾರಶಕ್ತಿಗಳೇ ಒಪ್ಪುತ್ತಿದ್ದಾರಲ್ಲ. ಎತ್ತು ಈದಿತು ಎಂದರೆ ಕೊಟ್ಟಿಗೆಯಲ್ಲಿ ಕಟ್ಟು ಎನ್ನುವವರು ತಾನೇ ರಾಜರು! ಅವರ ಮೂಗಿನ ನೇರಕ್ಕೆ ವಿಚಾರಣೆ! ತಪ್ಪು ಒಪ್ಪಿಕೊಳ್ಳುತ್ತಿದ್ದಾರೆ ಸ್ಥಾನಪತಿಗಳು ಎಂದು ರಾಜ ತೀರ್ಮಾನಿಸಿದ. ವಿದ್ಯಾರ್ಥಿಗಳಿಗೆ ಬ್ರಹ್ಮಚಾರಿಗಳಿಗೆ ಮಾರ್ಗದರ್ಶಕರಾಗಬೇಕಾದ ಗುರುಗಳು ಹೀಗೆ ಮಾಡುವುದು ತಪ್ಪು ಎಂದು ಅಪ್ಪಣೆಯಿತ್ತ. ತಪ್ಪಿಗೆ ಶಿಕ್ಷೆ, ಕೇದಾರಶಕ್ತಿಗಳನ್ನು ಪಟ್ಟದಾನೆಯಿಂದ ತುಳಿಸಿ ಕೊಲ್ಲಿಸಬೇಕು. ಶಿಕ್ಷೆ ವಿಧಿಸಲು ಒಂದು ದಿನ ನಿರ್ಧಾರವಾಯಿತು.

ಚಂಗುಲಿ ಗಾಬರಿಯಾದಳು. ತನ್ನ ಮೇಲೆ ಕೃಪೆಯಿಟ್ಟು ತನ್ನ ಮನೆಗೆ ಬಂದ ದೇವರಂಥ ಗುರುಗಳಿಗೆ ಈ ಶಿಕ್ಷೆಯೇ! ತನ್ನ ಪ್ರಾಣ ಬೇಕಾದರೆ ಕೊಡಲು ಅವಳು ತಯಾರು. ಆದರೆ 'ರಾಜನಿಗೆ ಎಲ್ಲರ ಪ್ರಾಣವೂ ಸಮಾನವೇನಲ್ಲ. ಕೆಲವರ ಪ್ರಾಣದ ಮೇಲೇ ಅವರಿಗೆ ಕಣ್ಣು. ಅವಳ ಮಾತನ್ನು ಕೇಳಿಸಿಕೊಳ್ಳುವವರಾದರೂ ಯಾರಿದ್ದರು ಆಗ. ರಾಜಾಜ್ಞೆಯಾಗಿದೆ, ಮುಗ್ಧೆ ಏನು ಮಾಡಿಯಾಳು. ತನಗೆ ಗೊತ್ತಿದ್ದಂತೆ ನಡೆದುಕೊಂಡಳು. ಶಿಕ್ಷೆ ವಿಧಿಸಲು ಇನ್ನು ನಾಲ್ಕು ದಿನಗಳಿವೆ ಎನ್ನುವಾಗ ಹಿಂದಿನ ಮೂರು ದಿನಗಳು–ಮೂರು ರಾತ್ರಿ ದೇವರೆದುರಿಗೆ ಅಖಂಡ ನೃತ್ಯಸೇವೆ ಸಲ್ಲಿಸಿದಳಂತೆ, ನಿರಪರಾಧಿಗಳಾದ ಗುರುಗಳನ್ನು ಉಳಿಸಿಕೊಡಬೇಕೆಂದು ದೇವರಲ್ಲಿ ಪ್ರಾರ್ಥನೆ ಮಾಡಿದಳಂತೆ.

ನೂರಾರು ಜನ ಶಿಕ್ಷೆಯ ಕಾಲಕ್ಕೆ ಮಠದ ಆವರಣದಲ್ಲಿ ಸೇರಿದ್ದರು. ಭಕ್ತಿ ಕೆಲವರಿಗೆ, ಭಯ ಕೆಲವರಿಗೆ, ಕುತೂಹಲ ಕೆಲವರಿಗೆ. ಅಂತೂ ಸಂದಣಿ

ಸೇರಿತು. ನಿಗದಿತ ಕಾಲಕ್ಕೆ ರಾಜ ಬಂದ, ಪಟ್ಟದಾನೆ ಬಂತು. ಆನೆಯ ಕಾಲಿಗೆ ಕಟ್ಟಿದ್ದ ಸರಪಳಿ ಬಿಚ್ಚಿದರು. ರಾಜ ಹ್ಲೂ ಎಂದ ಕೂಡಲೇ ಮಾವುತ ಆನೆಗೆ ಆಜ್ಞಾಪಿಸಿದ. ಆನೆ ಓಡಿತು, ಜನ ಗಾಬರಿಯಿಂದ ದೂರ ಸರಿದರು. ಆದರೆ ಅದು ಓಡಿದುದು ದೇವಸ್ಥಾನವನ್ನು ಸುತ್ತು ಹಾಕಲು, ಮೂರು ಸುತ್ತು ಹಾಕಿ ಕೇದಾರಶಕ್ತಿಗಳಿದ್ದ ಜಾಗಕ್ಕೆ ಬಂದಿತಂತೆ. ಬಂದದ್ದೇ ಮುಂದಿನ ಕಾಲುಗಳನ್ನೂರಿ ಅವರ ಮುಂದೆ ಕೂತಿತಂತೆ, ಸೊಂಡಿಲನ್ನೆತ್ತಿ ಅವರ ನೆತ್ತಿಯ ಮೇಲೆ ಇರಿಸಿತಂತೆ. ಎಲ್ಲರಿಗೂ ಅಚ್ಚರಿ! ರಾಜನಿಗೆ ದಿಗ್ಭ್ರಮೆ, ಚಂಗುಲಿಯ ಕಣ್ಣಲ್ಲಿ ಆನಂದಬಾಷ್ಪ. ಕೇದಾರಶಕ್ತಿಗಳು ಮಾತ್ರ ಅವಿಚಲಿತರಾಗಿ ಮಂದಹಾಸದಿಂದ ಕೂತಿದ್ದರಂತೆ. ರಾಜ ಗುರುಗಳ ಕಾಲಿಗೆ ದೊಪ್ಪನೆ ಬಿದ್ದ. ಪಟ್ಟಣಸ್ವಾಮಿ ಮಾಚಿಸೆಟ್ಟಿಯ ಮೇಲೆ ಹಾರಾಡಿ ಅವನಿಗೆ ದಂಡವಿಧಿಸಿದರು. ಆದರೇನು, ಗುರುಗಳು ಇನ್ನು ಸಾಕು ಎಂದು ಮಠದಿಂದ ನೇರವಾಗಿ ಹೊರಹೋದರು. ಎಲ್ಲಿಗೋ! ಅವರನ್ನು ಕೇಳುವ ಧೈರ್ಯ ಯಾರಿಗಿತ್ತು, ರಾಜನಿಗೂ ಇರಲಿಲ್ಲ. ಕೆಲವು ದಿನಗಳಾದ ಮೇಲೆ ಚಂಗುಲಿಯ ಹೆಣವು ಮಠದೆದುರಿನ ಕೆರೆಯಲ್ಲಿ ತೇಲುತ್ತಿತ್ತು! ಕತೆ ಎಂಥವರನ್ನೂ ಗೆಲ್ಲಬಲ್ಲ ರೀತಿಯಲ್ಲಿದೆ. ಅದರ ಒಟ್ಟು ಅರ್ಥವೆಂದರೆ ಕೇದಾರಶಕ್ತಿಗಳು ಶುಚಿಗಳಾಗಿದ್ದಿರಬಹುದು; ಆದರೆ ದುರ್ಬಲ ಮನಸ್ಸಿನವರಾದರೆ ಬ್ರಹ್ಮಚರ್ಯಪಾಲನೆ ಮಾಡುವೆವೆಂದು ಹೇಳಿಕೊಳ್ಳುವ ಸ್ಥಾನಪತಿಗಳು ಬಲಿಯಾಗುವ ಸನ್ನಿವೇಶ ಅಲ್ಲಿದೆ ಎಂಬುದು. ಎಷ್ಟೋ ಕಡೆ ಗುಟ್ಟಾಗಿ ಈ ವ್ಯವಹಾರಗಳಿಲ್ಲವೇ?

ಅದಕ್ಕೇ ಗುಡಿ–ಗುಂಡಾರಗಳು ಲಿಂಗವಂತರಿಗೆ ಬೇಡ. ದೇಹದ ಮೇಲೆ ಕಟ್ಟುವ ಇಷ್ಟಲಿಂಗ ನಮಗೆ ಸಾಕು. ಕಂಕುಳಲ್ಲಿ ಕಟ್ಟುತ್ತಿದ್ದ ಪರಿಪಾಠದ ಬದಲು ಕೊರಳಿಗೆ ದಾರಕಟ್ಟಿ, ಎದೆಗೆ ಇಷ್ಟಲಿಂಗ ಹತ್ತಿರವೇ ಇರುವಂತಹ ರೀತಿಯಲ್ಲಿ ಬದಲಾಯಿಸುವ ರೂಢಿ ಬಂದಿತು. ಇಷ್ಟಲಿಂಗವು ಕುರುಹೇ ಅಲ್ಲವೇ? ನಿಜ. ಆದರೆ ಗುಡಿಯ ದೇವರು ಸಮುದಾಯದ್ದು, ಇಷ್ಟಲಿಂಗ ವ್ಯಕ್ತಿಯದು. ದೈವವೆಂಬುದು ಗುಂಪಲ್ಲಿ ಆವಿಷ್ಕಾರಗೊಳ್ಳುವುದು ಸಾಧ್ಯವೇ? ವ್ಯಕ್ತಿ ತನ್ನ ಕಲ್ಪನೆಯ ದೈವವನ್ನು ತಾನೇ ಪೂಜಿಸಬೇಕಾದದ್ದು. ಯದ್ಭಾವಂ ತದ್ಭವತಿ ಎಂದದ್ದು ಇದಕ್ಕೇ ಇರಬಹುದು. ತನ್ನ ಕಲ್ಪನೆಯ ಶಿವ ತನಗೆ ಆರಾಧ್ಯವಾದದ್ದು. ದೈವವೆಂಬುದು ಈ ರೀತಿ ವ್ಯಕ್ತಿ ವಿಶಿಷ್ಟವಾದುದು. ಇದೂ ಬೇಕೇ ಎಂದರೆ ಬೇಕಾದರೆ ಬೇಕು, ಬೇಡವಾದರೆ ಬೇಡ ಎನ್ನುವವರು ಬಸವಣ್ಣ. ಸಿದ್ಧರಾಮನಂತಹವರಿಗೆ, ಅಲ್ಲಮಪ್ರಭುಗಳಂತಹವರಿಗೆ ಇಂತಹ ಕುರುಹುಗಳ ಆವಶ್ಯಕತೆಯೇನಿದೆ? ಆಕಾಶಕ್ಕೆ ನೆಗೆಯ ಬಲ್ಲವನಿಗೆ ಮಾಡು ಏರಲು ಏಣಿ ಬೇಕೇ? ಇದು ಸಾಮಾನ್ಯರಿಗೆ ಮಾತ್ರ, ಅಲ್ಲದೆ ಚೆನ್ನಬಸವಣ್ಣನಂತಹವರು ವಾದಿಸುತ್ತಾರೆ : ಇಷ್ಟಲಿಂಗಧಾರಣೆ ಹೇಗೆ ವೈಯಕ್ತಿಕ ದೈವಕಲ್ಪನೆಯ ಸಂಕೇತವೋ ಹಾಗೆಯೇ ಒಂದು ಸಮುದಾಯಕ್ಕೆ ತಾವೆಲ್ಲ ಸೇರಿದವರು ಎಂಬ ಒಂದುತನದ ಪ್ರತೀಕ, ಅನನ್ಯತೆಯ ಪ್ರತೀಕ ಎಂದು.

ಸರಿ, ಲಿಂಗಕಟ್ಟಿಕೊಂಡುಬಿಟ್ಟರೆ ದೊಡ್ಡವನಾಗಿಬಿಡುತ್ತಾನೆಯೇ. ಕಬ್ಬಿಣದ ಕೋತಿಯನ್ನು ಸ್ಪರ್ಶಮಣಿ ಮುಟ್ಟಿದರೆ ಕಬ್ಬಿಣ ಚಿನ್ನವಾಗಬಹುದು, ಆದರೆ ಕೋತಿ? ಅದು ಕೋತಿಯೆ! ಆದರೆ ಈ ಲಾಂಛನದಡಿಯಲ್ಲಿ ಜನರನ್ನು ಒಂದುಗೂಡಿಸಿ ಮಾನವತೆಯನ್ನು ಬಿತ್ತುವುದೇ ಶರಣ ಚಳುವಳಿಯ ಉದ್ದೇಶ. ಹಳೆಯ ಅಭ್ಯಾಸಗಳನ್ನು ಬಿಡಿಸಲೋಸುಗ ಇಂಥ ಹೊಸ ರೂಢಿಗಳನ್ನು ಬಳಕೆಗೆ ತಂದಾಗಿದೆ. ಆದರೆ ಮೌಢ್ಯವೆಂಬುದು ಎಷ್ಟೊಂದು ಆಳವಾಗಿ ಬೇರೂರಿದೆ ಜನರಲ್ಲಿ! ಇಷ್ಟಲಿಂಗ ಬಿದ್ದರೆ, ಕಳೆದು ಹೋದರೆ, ಭಿನ್ನವಾದರೆ ಬದುಕಿರಬಾರದು ಎಂಬ ಉಗ್ರ ಭಕ್ತರಿದ್ದಾರೆ ಶರಣರಲ್ಲಿ! ಅವರಿಗೆ ತಿಳಿಯಹೇಳಹೋದರೆ ತಾವು ಮೂರ್ಖರಾಗಬೇಕು, ಅಷ್ಟೆ. ಅಯ್ಯಾ, ಲಾಂಛನವೆಂಬುದು ಒಂದು ಸಂಕೇತ. ಅದೇ ಮುಖ್ಯವಲ್ಲ. ದಾರಿ ಮುಖ್ಯವೋ ಊರು ಮುಖ್ಯವೋ, ಪಾತ್ರೆ ಮುಖ್ಯವೋ ಅದರೊಳಗಿನ ಹಾಲು ಮುಖ್ಯವೋ. ಈ ಕ್ಷುಲ್ಲಕ ಕಾರಣಕ್ಕಾಗಿ, ಅಮೂಲ್ಯವಾದ ಬದುಕನ್ನು ಕೊನೆಗೊಳ್ಳಿಸಿಕೊಳ್ಳುತ್ತಾರೆಯೇ ಎಂದರೆ ಕೇಳಬೇಕಲ್ಲ. ದಡ್ಡತನಕ್ಕೆ ಯಾವ ಕುರುಹಾದರೇನು. ಕೆಲವು ವೇಳೆ ಅನ್ನಿಸುತ್ತದೆ, ಈ ಚಳುವಳಿಯಿಂದ ಏನನ್ನೋ ದೊಡ್ಡದನ್ನು ಸಾಧಿಸದೆ, ಬೇರೊಂದು ಕುರುಹಿನಡಿಯಲ್ಲಿ ಹಿಂದಿನ ಮೌಢ್ಯವನ್ನೇ ಕೊರಳಲ್ಲಿ ಕಟ್ಟಿಕೊಂಡೆವೆಂದು. ಅದೇನೋ ಅನ್ನುತ್ತಾರಲ್ಲ; ಗಣೇಶನನ್ನು ಮಾಡ ಹೋಗಿ ಅವನಪ್ಪನನ್ನು ಮಾಡಿದರೆಂದು.

ಇಂತಹ ಜನರನ್ನು ಕಟ್ಟಿಕೊಂಡು ಶರಣರು ಮಾಡಬಹುದಾದ ಸುಧಾರಣೆಗೂ ಕೊನೆಯಿದೆಯಲ್ಲ. ಅಲ್ಲದೆ, ಮಾಡಹೊರಟದ್ದನ್ನು ಅರ್ಧಕ್ಕೇ ಕೈಬಿಡುವಂತಿಲ್ಲ. ಅವರೇ ಕೈಬಿಟ್ಟರೆ ಹುರಿದುಂಬಿಸುವುದರಿಂದ ಮೇಲಕ್ಕೆತ್ತಬಹುದಾದ ಜನಗಳ ಗತಿ! ಇನ್ನೊಂದು ವಿಚಾರವೂ ಇದೆ, ಈ ಮೌಢ್ಯ ಮೇಲುವರ್ಗದ ಜನರಲ್ಲಿ ಹಾಗೆಯೇ ಮುಂದುವರೆಯುತ್ತಿದೆ, ಕೆಳವರ್ಗದಿಂದ ಬಂದ ಜನರಲ್ಲಿ ಜಾಗೃತಿ ಹೇಗಾಗಿದೆ ಎಂದು ಆಲೋಚಿಸಿದರೆ ಆಶ್ಚರ್ಯವೇ ಆಗುತ್ತದೆ. ನಿಜವಾಗಲೂ ಒಬ್ಬ ಅಂಬಿಗರ ಚೌಡಯ್ಯರನ್ನು ಕಂಡರೆ, ಮಡಿವಾಳ ಮಾಚಿದೇವರನ್ನು ಕಂಡರೆ, ಒಬ್ಬ ಡೋಹರ ಕಕ್ಕಯ್ಯರನ್ನು ಕಂಡರೆ, ತಾವು ಮಾಡಿದ್ದು ನಿಸ್ಸಾರ್ಥಕ ಎಂದೇನೂ ಅನ್ನಿಸುವುದಿಲ್ಲ. ಇಂಥ ಸಮುದಾಯದಲ್ಲಿ ತಾವೂ ಮನುಷ್ಯರು ಎಂಬ ಆತ್ಮವಿಶ್ವಾಸ ಮೂಡುವುದು ಪವಾಡದಿಂದ ಮಾತ್ರ ಸಾಧ್ಯ. ಹಾಗಾಗಿ ಕೇತಗ–ಚಂದಲೆಯರ ಮದುವೆಯಿಂದ ಏನಾದರಾಗಲಿ, ತಾವೆಲ್ಲ ಸಮಾನ, ತಮ್ಮಲ್ಲಿ ಜಾತಿಭೇದವಿಲ್ಲ ಎಂಬುದನ್ನು ಇತರರಿಗೆ ತೋರಿಸುವುದಲ್ಲ; ತಮ್ಮ ಮನಸ್ಸಿನಲ್ಲಿಯೇ ಅದನ್ನು ದೃಢಪಡಿಸಿಕೊಳ್ಳಲು ಒಂದು ಸಂದರ್ಭವಾಗುತ್ತದೆ ಎಂಬ ನಿಲವು ಅವರೆಲ್ಲರದು.

ಹೀಗೆ ಆ ಮದುವೆಗೆ ಎಲ್ಲ ಕುತೂಹಲ–ಔತ್ಸುಕ್ಯಗಳಿಂದ ಕಾಯುತ್ತಿದ್ದ ಕಾಲ. ಈ ಮಧ್ಯೆ ಒಂದು ಪ್ರಸಂಗ ನಡೆಯಿತು. ಅದು ಒಟ್ಟು ಚಳುವಳಿಯ ದೃಷ್ಟಿಯಿಂದಲೇ ತುಂಬ ಮುಖ್ಯವಾದದ್ದು ಎನ್ನಿಸುವಂತಹುದು. ಮಾಘ ಕೃಷ್ಣ

ಚತುರ್ಥಿ ಗುರುವಾರ ಕಲ್ಯಾಣದ ತುಂಬೇಶ್ವರ ಗುಡಿಯಲ್ಲಿ ವಿಶೇಷ ಪೂಜೆಗಳು. ತುಂಬೇಶ್ವರ ಗುಡಿಯೆಂದರೆ ಅಪ್ಪೂರ್ವಿಯಾದದ್ದು. ಕಾಲಾನುಕಾಲದಿಂದ ನೂರಾರು ಜನರು ಅನೇಕ ಕಾರಣಗಳಿಗಾಗಿ ತುಂಬೇಶ್ವರನಿಗೆ ದತ್ತಿಬಿಟ್ಟಿದ್ದಾರೆ. ಧೂಪದೀಪ ಗಂಧ ನೈವೇದ್ಯ ಗೀತ ನೃತ್ಯೋಪಹಾರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ, ದೇವರ ಅಂಗಭೋಗ ರಂಗಭೋಗಕ್ಕಾಗಿ ನೀಡಿದ ದತ್ತಿಗಳ ವಿವರವಿರುವ ಅನೇಕ ಶಿಲಾಶಾಸನಗಳು ಗುಡಿಯ ಪ್ರಾಕಾರದೊಳಗಡೆಯಿದೆ. ಬಿಜ್ಜಳ ಮಹಾರಾಜರು ಕಲ್ಯಾಣಕ್ಕೆ ಪ್ರವೇಶಿಸುವ ಮೊದಲು ಈ ಗುಡಿಗೆ ಭೇಟಿಯಿತ್ತು, ಆನಂತರ ಊರೊಳಗೆ ಹೋಗಿದ್ದರಂತೆ. ಆನಂತರ ಅವರ ಶ್ರೇಯಸ್ಸು ಪ್ರೇಯಸ್ಸುಗಳು ಅವಿರತವಾಗಿ ವೃದ್ಧಿಯಾಗುತ್ತಿವೆ. ಹೀಗಾಗಿ ಬಿಜ್ಜಳ ಪ್ರಭುಗಳಿಗೆ ತುಂಬೇಶ್ವರ ದೇವರೆಂದರೆ ತುಂಬ ಭಕ್ತಿ. ಆಗಾಗ್ಗೆ ಇಲ್ಲಿಗೆ ಬರುವುದು ಅಭ್ಯಾಸ. ರಾಜಕಾರಣದ ಗೊಂದಲದಲ್ಲಿ ಸಿಕ್ಕಿದ ತಲೆಗೆ ಸಮಾಧಾನ ಸಿಕ್ಕುವ ಹಾಗಿದ್ದರೆ ಇಲ್ಲೇ ಎಂದು ಅವರು ಆಗಾಗ ಹೇಳುವುದುಂಟು. ಅದರಲ್ಲೂ ವಿಶೇಷ ಪೂಜೆ ನಡೆಯುವ ದಿನ ಸೂರ್ಯೋದಯದ ಕಾಲದಲ್ಲಿ ಶುಚಿರ್ಭೂತರಾಗಿ ತುಂಬೇಶ್ವರ ದರ್ಶನ–ಪೂಜೆ ನಡೆಸುವುದು ಅವರ ಪದ್ಧತಿ.

ದೇವಸ್ಥಾನದ ಪ್ರಾಂಗಣವೆಂದರೆ ಒಂದು ಮೈದಾನವೇ ಸರಿ. ಎತ್ತರವಾದ ಗೋಪುರದ ಗರ್ಭಗುಡಿ, ಪ್ರದಕ್ಷಿಣಪಥ, ರಂಗಮಂಟಪ, ಶುಕನಾಸಿಗಳ ದೇವಸ್ಥಾನದ ಸುತ್ತ ವಿಶಾಲವಾದ ಪ್ರಾಂಗಣ. ನೆಲಕ್ಕೆಲ್ಲ ಹಾಸಿದ ಕಲ್ಲು ಚಪ್ಪಡಿಗಳು. ಸಾವಿರಾರು ಜನರು ಒಟ್ಟಿಗೇ ಕೂರಬಹುದಾದಷ್ಟು ವಿಶಾಲ. ಚತುರ್ಥಿ ಪೂಜೆಗೆಂದು ದೇವಸ್ಥಾನದ ಪೌಳಿಗೋಡೆಗಳಿಗೆಲ್ಲ ಹೊಸದಾಗಿ ಸಾರಣೆ ಕಾರಣೆ ಮಾಡಿಸಲಾಗಿತ್ತು. ಅದೂ ಚಕ್ರವರ್ತಿಗಳು ಕಲ್ಯಾಣದಲ್ಲಿಯೇ ಇದ್ದು, ಗುಡಿಗೆ ಬೆಳಿಗ್ಗೆಯೇ ಬರುವ ಕಾರ್ಯಕ್ರಮ ಬೇರೆ. ಯಾವುದೋ ಕಾರ್ಯದ ಮೇಲೆ ಪ್ರಭುಗಳು ಈ ಹೊತ್ತಿಗೆ ಪರವೂರುಗಳಿಗೆ ಭೇಟಿಯಿತ್ತಿರುತ್ತಿದ್ದ ಪ್ರಸಂಗಗಳು ಹಿಂದೆಷ್ಟೋ ಸಲ ಆಗಿವೆ. ಆಗೆಲ್ಲ ಅರಮನೆಯ ಉಳಿದ ಜನ ಬಂದು ದೇವರ ದರ್ಶನ ಮಾಡುವ ಪರಿಪಾಠ. ಈ ಬಾರಿ ಅದೃಷ್ಟವೆಂಬಂತೆ ಬಿಜ್ಜಳಭೂಪರು ಊರಲ್ಲಿಯೇ ಇದ್ದಾರೆ. ಗುಡಿಯ ಅರ್ಚಕ ಸಮುದಾಯದಲ್ಲಿ ಹೇಗೆಯೋ ಹಾಗೆಯೇ ಅರಮನೆಯ ಸೇವಕ ಪರಿವಾರಗಳಲ್ಲೂ ಸಂಭ್ರಮ. ಚಕ್ರವರ್ತಿಗಳನ್ನು ಬರಮಾಡಿಕೊಳ್ಳಲು ಎಲ್ಲ ಏರ್ಪಾಟುಗಳೂ ನಡೆದಿದ್ದವು. ಅರಮನೆಯಿಂದ ಪ್ರಭುಗಳ ಮೈಗಾವಲ ಪಡೆಯ ಮುಖ್ಯಸ್ಥರು ಬಂದು ಪ್ರಭುಗಳು ಬಂದು ಹೋಗುವ ದಾರಿ, ದೇವರ ದರ್ಶನಕ್ಕೆ ನಿಲ್ಲುವ ಜಾಗ, ಕುಳಿತುಕೊಳ್ಳಬೇಕಾದ ತಾಣ, ಪ್ರದಕ್ಷಿಣಪಥಗಳನ್ನೆಲ್ಲ ವಿವರವಾಗಿ ಪರಿಶೀಲಿಸಿ ಪ್ರಭುಗಳ ರಕ್ಷಣೆಗೆ ಕಿಂಚಿತ್ತೂ ಕುಂದುಬಾರದಂತೆ ಎಚ್ಚರವಹಿಸಿದ್ದರು. ಪ್ರಭುಗಳ ಕಣ್ಣಿಗೆ ಯಾವ ಕೊರೆಯೂ ಕಾಣದಂತೆ ದೇವಸ್ಥಾನದ ವಿಶ್ವಸ್ಥ ಸಮಿತಿ ಮುತುವರ್ಜಿಯಿಂದ ಏರ್ಪಾಟುಗಳನ್ನು ಪೂರೈಸಿದ್ದರು. ಕಾಲಿಡಬೇಕಾದ ನೆಲವೂ, ಬಗ್ಗಿದರೆ ಮುಖ ಕಾಣಸಬೇಕು, ಹಾಗೆ ಶುಭ್ರವಾಗಿತ್ತು.

ಪ್ರಭುಗಳ ಸವಾರಿ ಚಿತ್ತೈಸುವ ದಾರಿಯನ್ನೆಲ್ಲ ತಗ್ಗುಗಳನ್ನು ಮುಚ್ಚಿ ಸಮಗೊಳಿಸಲಾಗಿತ್ತು. ಕೆಮ್ಮಣ್ಣನ್ನು ರಾಶಿರಾಶಿ ತಂದು ಸಮನಾಗಿ ದಾರಿಯ ಮೇಲೆ ಎರಚಲಾಗಿತ್ತು. ಅಡ್ಡಡ್ಡಲಾಗಿ ತಳಿರು ತೋರಣ, ಬಣ್ಣಬಣ್ಣದ ಕಾಗದ–ಬಟ್ಟೆಗಳಿಂದ ಮಾಡಿದ ಬಾವುಟಗಳು ಹಾರಾಡುತ್ತಿದ್ದವು. ಚಕ್ರವರ್ತಿಗಳ ಲಾಂಛನವಾದ ಸುವರ್ಣ ವೃಷಭಗಳು ಗಗನದೆತ್ತರದಲ್ಲಿ ಓಲಾಡುತ್ತಿದ್ದವು. ಪ್ರಭುಗಳು ಹಾದು ಹೋಗುವ ದಾರಿಗಳಲ್ಲೆಲ್ಲ ಅಲಂಕಾರವೋ ಅಲಂಕಾರ. ಎಲ್ಲೆಲ್ಲಿ ನೋಡಿದರೂ ಸಂಭ್ರಮದ ಉರವಣೆ.

ನಿರೀಕ್ಷಿಸಿದಂತೆ ಪ್ರಭುಗಳು ಮತ್ತವರ ಪರಿವಾರದ ಸವಾರಿ ಗುಡಿಗೆ ಆಗಮಿಸಿತು. ಪೂರ್ಣಕುಂಭ, ಪಂಚವಾದ್ಯಗಳ ಸಮೇತ ವೇದಘೋಷಪೂರಿತವಾದ ಸ್ವಾಗತ ದೇವಸ್ಥಾನದ ಮುಖ್ಯದ್ವಾರದಲ್ಲಿ. ವಯಸ್ಸಾಗುತ್ತಿದ್ದರೂ ತೇಜಸ್ಸು, ಗಾಂಭೀರ್ಯಗಳಿಂದ ಕೂಡಿದ ಚಕ್ರವರ್ತಿಗಳು ಕೆಂಪು ರೇಷ್ಮೆಯ ಮಗುಟವುಟ್ಟು, ಬಿಳಿಯ ರೇಷ್ಮೆಯ ಉತ್ತರೀಯವನ್ನು ಹೊದ್ದು ಬಂದಿದ್ದರು. ದೇವರ ಸನ್ನಿಧಿ, ಹಾಗಾಗಿ ಕಿರೀಟವಿಲ್ಲ, ಬಿರುದುಗಳ ಕೂಗಿಲ್ಲ. ಕೈಜೋಡಿಸಿ ಗುಡಿಯನ್ನು ಪ್ರವೇಶಿಸಿದರು. ಭಕ್ತಿಯಿಂದ ಕೆಲಹೊತ್ತು ತುಂಬೇಶ್ವರನ ಸನ್ನಿಧಿಯಲ್ಲಿ ಕಣ್ಮುಚ್ಚಿ ಕುಳಿತು ಧ್ಯಾನಮಾಡಿದರು. ಪ್ರದಕ್ಷಿಣೆ ಹಾಕಿ, ಮಂಗಳಾರತಿ ತೀರ್ಥಪ್ರಸಾದಗಳನ್ನು ಸ್ವೀಕರಿಸಿ, ಕೊಂಚ ಹೊತ್ತು ಕುಳಿತ ಶಾಸ್ತ್ರ ಮಾಡಿ ಪ್ರಭುಗಳು ಅರಮನೆಗೆ ಮರಳಲು ಸಿದ್ಧರಾದರು.

ಇದೆಲ್ಲ ಮಾಮೂಲಾಗಿ ನಡೆಯುವ ಚಟುವಟಿಕೆಗಳೇ. ಆದರೆ ಪ್ರಭುಗಳ ಸವಾರಿ ದೇವಸ್ಥಾನದ ಹೊರಗೆ ಬಂದು ಸ್ವಲ್ಪ ದೂರ ಚಿತ್ತೈಸಿದೆ. ದಾರಿಯ ಮಗ್ಗುಲಲ್ಲಿಯೇ ಒಂದು ಹುಣಸೆಯ ಮರ ಎತ್ತರವಾಗಿತ್ತು, ಹಳೆಯಕಾಲದ್ದು. ಅವರ ರಥ ಹಾದುಹೋದರೆ ಎಡಗೈಯಲ್ಲಿ ಮರವನ್ನು ಒಳಗಿದ್ದುಕೊಂಡೇ ಸವರಬಹುದು ಎಂಬಂತೆ ದಾರಿಯ ಬದಿಯಲ್ಲಿಯೇ ಬೆಳೆದ ಮರ. ಅದರ ಕೊಂಬೆಗಳು ದಾರಿಯ ಮಧ್ಯದವರೆಗೆ ಮೇಲಿನಿಂದ ಕೊಡೆ ಹಿಡಿದಿದ್ದವು, ದಾರಿಯ ಮಧ್ಯದಲ್ಲಿಯೇ ಚಾಚಿದ ಕೊಂಬೆಯೊಂದಕ್ಕೆ ಕಟ್ಟಿದಂತೆ ಒಂದು ಅಗಲವಾದ ಬಟ್ಟೆಯ ತುಂಡು ಜೋತಾಡುತ್ತಿತ್ತು. ಸವಾರಿ ದೇವಸ್ಥಾನದ ಕಡೆಗೆ ಸಾಗಿದಾಗ ಆ ಬಟ್ಟೆಯನ್ನು ಅಲ್ಲಿ ಯಾರೂ ಕಂಡಿರಲಿಲ್ಲ. ಎಲ್ಲಿಂದಲೋ ಗಾಳಿಗೆ ಹಾರಿಬಂದು ಅಲ್ಲಿ ಬಿದ್ದಿದೆ ಎನ್ನುವಂತೆಯೂ ಇಲ್ಲ. ಏಕೆಂದರೆ ಬಟ್ಟೆಯ ತುದಿಯನ್ನು ಮರದ ಕೊಂಬೆಗೆ ದಾರವೊಂದರಿಂದ ಕಟ್ಟಿದಂತಿದೆ. ರಥವು ಮರದ ಬಳಿ ಬರುವವರೆಗೂ ಅದನ್ನು ನಿರೀಕ್ಷಿಸದಿದ್ದುದರಿಂದ, ಆ ಬಟ್ಟೆಯ ಆಗಲವಾದ ತುಂಡು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಅದು ಕಣ್ಣಿಗೆ ಬೀಳುವ ಹೊತ್ತಿಗೆ ಪ್ರಭುಗಳ ರಥ ಸನಿಹವಾಗಿತ್ತು. ಸಹಜವಾಗಿಯೇ ರಥದೊಳಗಿದ್ದ ಪ್ರಭುಗಳಿಗೆ ರಥದ ತುದಿಯ ಕಳಶಕ್ಕೆ ತಾಗುವಂತೆ ದಾರಿಗಡ್ಡಲಾಗಿ ಜೋತುಬಿದ್ದಿದ್ದ ಬಿಳಿಯ ಬಟ್ಟೆಯ ತುಂಡು ಕಾಣಿಸಿತು. ಆವರೆಗೂ ಪ್ರಸನ್ನವದನರಾಗಿದ್ದ ಬಿಜ್ಜಳ ಮಹಾಪ್ರಭುಗಳ ಕಣ್ಣುಗಳು ಈಗ

ಕೆಂಪೇರಿದವು. ಅವರ ಕಣ್ಣ ಬಣ್ಣ ಬದಲಾದದ್ದು ಗಮನಿಸಿದ ಅಂಗರಕ್ಷಕ ಪಡೆ ಸರ್‍ರನೆ ಕಾರ್ಯಪ್ರವೃತ್ತವಾಗಿ ಆ ಬಟ್ಟೆಯನ್ನು ಕೊಂಬೆಯಿಂದ ಕಿತ್ತರು.

"ಏನದು ಬಟ್ಟೆಯ ತುಂಡು?" ಪ್ರಭುಗಳು ಬೇಸರದಿಂದ ಹಿಂಬಾಲಿಸುತ್ತಿದ್ದ ಮನೆವೆರ್ಗಡೆಗಳನ್ನು ಪ್ರಶ್ನಿಸಿದರು.

"ಸಾಧಾರಣವಾದ ಬಟ್ಟೆಯೇ ಮಹಾಪ್ರಭು. ಆದರೆ ಅದರಲ್ಲಿ ಏನೋ ಬರೆದಂತಿದೆ. ಪ್ರಭುಗಳ ಚಿತ್ತಕ್ಕೆ ಅರ್ಪಿಸಲು ಅದಕ್ಕಾಗಿ ಹೇಳಿಕಳಿಸಿದ್ದೇನೆ." ಬಾಗಿ ದೀನಧ್ವನಿಯಿಂದ ಮನೆವೆರ್ಗಡೆಗಳು ಅರಿಕೆ ಮಾಡಿದರು.

ರಥ, ಮೆರವಣಿಗೆ ಸ್ವಲ್ಪ ಹೊತ್ತು ನಿಲ್ಲಲೇಬೇಕಾದ ಪರಿಸ್ಥಿತಿ. ಏಕೆ ನಿಂತಿತೆಂದು ಮೆರವಣಿಗೆಯಲ್ಲಿ ಹಿಂದೆ ಬರುತ್ತಿದ್ದವರಿಗೆ ಅರ್ಥವಾಗಲು ಕೊಂಚ ಸಮಯ ಬೇಕಾಯಿತು. ವಿಷಯ ತಿಳಿದ ಮೇಲೆ ಎಲ್ಲರ ಮುಖದ ಮೇಲೂ ಆತಂಕ. ಏನು ಬಟ್ಟೆಯ ತುಂಡೋ ಏನೋ ಅದು. ಚೇಷ್ಟೆಗಾಗಿ ಮಾಡಿದ್ದೋ, ಯಾವನೋ ದುಷ್ಟ ತನ್ನ ಮಾಸಲು ಬಟ್ಟೆಯನ್ನು ಕಟ್ಟಿ ಪ್ರಭುಗಳನ್ನು ಅಪಮಾನಗೊಳಿಸಲು ಮಾಡಿದ್ದೋ ಎಂಬ ಅಳಕು. ಆದರೆ ವಿಷಯ ತಿಳಿದ ಮೇಲೆ ತೀರ ಅಂತಹ ಅಳಕು ಇಲ್ಲವಾಯಿತು. ಅದು ಹಳೆಯ ಬಟ್ಟೆಯೇನಲ್ಲ, ಹೊಸತೇ ಬಿಳಿಯ ಬಟ್ಟೆ. ಅದರ ಮೇಲೆ ತುಂಬ ದುಂಡಾಗಿ ಎನ್ನುವಂತಲ್ಲವಾದರೂ, ಓದಬಹುದಾದ ಕನ್ನಡಲಿಪಿಯಲ್ಲಿ ಬರೆದ ಸಾಲುಗಳಿವು : "ಹೊಲೆಯ ಬ್ರಾಹ್ಮಣಿಯನ್ನು ಮದುವೆಯಾದರೇನಂತೆ, ಹೆಂಡದ ಮಡಕೆಯ ಹೊರಗೆ ತೊಳೆದಂತೆ!"

ಚೇಷ್ಟೆಯ, ಅವಮಾನದ ಉದ್ದೇಶ ಆ ಬಟ್ಟೆಯನ್ನು ಕಟ್ಟುವ ಹಿಂದಿನ ಉದ್ದೇಶವಾಗಿಲ್ಲದಿರುವುದು ಸ್ಪಷ್ಟವಾಗಿತ್ತು. ಅದರಿಂದ ಎಲ್ಲರೂ ಸಮಾಧಾನದ ನಿಟ್ಟುಸಿರು ಬಿಡುವಂತಾಯ್ತು. ಪ್ರಭುಗಳಿಗೂ ನಿರಾಳವೆನಿಸಿರಬೇಕು, ಆದರೆ ಈ ಬಟ್ಟೆ ಗುಡಿಯ ಕಡೆ ಹೋಗುವಾಗ ಇಲ್ಲದ್ದು ಈಗ ನೇತಾಡಲು ಸಾಧ್ಯವಾದುದೆಂತು! ಮಾಯಾಮಂತ್ರ ನಡೆಯಲು ಸಾಧ್ಯವೇ. ಎಲ್ಲರ ಗಮನ ಗುಡಿಯ ಕಡೆಗಿರುವಾಗ, ಪ್ರಭುಗಳು– ದೇವರ ಬಗ್ಗೆಯೇ ಜನರು ಯೋಚಿಸುತ್ತಿರುವಾಗ, ಎಲ್ಲರೂ ಗುಡಿಯಲ್ಲಿ ಸೇರಿರುವಾಗ, ಯಾರೂ ಬೀದಿಯಲ್ಲಿ ಇಲ್ಲದ್ದನ್ನು ಕಂಡು ಯಾರೋ ಕಟ್ಟಿರಬೇಕು. ಮರ ಹತ್ತಿ ಕೊಂಬೆಯ ಚಾಚಿದ ತುದಿಗೆ ಕಟ್ಟುವುದು ಅಸಾಧ್ಯ. ಹಾಗಾಗಿ ನೇರವಾಗಿ ಕಟ್ಟಿರಬೇಕು. ಏಣಿ ತಂದು ಕಟ್ಟಿರಬಹುದು, ಆದರೆ ಆ ಕೆಲಸ ಒಬ್ಬರಿಂದ ಅಸಾಧ್ಯ. ಒರಗಿಸಲು ಸಾಧ್ಯವಿಲ್ಲದ್ದರಿಂದ ಕೆಳಗೆ ಒಬ್ಬ ಏಣಿ ಹಿಡಿದಿರಬೇಕು, ಮೇಲೇರಿದ ಮತ್ತೊಬ್ಬ ಅದರ ತುದಿಯೊಂದನ್ನು ಕೊಂಬೆಗೆ ಸೇರಿಸಿ ದಾರದಿಂದ ಬಿಗಿದಿರಬೇಕು ಅಥವಾ ವ್ಯಕ್ತಿಯೊಬ್ಬನ ಭುಜಗಳ ಮೇಲೆ ನಿಂತು ಮತ್ತೊಬ್ಬ ತನ್ನ ಕೈಚಾಚಿದರೂ ಈ ಕೆಲಸ ಸಾಧ್ಯವಾಗಬಹುದು. ಇದಕ್ಕೆಷ್ಟು ಕಾಲ ಬೇಕು ಮಹಾ; ಒಂದೆರಡು ಕ್ಷಣಗಳು ಸಾಕು.

ದೇವರ ದರ್ಶನಕ್ಕೆ ಹೋಗುವಾಗಿನ ಸಂಭ್ರಮವುಳಿಯದಿದ್ದರೂ ತೀರ ಕಳವಳಕ್ಕೆ ಕಾರಣವಿರಲಿಲ್ಲ. ಹೊಸ ಬಟ್ಟೆಯ ತುಂಡು, ಯಾರೊ ಉಟ್ಟು

ಮಾಸಲಾದದ್ದಲ್ಲ. ಜೊತೆಗೆ ಏನೋ ಬರೆದಿದ್ದಾರೆ ಬೇರೆ. ಅದನ್ನು ನೋಡಿದರೆ, ಪ್ರಭುಗಳ ಗಮನಕ್ಕೆ ಬರಬೇಕೆಂಬ ಉದ್ದೇಶದಿಂದಲೇ ಈ ಕೆಲಸ ಮಾಡಿರುವಂತೆ ತೋರುತ್ತದೆ. ನೇರವಾಗಿ ಪ್ರಭುಗಳಿಗೆ ಅದನ್ನು ಒಪ್ಪಿಸಲು ಸಾಧ್ಯವಿರದಿದ್ದರೂ, ಅಧಿಕಾರಿಗಳಲ್ಲಿ ಸಲ್ಲಿಸಬಹುದಾಗಿತ್ತು. ಆದರೂ ಯಾರಿಗೂ ತಿಳಿಯದಂತೆ ಹೀಗೇಕೆ ಮಾಡಿದರು? ಬರಹ ಯಾವುದೇ ವ್ಯಕ್ತಿಯನ್ನು ನೇರವಾಗಿ ಹೆಸರಿಸುವುದಿಲ್ಲ; ಹಾಗೆ ನೋಡಿದರೆ, ಅಲ್ಲಿನ ವಾಕ್ಯಗಳಿಗೆ ಅರ್ಥ ಸುಲಭವಾದರೂ, ಅವರ ಹಿಂದಿನ ಉದ್ದೇಶ ಗೊತ್ತಾಗುವುದಿಲ್ಲ. ಅರಮನೆಗೆ ಬಿನ್ನಹ ಮಾಡಿಕೊಳ್ಳಬೇಕಾದರೆ ವಿಷಯವನ್ನು ನೇರವಾಗಿ ನಿರೂಪಿಸಬೇಕು. ಈ ಬರಹದ ರೀತಿ ಅಂತಹ ನೇರವರ್ತನೆಯದಲ್ಲ. ಪ್ರಭುಗಳ ಗಮನಕ್ಕೆ ಬರಬೇಕು, ಅದನ್ನು ಮಾಡಿದವರಾರೆಂಬುದು ತಿಳಿಯಬಾರದು, ವಿಷಯವನ್ನು ಬರವಣಿಗೆಯ ಆಧಾರದ ಮೇಲೆ ಕಷ್ಟಪಟ್ಟು ಊಹಿಸಬೇಕು.

ವಾರಿಯಲ್ಲಿಯೇ ಎಲ್ಲವೂ ತೀರ್ಮಾನವಾಗಲಾರದಲ್ಲ. "ಅದನ್ನು ಜೋಪಾನವಾಗಿರಿಸಲು ಹೇಳಿ" ಪ್ರಭುಗಳು ಮನೆವೆರ್ಗಡೆಗಳಿಗೆ ಆಜ್ಞೆ ಮಾಡಿದರು. ಅದನ್ನು ಹೇಳಲೇಬೇಕಾಗಿರಲಿಲ್ಲ. ವಿಚಿತ್ರವೆನ್ನಿಸುವ ಪರಿಸ್ಥಿತಿಗೆ ಕಾರಣವಾದ ಆ ಬಟ್ಟೆಯನ್ನು ಸಹಜವಾಗಿಯೇ ಭದ್ರವಾಗಿ ಮಡಿಸಿ ಇರಿಸಲಾಗಿತ್ತು. ಅಲ್ಲದೆ, ಅದನ್ನು ಮುಂದೆ ಪರಿಶೀಲಿಸಬೇಕಾಗಿದೆಯಲ್ಲ! ಆದರೂ ಎಲ್ಲರ ಮನಸ್ಸಿನಲ್ಲೂ ಒಂದು ಪ್ರಶ್ನೆ ಉಳಿದೇ ಉಳಿಯಿತು. ಅದನ್ನು ಬರೆದು ಹಾಕಿದವರು ಯಾರು, ಯಾಕೆ? ಏನೋ ಕಲ್ಯಾಣದಲ್ಲಿ ಹಿಂದೆಂದೂ ಆಗದ್ದು ಆಗಿತ್ತು. ಇದನ್ನು ಶಕುನವೆಂದು ಭಾವಿಸಬೇಕೆ? ಸಹಜವಾಗಿ ನಡೆದದ್ದೇನಲ್ಲ, ಮನುಷ್ಯನೇ ಯಾರೋ ಕಟ್ಟಿರುವುದು ಸ್ಪಷ್ಟವಾಗಿದೆ. ಪ್ರಭುಗಳನ್ನೂ ಒಳಗೊಂಡ ಹಾಗೆ ಎಲ್ಲರಿಗೂ ಏನೋ ವಿಚಿತ್ರವಾಯಿತಲ್ಲ ಎಂಬ ಅನಿಸಿಕೆಯೇ ಉಳಿಯಿತು.

## ೮

ಎಷ್ಟೋ ಮಂದಿ ಶರಣರು ನನ್ನನ್ನು ಕೇಳಿದ್ದಾರೆ, ಕೆಲವರು ಝುಂಕಿಸಿಯೂ ಇದ್ದಾರೆ; ಭವಿಯಾದ ಬಿಜ್ಜಳನಲ್ಲಿ ನಾನು ಕೆಲಸಕ್ಕೆ ಇರುವುದು ಸರಿಯೇ ಎಂದು. ಆಡುವುದೊಂದು ಮಾಡುವುದದೊಂದು ಎಂದು ಆಡಿಕೊಂಡಿದ್ದಾರೆ. ಆದರೆ ಅದರಲ್ಲಿ ನನಗೆ ತಪ್ಪೇನೂ ಕಾಣುವುದಿಲ್ಲ. ಬಿಜ್ಜಳ ಭವಿಯಿರಬಹುದು, ಆದರೆ ನನ್ನ ಮಟ್ಟಿಗೆ ಈವರೆಗೆ ಒಳ್ಳೆಯ ಸ್ನೇಹಿತನೂ ಆಗಿದ್ದಾನೆ. ಇನ್ನೊಬ್ಬರಾಗಿದ್ದರೆ ಚಾಡಿ ಮಾತುಗಳಿಗೆ ಕಿವಿಗೊಟ್ಟು ನನ್ನನ್ನು ಕಳಿಸುತ್ತಿದ್ದರು, ಅಥವಾ ನಾನೇ ಕೆಲಸ ಬಿಟ್ಟು ಬರುವಂತಹ ಪರಿಸ್ಥಿತಿ ನಿರ್ಮಾಣ ಮಾಡುತ್ತಿದ್ದರು. ಮೊದಲಿನಿಂದಲೂ ಬೊಕ್ಕಸದ ಮನೆಯಲ್ಲಿಯೇ ನನ್ನ ಕೆಲಸ; ಹೀಗಾಗಿ ಅಲ್ಲಿಯ ವಿಚಾರವೆಲ್ಲ ಗೊತ್ತು. ನನ್ನ ಕರ್ತವ್ಯವನ್ನು ನಾನು ಮಾಡಿ, ಅದಕ್ಕೆ ಪ್ರತಿಫಲವನ್ನು ಪಡೆಯುವುದು ನನ್ನ ಹಕ್ಕಲ್ಲವೇ? ಇವರೆಲ್ಲ ಯಾಕೆ ಹೀಗಾಡುತ್ತಾರೆಂದು ಅರ್ಥವೇ ಆಗುವುಧಿಲ್ಲ, ಇಡೀ ಜಗತ್ತಿನಲ್ಲಿರುವವರೆಲ್ಲ ಯಾವ ಕಾಲಕ್ಕಾದರೂ ಭಕ್ತರಾಗಿ ಮಾರ್ಪಟ್ಟರೇ? ಭವಿಗಳಿರದ ಪ್ರಪಂಚದಲ್ಲಿ ಮಾತ್ರ ನಾನಿರುವುದೆಂದರೆ ಸಾಯಬೇಕು, ಅಷ್ಟೆ. ಉಳಿದ ಜನರೊಡನೆ ಇದ್ದ ಮಾತ್ರಕ್ಕೆ ಅವನಂತೇನೂ ಆಗಿಬಿಡಬೇಕಾಗಿಲ್ಲವಲ್ಲ. ಹಾಗೆ ನೋಡಿದರೆ ನನ್ನ ಕೆಲಸದಿಂದಾಗಿ ನನಗೆ ವಿಶೇಷ ಮಹತ್ವವಿದೆ. ನೂರಾರು ಜನರನ್ನು ಕಾಣಲು, ನನ್ನ ಕನಸನ್ನು ಇತರರೊಂದಿಗೆ ಹಂಚಿಕೊಳ್ಳಲು ಸಾಧ್ಯವಾಗಿದೆ. ಕನಸು ತಕ್ಕ ಮಟ್ಟಿಗೆ ಪ್ರಸಾರವಾಗಿ ವಾಸ್ತವದ ಸ್ಥಿತಿಯೂ ಒದಗಿದೆ. ಎಷ್ಟು ಆಗುತ್ತದೋ ಅಷ್ಟರಮಟ್ಟಿಗೆ ಇತರರನ್ನು ಮಾರ್ಪಡಿಸಲು ಪ್ರಯತ್ನಿಸಿದರಾಯಿತು; ಸಾಧ್ಯವಾಗದಿದ್ದರೆ, ನನ್ನ ಮಟ್ಟಿಗೆ ನಾನು ಕೆಡದೆ ಉಳಿದರಾಯಿತಲ್ಲ. ಅಷ್ಟಾದರೂ ದೊಡ್ಡ ಸಾಧನೆಯೇ ತಾನೇ! ನಾನು ಬಿಜ್ಜಳನ ಜೋಳವಾಳಿಯಾದರೂ, ಶಿವನ ವೇಳೆವಾಳಿಯಾಗಿರುವವನು. ನಿಷ್ಪಕ್ಷಪಾತವಾಗಿ ಪರಿಶೀಲಿಸಿದರೆ ಬಿಜ್ಜಳ ನನ್ನ ಮಟ್ಟಿಗೆ ನ್ಯಾಯವಾಗಿಯೇ ವರ್ತಿಸಿದ್ದಾನೆ.

ಆತನದೂ ನನ್ನದೂ ಸುಮಾರು ಸಮವಯಸ್ಸು ಎನ್ನಬಹುದು. ನನಗಿಂತ ಅವನೇ ಕೊಂಚ ಚಿಕ್ಕವನಾಗಿ ಕಾಣುತ್ತಾನೆ. ವಾಸ್ತವವಾಗಿ ನಾನು ದೊಡ್ಡವನಲ್ಲದಿರಬಹುದು. ಆದರೆ ಸದಾ ರಾಜಕಾರಣದಲ್ಲಿ ತೊಡಗಿ, ವೈಯುಕ್ತಿಕ ವಿಚಾರದಲ್ಲಿ ಸಿಕ್ಕಿಕೊಳ್ಳದ ಅವನಿಗೆ ದೇಹ ಅಷ್ಟು ಭಾರವೆನಿಸಲಿಲ್ಲವೇನೋ. ನನಗಾದರೆ ಒಂಟಿಯಾಗಿ ಮಾಡುವ ಯೋಚನೆಯ ಕಾಲವೇ ಹೆಚ್ಚು. ಎಷ್ಟೋ

ವೇಳೆ ಸಮಾಜದ ಬಗ್ಗೆ ನಾನು ಮಾಡುವ ಯೋಚನೆ ನನ್ನ ಸ್ವಂತ ಬದುಕಿನಂತೆಯೇ ಆಪ್ತವಾಗಿಬಿಡುವ ಕಾರಣ ನನ್ನ ಮನಸ್ಸಿಗೆ ಅಂಟಿಕೊಂಡುಬಿಟ್ಟು ನನ್ನ ದೇಹದ ಮೇಲೂ ಅದು ಪರಿಣಾಮ ಮಾಡಿಬಿಡಬಹುದು. ಹಾಗೆ ನೋಡಿದರೆ ನನಗೂ ಮುಪ್ಪಡರಿತೆಂದು ನನಗನ್ನಿಸುತ್ತಿಲ್ಲ. ನಾನು ಕಟ್ಟಬಯಸಿದ ಸಮಾಜ ಯಾಕೆ ಇನ್ನೂ ಅಂದುಕೊಂಡಂತೆ ಆಗಿಲ್ಲ, ಎಷ್ಟೋ ಸಲ ನನ್ನವರೆನ್ನಿಸುವ ಜನ ನನ್ನ ಕನಸಿಗೆ ವಿರುದ್ಧವಾಗಿ ವರ್ತಿಸುವರಲ್ಲ, ಮುಂದೇನಾಗುವುದೋ ಎಂಬ ಯೋಚನೆಯಿಂದಾಗಿ ನನ್ನ ಹೃದಯ ಹಿಂಡಿದಂತಾಗುವುದು, ನಿಜ. ನನ್ನ ಬಯಕೆಯ ಕನಸು ಮಣ್ಣುಗೂಡುವುದೇನೋ ಎಂಬುದರಿಂದಾಗಿ ಮನಸ್ಸು ಚಡಪಡಿಸುವುದು ನಿಜ. ಮಾಡಬೇಕಾದ್ದನ್ನೆಲ್ಲ ನನ್ನ ಜೀವಿತಕಾಲದಲ್ಲಿ ಮಾಡಲಾರೆನೇನೋ ಎಂಬ ಅಳುಕು ಮೂಡುವುದು. ನಾನೇನಾದರೂ ಎಲ್ಲಾದರೂ ಎಡವಿದೆನೇ, ಅದಕ್ಕೆ ಕೆಲವೇಳೆ ಅಂದುಕೊಂಡದ್ದಕ್ಕೆ ವಿರುದ್ಧವಾದ ಪ್ರಸಂಗಗಳು ಉಂಟಾಗುವುದಲ್ಲ ಎಂಬ ಪರಿತಾಪ ಮೂಡುವುದೂ ನಿಜ. ಆದರೆ ಮಾಡಿದಷ್ಟು ಪ್ರಾಮಾಣಿಕತೆಯಿಂದ ಮಾಡಿದ್ದಾಯಿತು, ಮುಂದೂ ಕೊನೆಯುಸಿರಿರುವವರೆಗೆ ಹಾಗೇ ನಡೆದರಾಯಿತು, ಎಲ್ಲವನ್ನೂ ನಾನೇ ಸಾಧಿಸಿಬಿಡಬಲ್ಲೆನೆಂಬ ಅಹಂಕಾರವೇಕೆ; ಅಥವಾ ಇದನ್ನು ಅವಾಸ್ತವ ಆತ್ಮವಿಶ್ವಾಸವೆಂದು ಕರೆಯಬಹುದೇನೋ. ಎಷ್ಟಾದರೆ ಅಷ್ಟು. ಪ್ರಾಯಶಃ ಈ ಜೀವನ ರೀತಿಯೇ ಇದೆಂದು ಕಾಣುತ್ತದೆ. ಸರಿಪಡಿಸಿದಷ್ಟೂ ಒಂದಿಲ್ಲೊಂದು ಕಡೆ ತೂತು ಬೀಳುವ ಮಡಕೆ. ಇಡೀ ಮಡಕೆಯನ್ನೊಗೆದು ಹೊಸ ಮಡಕೆಯನ್ನು ಮಾಡಲು ಸಾಧ್ಯವಿಲ್ಲ, ಹಾಗಿದ್ದಿದ್ದರೆ ಇಷ್ಟು ಹೊತ್ತಿಗೆ ಪ್ರಪಂಚ ಸರಿಹೋಗಲೇಬೇಕಾಗಿತ್ತು. ನನಗಿಂತ ಮುಂಚೆ ಎಷ್ಟು ಮಂದಿ ಪ್ರಚಂಡರು ಹುಟ್ಟಿಬರಲಿಲ್ಲ? ಅವರೆಲ್ಲ ನನಗಿಂತಲೂ ಅಮೋಘವಾದದ್ದನ್ನು ಮಾಡಿಹೋದರೂ ಪ್ರಪಂಚವೇಕೆ ಹೀಗಿದೆ, ಅನ್ನಿಸುತ್ತದೆ. ಇದು ಅವರ ತಪ್ಪಿನಿಂದಾದುದಲ್ಲ, ಜಗತ್ತಿನ ಹಣೆಯಬರಹವೇ ಇಷ್ಟೇನೋ.

ಬಿಜ್ಜಳ ಸದಾ ಚಟುವಟಿಕೆಯಿಂದಿರುವ ವ್ಯಕ್ತಿ, ಆದರೆ ಆತನ ಚಟುವಟಿಕೆಯೆಂದರೆ, ತನ್ನ ಅಧಿಕಾರ ಕ್ರೋಡೀಕರಣ, ಸಾಮ್ರಾಜ್ಯ ವಿಸ್ತಾರ, ಯುದ್ಧ ಇತ್ಯಾದಿ. ಇವೆಲ್ಲ ಬೇಡವೆನ್ನಲು ಸಾಧ್ಯವೇ? ನನ್ನ ಹಾಗಿದ್ದರೆ, ಲೋಕವನ್ನು ಒಂದು ನಿಯಂತ್ರಣಕ್ಕೆ ಒಳಗುಮಾಡುವರು ಯಾರು? ರಾಜನಾಗುವವನು ಮಿಕ್ಕ ಜನಕ್ಕಿಂತ ಹೆಚ್ಚಿನ ಯೋಗ್ಯತೆಯವನೆಂದೇನೂ ನಾನು ಭಾವಿಸಲಾರೆ; ಮಿಕ್ಕೆಲ್ಲರಂತೆ ಅವನೂ ಒಬ್ಬ ವ್ಯಕ್ತಿ. ಅವನು ಸಾಮ್ರಾಜ್ಯವನ್ನಾಳುವುದು ದೈವಶಕ್ತಿಯಿಂದಲೇನಲ್ಲ, ಆದರೆ ಆಳುವ ಶಕ್ತಿ ಸಮರ್ಥನಾದ ರಾಜನಿಗೆ ವಿಶಿಷ್ಟವೆನಿಸುವ ಗುಣ ಇರಬಹುದು, ಅಷ್ಟೆ. ಹಾಡುಗಾರನಿಗೆ ಹಾಡುವ ಗುಣ, ಕಾವ್ಯ ರಚಿಸುವವನಿಗೆ ಆ ಗುಣ ಇದ್ದ ಹಾಗೆ. ಹಾಗಾಗಿ ರಾಜನೂ ಒಬ್ಬ ಮನುಷ್ಯ. ಅವನಲ್ಲಿ ಅಧಿಕಾರವಿರುವುದರಿಂದಾಗಿ ಮಿಕ್ಕವರು ಅವನನ್ನು ಓಲೈಸುತ್ತಾರೆ. ಅವನೀಯಬಹುದಾದ ಕಾಣಿಕೆಗಾಗಿ

ಆಸೆಪಟ್ಟು ಅವನನ್ನು ಹೊಗಳಬಹುದು. ಹಾಗೆ ನೋಡಿದರೆ ಕ್ಷತ್ರಿಯವೆಂಬ ವರ್ಣ ಈಗ ಉಳಿದೇ ಇಲ್ಲ. ಎಲ್ಲ ಜಾತಿ ಕಸಬುಗಳವರೂ ರಾಜರಾಗಿದ್ದಾರೆ. ರಾಜನಾದ ತಕ್ಷಣ ಅವರನ್ನು ಕ್ಷತ್ರಿಯರೆಂದೂ, ಭರತಖಂಡ ಸಮುದ್ಧರಣರೆಂದೂ, ಅವರ ವಂಶದ ಪ್ರಾರಂಭ ಕೃತಯುಗದಲ್ಲೆಂದೂ ಅವನು ದೈವಸಂಭೂತನೆಂದೂ, ದುಷ್ಟಶಿಕ್ಷಣ ಶಿಷ್ಟರಕ್ಷಣಾರ್ಥವಾಗಿ ಉದಿಸಿ ಬಂದವನೆಂದೂ ಕತೆ ಕಟ್ಟಿ ಹೇಳುವ ಬುದ್ಧವಂತರಿಂದಾಗಿ ಎಲ್ಲರೂ ದೊಡ್ಡವರಾಗಿಬಿಟ್ಟಿದ್ದಾರೆ!

ನನ್ನ ಕಣ್ಣ ಮುಂದೇ ಬಿಜ್ಜಳ ಅಧಿಕಾರದಲ್ಲಿ ಹೇಗೆ ಬೆಳೆದಿದ್ದಾನೆ! ಕೆಲವೊಮ್ಮೆ ಅದನ್ನು ನೆನಸಿಕೊಂಡಾಗ ಅತನ ಲೌಕಿಕ ಸಾಮರ್ಥ್ಯದ ಬಗ್ಗೆ ಅಚ್ಚರಿಯ ಭಾವನೆಯೂ ಮೂಡುತ್ತದೆ. ಕೂಡಲಸಂಗಮದಿಂದ ಮಂಗಳವಾಡಕ್ಕೆ ಕೆಲಸಕ್ಕಾಗಿ ಬಂದಾಗ ತರ್ದವಾಡಿ ಒಂದು ಸಾವಿರ ನಾಡನ್ನು ಆಳುತ್ತಿದ್ದವನು ಪೆರ್ಮಾಡಿರಾಯ. ಆತನೋ ಆಗಲೇ ತುಂಬ ಬಳಲಿದವನಂತೆ ಕಾಣುತ್ತಿದ್ದ. ನಾನು ಮಂಗಳವಾಡದ ಬೊಕ್ಕಸದ ಮನೆಯಲ್ಲಿ ಸಿದ್ಧರಸರ ಕೃಪೆಯಿಂದ ಕೆಲಸಕ್ಕೆ ಸೇರಿದ್ದು ವಿಕ್ರಮ ಸಂವತ್ಸರದಲ್ಲಿ. ಸುಮಾರು ಎಂಟೊಂಬತ್ತು ವರ್ಷಗಳ ನಂತರ ಬಿಜ್ಜಳನೇ ತರ್ದವಾಡಿಯ ಅರಸನಾದ ಪೆರ್ಮಾಡಿ ತೀರಿಕೊಳ್ಳಲು. ಆವರೆಗೆ ತಂದೆಗೆ ಸಹಾಯ ಮಾಡುತ್ತಿದ್ದ, ತಂದೆ ಸತ್ತಾಗ ಮಹತ್ವಾಕಾಂಕ್ಷೆಯ ಬಿಜ್ಜಳನೇ ಕ್ಷೋಣಿಪಾಲನಾದ. ಅಮೇಲೆ ಪ್ರಾರಂಭವಾಯಿತು ಅವನ ಬಿರುಗಾಳಿಯ ಬದುಕು. ಅವನು ರಾಜನಾದದ್ದು ಪಿರೋಧಿ ಸಂವತ್ಸರದಲ್ಲೆಂದು ಕಾಣುತ್ತದೆ. ಆದರೆ ಅವನ ಆಸೆ ಕನಸು ತನ್ನ ರಾಜ್ಯದ ಗಡಿಗಳನ್ನು ದಾಟುತ್ತಿತ್ತು. ಅಲ್ಲೆಲ್ಲ ತನ್ನ ಸುವರ್ಣ ವೃಷಭಧ್ವಜವನ್ನು ನೆಡಲು ಅವನ ಮನಸ್ಸು ಹಾರೈಸುತ್ತಿತ್ತು. ಬಿಜ್ಜಳ ಎಂದೂ ದುಡುಕಿದವನಲ್ಲ. ನಿಧಾನವಾಗಿ, ಯುಕ್ತಿಯಿಂದ ತನ್ನ ಕೆಲಸ ಸಾಧಿಸಬಲ್ಲ ತಂತ್ರಗಾರ. ಇದನ್ನು ರಾಜಕಾರಣದಲ್ಲಿ ಮೋಸ ಎಂದೇನೂ ಭಾವಿಸುವುದಿಲ್ಲವಲ್ಲ. ನಿಧಾನವಾಗಿ ತನ್ನ ವರ್ಚಸ್ಸನ್ನು ಬೆಳೆಸಿಕೊಂಡ.

ಬಿಜ್ಜಳ ತರ್ದವಾಡಿ ಪ್ರಭುವಾಗಿ ಪಟ್ಟಕ್ಕೆ ಬರುವ ಹೊತ್ತಿಗೆ ಕಲ್ಯಾಣದಲ್ಲಿ ಚಕ್ರವರ್ತಿಯಾಗಿದ್ದವನು ಜಗದೇಕಮಲ್ಲ. ಕಾಲಕ್ರಮೇಣ ತನ್ನ ಸಾಮಂತಿಕೆಯ ವಿಸ್ತಾರವನ್ನು ಬಿಜ್ಜಳ ಮಾಡಿಕೊಂಡ. ಸುತ್ತುಮುತ್ತಣ ಮಂಡಲಾಧಿಪತಿಗಳನ್ನೆಲ್ಲ ತನ್ನ ಅಧೀನಕ್ಕೆ ತಂದುಕೊಂಡ. ಹತ್ತು ವರ್ಷದನಂತರ ಕಲ್ಯಾಣದಲ್ಲಿ ಜಗದೇಕಮಲ್ಲ ತೀರಿಕೊಂಡು ಮುಮ್ಮಡಿ ತೈಲಪ ಚಕ್ರವರ್ತಿಯಾದದ್ದು ಬಿಜ್ಜಳನಿಗೆ ವರವಾಯಿತು. ಅತನ ಆಸೆಗೆ ರೆಕ್ಕೆ ಮೂಡಿತು. ತೈಲಪ ಪಟ್ಟಕ್ಕೆ ಬಂದ ಮೂರುನಾಲ್ಕು ವರ್ಷಗಳಲ್ಲಿ ಅಧಿಕಾರ ತೈಲಪನಲ್ಲಿದೆಯೋ ಬಿಜ್ಜಳನಲ್ಲಿದೆಯೋ ಎಂಬ ಅನುಮಾನ ಬರುವಂತೆ ಈತ ಪ್ರಬಲನಾಗಿದ್ದ. ಉಪಾಯಗಾರ ಬಿಜ್ಜಳ, ಎಲ್ಲಿ ಕಾಲಿಟ್ಟರೆ ಗಟ್ಟಿ ನೆಲ ಸಿಕ್ಕೀತೆಂಬುದನ್ನು ಬಲ್ಲವನು. ಚಕ್ರವರ್ತಿಯ ಕೈಕೆಳಗಿನ ಸೈನ್ಯವೆಲ್ಲ ಬಿಜ್ಜಳನ ಆಜ್ಞೆಗಳನ್ನು ಕಾಯುತ್ತಿತ್ತು. ಯಾರೋ ಕಾಕತೀಯರಂತೆ. ಆ ವಂಶದ ಪ್ರೋಲ ಎಂಬ ರಾಜನ ಮೇಲೆ ತೈಲಪ ಆ

ಕಡೆ ನಡೆದ. ಅದೋ ದೂರದೇಶ. ಅಲ್ಲಿ ತೈಲಪನನ್ನು ಬಂಧಿಸಲಾಯಿತು. ಚಕ್ರವರ್ತಿ ಹೊರದೇಶದಲ್ಲಿ ಸೆರೆಯಲ್ಲಿದ್ದರೆ ಅವನ ಅಧೀನ ರಾಜನಾದ ನಮ್ಮ ಬಿಜ್ಜಳ ತನ್ನ ಮಾತು ಕೇಳುತ್ತಿದ್ದ ಸೈನ್ಯಸಮೇತ ಕಲ್ಯಾಣಕ್ಕೆ ಬಂದ. ಹೇಗೋ ಕೆಲಕಾಲಾನಂತರ ಬಿಡುಗಡೆಯನ್ನು ಸಂಪಾದಿಸಿದ ತೈಲಪ ಮತ್ತೆ ಇಲ್ಲಿಗೆ ಬರಲೇ ಇಲ್ಲ. ತನ್ನ ಸ್ವಾಮಿನಿಷ್ಠನಾದ ಸಾಮಂತನ ಕೈಲಿ ತಾನು ಬದುಕಿರಲು ಸಾಧ್ಯವಿಲ್ಲವೆಂದು ಅವನಿಗೆ ಗೊತ್ತು! ಬೇರೆಲ್ಲೋ ಹೋದ. ಆಮೇಲೆ ಎಲ್ಲೆಲ್ಲೋ ಹೋದನಾಗಲಿ, ತೈಲಪ ಇಲ್ಲಿಗೆ ಬರಲು ಅವಕಾಶವಾಗಲಿಲ್ಲ. ನಿಧಾನವಾಗಿ, ಜನರು ಇತರ ಆಶ್ರಿತರು ಸಾಮಂತರು ಇವರ ಮನಸ್ಸನ್ನು ಅರ್ಥಮಾಡಿಕೊಂಡು, ಅವರ ಬೆಂಬಲಪಡೆದು ಒಂದೆರಡು ವರ್ಷದಲ್ಲಿ ತಾನೇ "ಚಾಲುಕ್ಯ ಚಕ್ರವರ್ತಿ" ಎಂದು ಶಾಸನಗಳನ್ನು ಬರೆಸಿಕೊಂಡ ಈ ಭೂಪ ಬಿಜ್ಜಳ. ಯಾವಾಗ ಎಲ್ಲರ ಕಣ್ಣಿಗೆ ಬೀಳುವಂತೆ ಇಲ್ಲಿಯ ಸಿಂಹಾಸನದ ಮೇಲೆ ಕೂತರೂ ಯಾರೂ ಸೊಲ್ಲೆತ್ತುವ ಸಾಹಸ ಮಾಡಲಿಲ್ಲವೋ, ಆಗ ಬಿಜ್ಜಳ ಎಲ್ಲ ಸಾಮ್ರಾಜ್ಯ ಸೂತ್ರಗಳನ್ನು ತನ್ನ ಕೈಲಿರಿಸಿಕೊಂಡ. ಇದು ಶೋಭನಕೃತ್ ಸಂವತ್ಸರದಲ್ಲಿ ನಡೆಯಿತೆಂಬುದು ಸ್ಪಷ್ಟವಾಗಿ ನೆನಪಿದೆ. ಆಗ ತಾನೇ ನಾವೆಲ್ಲ ಕಲ್ಯಾಣಕ್ಕೆ ಬರಬೇಕಾಗಿದ್ದು. ನನ್ನ ರಾಜ ಚಕ್ರವರ್ತಿಯಾದ ಕೂಡಲೇ ನನ್ನ ಸ್ಥಾನಮಾನ ಕೂಡ ಮೇಲಕ್ಕೇರಿತು. ಹೂವಿನ ಜೊತೆ ನಾರೂ ಸ್ವರ್ಗಕ್ಕೇರುವಂತೆ ಎಂದು ಹೇಳಬಹುದೇ? ಛೇ, ಭಕ್ತ ನಾನು, ಭವಿ ಹೂವೇ ಎಂದು ಅಭಿಮಾನಿಗಳೇ ಹೀಗಳೆಯುತ್ತಾರೆ, ಅಷ್ಟೆ.

ಆದರೆ ಒಂದು ಮಾತು ನಿಜ. ಅಧಿಕಾರವೆಲ್ಲ ಅಷ್ಟೊಂದು ತನ್ನ ಕೈ ಸೇರಿದರೂ ಬಿಜ್ಜಳ ನನ್ನನ್ನಾಗಲೀ ಇತರರನ್ನಾಗಲೀ ಹೊರಹಾಕಿ ಬೇರೆಯವರನ್ನು ನೇಮಿಸಿಕೊಳ್ಳುವ ಪ್ರಯತ್ನವನ್ನು ಮಾಡಿದವನಲ್ಲ. ತನಗೆ ತುಂಬ ಬೇಕಾದವರನ್ನು ಇಲ್ಲಿಗೇ ಕರೆತಂದ, ಉಳಿದವರನ್ನು ಅಲ್ಲಿಯೇ ಉಳಿಸಿ, ತಮ್ಮನನ್ನು ಮಂಡಲಾಧಿಪತಿಯನ್ನಾಗಿ ಮಾಡಿದ. ನನ್ನನ್ನೂ ಆತ ಇಲ್ಲಿಗೆ ಕರೆತಂದನೆಂದ ಮೇಲೆ ನಾನು ಅವನಿಗೆ ಆಪ್ತನೆಂದೇ ಅಲ್ಲವೇ ಅರ್ಥ. ಕೆಲವರು ಆಪ್ತರಾಗುವುದು ಅಂತಹವರಿಗೆ ನೇರವಾಗಿ ಸಹಾಯಮಾಡುವುದರ ಮೂಲಕ. ಆದರೆ ನಾನೋ ನನ್ನ ಕೆಲಸವೋ ಇಷ್ಟೇ. ಅವನ ರಾಜಕಾರಣದ ಬಗ್ಗೆಯೂ ಮಾತನಾಡಿದವನಲ್ಲ. ಅದಕ್ಕೇ ಎಂದು ಕಾಣುತ್ತದೆ. ನನ್ನ ಮೇಲೆ ಅವನಿಗೆ ನಂಬಿಕೆ. ಎಲ್ಲ ದೋಚಬಹುದಾದ ಕಡೆ, ಕಿಂಚಿತ್ತೂ ಊನವಿಲ್ಲದಂತೆ ಕಾಪಾಡುವ ಅಧಿಕಾರಿಯೆಂದರೆ ರಾಜನಿಗೆ ಬಹಳ ಇಷ್ಟವೆಂದು ಕಾಣುತ್ತದೆ. ತನ್ನಂತೆ ಮಹತ್ವಾಕಾಂಕ್ಷಿಗಳಲ್ಲದ ಕಾರ್ಯತತ್ಪರರ ಬಗ್ಗೆ ಇಂಥವರಿಗೆ ತುಂಬ ಅಕ್ಕರೆ. ನಾವು ತಾನೇ ಆತನ ಅಧಿಕಾರವನ್ನು ಜತನ ಮಾಡುವವರು! ಇದೂ ಒಂದು ಗುಣವೇ ಅಲ್ಲವೇ? ತನ್ನ ಅಧಿಕಾರ ಅಧಿಕವಾಯಿತೆಂದು ಎಲ್ಲರ ಮೇಲೆ ಅದರ ಪ್ರಯೋಗ ಮಾಡುವ ಬದಲು, ಅವರನ್ನು ಕಾಪಾಡಿ ತನ್ನನ್ನು ಕಾಪಾಡಿಕೊಳ್ಳುವುದೇ ಯುಕ್ತಿ. ಬಿಜ್ಜಳನದು ಇಂತಹ ಮಾರ್ಗ.

ನನ್ನ ವಯಸ್ಸಿನವನೇ ಬಿಜ್ಜಳನೂ ಎಂದೆ. ಹೀಗಾಗಿ ಮೊದಲಿನಿಂದ ನಮ್ಮಲ್ಲಿ ಒಂದು ಬಗೆಯ ಸ್ನೇಹವೇ ಇತ್ತು ಎನ್ನಬಹುದೇನೋ. ನಾನೇನೋ ಸ್ನೇಹವೆನ್ನಬಹುದು, ಆದರೆ ಆತ ನನ್ನನ್ನು ಸ್ನೇಹಿತನೆಂದು ಭಾವಿಸಬಹುದೋ ಇಲ್ಲವೋ ಎಂಬುದನ್ನು ನಾನಿದುವರೆಗೂ ಯೋಚಿಸಿಲ್ಲ. ಏನಾದರೇನು, ನಾನೆಂದೂ ಆತನಿಗೆ ಇತರರಂತೆ ನೆಲಮುಟ್ಟಿ ಬಾಗಿದವನಲ್ಲ. ಕೈಜೋಡಿಸಿಯೇ ನಾನು ಆತನಿಗೆ ಇಂದಿಗೂ ನಮಸ್ಕರಿಸುವುದು. ಆತನೂ ಹಾಗೆಯೇ ಮಾಡುತ್ತಾನೆ. ಈ ಬಗ್ಗೆ ಆತನಿಗೆ ಹಲವರು ದೂರಿರಬಹುದು, ಕಿವಿಹಿಂಡಲು ಪ್ರಯತ್ನಿಸಿರಬಹುದು. ಏಕೆಂದರೆ ನನ್ನ ಮುಂದೆಯೇ ಕೆಲವರು, ಬಿಜ್ಜಳನಿಲ್ಲದಾಗ, ನನಗೆ ಕೇಳಿಸುವಂತೆಯೇ, ಆದರೆ ಕೇಳಿಸದೆಂದು ತಿಳಿದವರಂತೆ ನಟಿಸುತ್ತ, ಇವನಿಗೆಷ್ಟು ಪೊಗರು, ಚಕ್ರವರ್ತಿಗಳ ಸಮಾನನಂತೆ ವರ್ತಿಸುತ್ತಾನೆ ಎಂದು ಅಂದುಕೊಂಡಿದ್ದಾರೆ. ನನಗೇನು, ಇಂಥ ಮಾತನ್ನೆಲ್ಲ ನಾನು ಅರಗಿಸಿಕೊಳ್ಳಬಲ್ಲೆ.

ಆದರೆ ನಾನು ಹೇಳಹೊರಟಿದ್ದು, ನನ್ನ ವಿರುದ್ಧ ಜನರು ಚಕ್ರವರ್ತಿಯಲ್ಲಿ ದೂರು ಹೇಳಬಹುದಾದುದರ ಬಗ್ಗೆಯಲ್ಲ, ಹಾಗೆ ದೂರಿದರೂ ಅದನ್ನೆಲ್ಲ ಕಿವಿಗೆ ಹಾಕಿಕೊಳ್ಳದ ಬಿಜ್ಜಳನ ಬಗ್ಗೆ. ಒಮ್ಮೆ ಹೀಗಾಯಿತು. ಇದು ನಡೆದದ್ದು ಕಲ್ಯಾಣದಲ್ಲಲ್ಲ, ಮಂಗಳವಾಡದಲ್ಲಿದ್ದಾಗ. ನಾನು ಆಗ ಬೇಗ ಬೇಗ ಅಧಿಕಾರದ ಮೆಟ್ಟಿಲೇರಿದ್ದೆ. ಸಿದ್ಧರಸರಾಗಲೇ ತೀರಿಕೊಂಡಿದ್ದರು. ನಾನಿನ್ನೂ ಹೊಸತಾಗಿ ಭಂಡಾರಿಯಾಗಿದ್ದೆ. ಯಾರಿಗಾದರೂ ಹೆಚ್ಚಿನ ಹುದ್ದೆ ಸಿಕ್ಕರೆ, ಅದೂ ಭಂಡಾರದಂತಹ ಎಲ್ಲರೂ ಬಯಸಬಹುದಾದ ಕಡೆ, ಕರುಬುವವನರಿಗೇನು ಕಡಿಮೆಯೇ? ಏನಾದರೂ ಮಾಡಿ ನನ್ನಂಥವನು ಏರಿದ ಏಣಿಯನ್ನು ಉರುಳಿಸುವ ಸನ್ನಾಹವನ್ನು ನಡೆಸುತ್ತಲೇ ಇರುತ್ತಾರೆ. ಆಗಲೂ ಹಾಗೇ ಆಯಿತು. ಜಂಗಮರ ಬಗ್ಗೆ ನಾನು ಮೊದಲಿನಿಂದ ಧಾರಾಳಿ, ಅವರು ಶರಣಸಮಾಜ ಕಟ್ಟುವವರು, ಆದ್ದರಿಂದ ಅವರನ್ನು ಸಮಾಜ ಗೌರವದಿಂದ ಕಾಣಬೇಕೆಂಬುದು ನನ್ನ ನಿಲವು. ಹಾಗಾಗಿ ಮನೆಗೆ ಬಂದ ಜಂಗಮರಿಗೆ ನಮ್ಮ ಮನೆಯಲ್ಲಿ ವಿಶೇಷ ಗೌರವ; ಅವರ ಮನಸ್ಸರಿತು ನಡೆಯಲು ಮನೆಯವರಿಗೆಲ್ಲ ಆದೇಶವಿತ್ತಿದ್ದೆ. ಹೀಗಾಗಿ ಜಂಗಮರು ಸಂತೃಪ್ತಿಯಿಂದ ಮನೆಯಿಂದ ಹೋಗುತ್ತಿದ್ದರು. ಕೆಲವರು ಹೋದೆಡೆಯೆಲ್ಲ ನನ್ನ ಕೊಡುಗೈತನವನ್ನು ಹೊಗಳಿರಬಹುದು. ಹಾಗೆ ಹೊಗಳುವುದೆಂದರೆ ಅತಿಶಯೋಕ್ತಿಯನ್ನು ತುಂಬುವುದು ತಾನೇ? ಒಂದು ಕೊಟ್ಟಿದ್ದರೆ, ಹತ್ತು ಎಂದಿರಬಹುದು. ವಿಶ್ವಾಸವಿದ್ದ ಕಡೆ ತಾಮ್ರದ್ದು ಚಿನ್ನವೆನ್ನಿಸಬಹುದು. ಹಾಗೇ ಆಯಿತೇನೋ ಅಥವಾ ಅದರ ವಿರುದ್ಧವೂ ಆಗಿರಬಹುದು. ನನ್ನ ಉಚ್ಛ್ರಾಯದ ಬಗ್ಗೆ ಕೆಂಗಣ್ಣು ಇರುವವರಿಗೆ ನಾನು ದಾನಮಾಡಿದ ಪಾತ್ರೆ ತಾಮ್ರದ್ದಾಗಿದ್ದರೂ ಚಿನ್ನದ್ದೆನಿಸಿರಬಹುದು. ಎರಡೂ ರೀತಿಯಲ್ಲಿ ನನ್ನ ಧಾರಾಳತನ ಹೆಚ್ಚಳ ಪಡೆದವು. ಹೀಗಾಗಿ ನನ್ನ ಯೋಗ್ಯತೆಗೆ ಮೀರಿ ನಾನು ನೀಡುತ್ತಿದ್ದೇನೆ, ಜಂಗಮ ದಾಸೋಹ ಮಾಡುತ್ತಿದ್ದೇನೆ ಎಂಬ ವದಂತಿ ಹಬ್ಬಿತು. ಯೋಗ್ಯತೆ ಮೀರಿದಂತೆ

ಕೊಡಬೇಕಾದರೆ ಆ ದ್ರವ್ಯವೆಲ್ಲ ಭಂಡಾರದ್ದೇ ಇರಬೇಕಲ್ಲವೇ? ಕೆಲಸ ಮಾಡುತ್ತಿರುವುದು ಭಂಡಾರದಲ್ಲಿಯೇ ಆದ್ದರಿಂದ ಕೈಯಿಟ್ಟ ಕಡೆ ರಾಜ್ಯದ ಹಣ ಸಿಕ್ಕುತ್ತದೆ, ನಾನು ದೋಚುತ್ತಿದ್ದೇನೆ ಎಂಬ ಅಪವಾದವನ್ನು ಕೆಲವರು ಹೊರಿಸಿದರು, ನೇರವಾಗಿ ಅಲ್ಲ, ಬಿಜ್ಜಳರಾಜನಲ್ಲಿ ದೂರಿನ ರೂಪದಲ್ಲಿ.

ಆ ಸನ್ನಿವೇಶದಲ್ಲಿ ಬಿಜ್ಜಳ ನಡೆದುಕೊಂಡ ರೀತಿ ಯಾವ ರಾಜನೂ ನಡೆದುಕೊಳ್ಳಬೇಕಾದ ಆದರ್ಶ ರೀತಿಯೇ ಎಂದು ನನಗನ್ನಿಸುತ್ತದೆ. ಒಮ್ಮೆ ನನ್ನನ್ನು ಅರಮನೆಗೆ ಕರೆಸಿಕೊಂಡ ಬಿಜ್ಜಳ ರಾಯ "ನಿಮ್ಮ ಮೇಲೆ ಸ್ವಜನ ಪಕ್ಷಪಾತದ ಆರೋಪವಿದೆ" ಎಂದರು. "ನಮ್ಮ ಮನೆಯಲ್ಲಿ ನನಗೆ ಬೇಕಾದ ಜನರನ್ನು ಸತ್ಕರಿಸುವುದು ನನ್ನ ಹಕ್ಕಲ್ಲವೇ, ಸ್ವಾಮಿ?" ಎಂದೆ. "ಅದು ಸರಿ, ಬಸವಣ್ಣನವರೇ, ನಿಮ್ಮ ಮೇಲೆ ಭಂಡಾರದ ಹಣದ ದುರುಪಯೋಗದ ಆಪಾದನೆಯಿದೆಯಲ್ಲ" ಎಂದರು. "ಅದು ಆಪಾದನೆ ತಾನೇ, ತಮ್ಮ ನಿರ್ಣಯವಲ್ಲವಲ್ಲ" ಎಂದೆ. "ಸದ್ಯಕ್ಕೆ ಆಪಾದನೆ. ಅದರ ತನಿಖೆಯಾಗಬೇಕು, ಸಾಬೀತಾದರೆ ಆಗದು ಶಿಕ್ಷಾರ್ಹ ಅಪರಾಧ" ಎಂದರು. ಈ ಮಾತುಗಳು ನಡೆಯುವಾಗ ಇತರ ಕೆಲವರೂ ಇದ್ದರು. ಈಗ ನನಗೆನ್ನಿಸುತ್ತದೆ ಬಿಜ್ಜಳ ಬೇಕೆಂದೇ ಇತರ ಕೆಲವರ ಮುಂದೆ ಹೀಗೆ ಆರೋಪ ಹೊರಿಸಿದನೆಂದು. "ತನಿಖೆಯಾಗಲಿ, ತಪ್ಪಾಗಿದ್ದರೆ ಶಿಕ್ಷೆಯೂ ಆಗಲಿ" ಎಂದೆ ನಗುತ್ತ. "ಆಯಿತು" ಎಂದು ಆಗ ಮಾತು ಮುಗಿಸಿದ್ದು.

ಈ ವಿಚಾರದ ಪ್ರಸ್ತಾಪವಾದಾಗ "ಪದತ್ಯಾಗ ಮಾಡಿ, ಶಿವ ಇತ್ತಿರುವುದೇ ಸಾಕು, ಅಪ್ಪಯ್ಯ ಮಾಡಿಟ್ಟ ಆಸ್ತಿಯಿದೆಯಲ್ಲ, ಜೀವನ ಮಾಡುವುದು ಕಷ್ಟವೇ" ಎಂದು ಗಂಗೆ–ನೀಲರಿಬ್ಬರೂ ಎಂದರು. ಅವರಿಗೆ ನನ್ನ ಮೇಲೆ ವಿನಾಕಾರಣ ರಾಜ ಆರೋಪ ಹೊರಿಸಿದ್ದಾನೆಂಬ ಮುನಿಸು. ನನ್ನನ್ನು ಸ್ಥಾನಚ್ಯುತನನ್ನಾಗಿ ಮಾಡಲೋಸುಗವೇ ಬಿಜ್ಜಳ ಈ ಉಪಾಯ ಮಾಡುತ್ತಿದ್ದಾನೆಂದು ಅವರಿಗೆ ಅನುಮಾನ. ಆದರೆ ನನಗೆ ಹಾಗನ್ನಿಸಲಿಲ್ಲ. ರಾಜನೆಂದರೆ ನನ್ನ ವಹಿಸಿಕೊಂಡು ಮಾತಾಡಬೇಕೆ? ನಾನು ತಪ್ಪು ಮಾಡಿಲ್ಲವೆಂದು ಅವನಿಗೆ ಮನವರಿಕೆಯಾಗಿದ್ದರೂ ಬಹಿರಂಗವಾಗಿ ಎಲ್ಲವೂ ನಿರ್ಣಯವಾಗಬೇಕೆಂಬುದು ಅವನ ಮನದದಿಂಗಿತವಾಗಿರಬಹುದು. ನಾನೆಷ್ಟು ವಿವರಿಸಿದರೂ ಮಡದಿಯರು ಒಪ್ಪರು. ಕೊನೆಗೆ ಹೇಳಿದೆ: "ಈಗ ನಾನೇ ಪದತ್ಯಾಗ ಮಾಡಿದರೆ, ವಿಚಾರಣೆಗೆ ಹೆದರಿ ಹೋದನೆಂದು ಅನ್ನುವುದಿಲ್ಲವೇ? ವಿಚಾರಣೆ ನಡೆದರೆ ನನ್ನ ನಿಸ್ಪೃಹತೆ ಎಲ್ಲರಿಗೆ ಜಾಹೀರಾಗುವುದಿಲ್ಲವೇ? ಬೇಸರ ಉಳಿದಿದ್ದರೆ ನಿರಪರಾಧಿಯೆನಿಸಿಕೊಂಡೇ ಪದತ್ಯಾಗ ಮಾಡಬಹುದಲ್ಲ". ಕೊನೆಗೂ ಸುಮ್ಮನಾದರು.

ರಾಜನು ಒಳಗೆ ಏನು ಮಾಡಿದನೋ. ಅಂತೂ ಮೂವರು ಹಿರಿಯ ಕರಣಿಕರ ಸಮಿತಿ ನೇಮಕವಾಯಿತು. ರಾಜ್ಯ ಬೊಕ್ಕಸದ ಎಲ್ಲ ಲೆಕ್ಕಪತ್ರಗಳ ತನಿಖೆಯಾಗಬೇಕೆಂದು ರಾಜಾಜ್ಞೆಯಾಯಿತು. ಬೊಕ್ಕಸದ ಹಣ ದುರುಪಯೋಗವಾಗಿದೆಯೇ? ಆಗಿದ್ದರೆ ಎಷ್ಟು ಮೊತ್ತದ್ದು? ಯಾವ ಹಂತದಲ್ಲಿ

ನಡೆದಿವೆ? ಆ ಹಂತದ ಮೇಲ್ವಿಚಾರಕರನ್ನು ಶಿಕ್ಷೆಗೆ ಗುರಿಪಡಿಸಬಹುದೇ? ಅಥವಾ ಎಲ್ಲದಕ್ಕೂ ಭಂಡಾರಿಗಳೇ ಹೊಣೆಗಾರರಾಗುತ್ತಾರೆಯೇ? ಈ ಬಗ್ಗೆ ತನಿಖೆಯ ವಿವರಗಳನ್ನು ಇಂತಿಷ್ಟು ದಿನಗಳಲ್ಲಿ ರಾಜನಿಗೆ ಸಲ್ಲಿಸಬೇಕೆಂದು ಆದೇಶವಾಯಿತು.

ಇನ್ನೇನು ಸಮಿತಿಗೆ ನೀಡಿದ ಕಾಲಾವಧಿ ಮುಗಿಯುತ್ತ ಬಂದಿತು, ಅವರ ವರದಿಯು ಸಿದ್ಧವಾಗುತ್ತಿದೆಯೆಂದು ತಿಳಿಯುತ್ತಲೇ ಬಿಜ್ಜಳರಾಜನು ಒಂದು ದಿನ ದರ್ಬಾರಿಗೆಂದು ನಿಗದಿಪಡಿಸಿ, ಆದಿನ ಎಲ್ಲ ಅಧಿಕಾರಿಗಳೂ ಅಲ್ಲಿ ಹಾಜರಿರಬೇಕೆಂದು ನಿರೂಪ ಹೊರಡಿಸಿದ. ಈ ಹೊತ್ತಿಗಾಗಲೇ ಅರಮನೆಯಲ್ಲೆಲ್ಲ ಗುಸುಗುಸು. ತನ್ನನ್ನು ಕಂಡು ಎಷ್ಟೋ ಮಂದಿ ತಮ್ಮಲ್ಲೇ ನಕ್ಕಿಕೊಳ್ಳುವರು, ಮತ್ತೆಷ್ಟೋ ಮಂದಿ ಕನಿಕರದಿಂದೆಂಬಂತೆ ನೋಡುತ್ತಿದ್ದರು.

ನಿಗದಿತ ದಿನ, ವೇಳೆಗೆ ಸರಿಯಾಗಿ ಸಭೆ ಪ್ರಾರಂಭವಾಯಿತು. ರಾಜನ ಆಜ್ಞಾಪನೆಯ ಮೇರೆಗೆ ವಿಷಯ ಪರಿಶೀಲನೆಯ ಹೊಣೆ ಹೊತ್ತಿದ್ದ ಹಿರಿಯರಲ್ಲಿ ಒಬ್ಬರು ತಮ್ಮ ಸಮಿತಿಗೆ ಮಹಾರಾಜರು ಒಪ್ಪಿಸಿದ್ದ ಕೆಲಸವೇನೆಂಬುದರ ರಾಜಾಜ್ಞೆಯನ್ನು ಓದುವ ಮೂಲಕ ಸಭೆಗೆ ವಿಷಯ ತಿಳಿಸಿದರು. ಸಮಿತಿಯ ವರದಿ ಮಂಡನೆಯಾಗಲಿ ಎಂದು ಆದೇಶವಾಯಿತು. ಸಮಿತಿಯ ಮುಖ್ಯರು ವರದಿಯ ವಿವರಗಳನ್ನು ನೀಡುತ್ತ, ಹೋದಂತೆ ಅನೇಕ ಮಂದಿ ಸಭಾಸದರ ಮುಖಗಳು ಕಪ್ಪಿಟ್ಟವು, ಹೆದರಿಕೆಯಿಂದ ಪಾಪಪ್ರಜ್ಞೆಯಿಂದ. ನೇರವಾಗಿ ಯಾವ ಹಣದ ದುರುಪಯೋಗವೂ ನಡೆದಿಲ್ಲವೆಂಬುದೇ ವರದಿಯ ಸಾರಾಂಶ. ತರ್ದವಾಡಿ ೧೦೦೦ ದಂತಹ ವಿಸ್ತಾರವಾದ ರಾಜ್ಯದ ಹಣಕಾಸು ವ್ಯವಹಾರವೆಂದರೆ ಭಾರಿ ಮೊತ್ತದ್ದೇ. ಹೀಗಾಗಿ ಭಂಡಾರಿಯಾದವರು ಒಟ್ಟು ಆಡಳಿತದ ನಾಯಕತ್ವವಹಿಸಿ ನಡೆಸಬೇಕಾಗುತ್ತದೆಯೇ ಹೊರತು, ಪ್ರತಿಯೊಂದನ್ನೂ ತಾವೇ ಪರಿಶೀಲನೆ ಮಾಡಲು ಸಾಧ್ಯವಾಗುವುದಿಲ್ಲ. ಇಂಥ ದೊಡ್ಡ ಹೊಣೆ ಹೊತ್ತವರು ತಮ್ಮ ಕೈಕೆಳಗಿನ ಅಧಿಕಾರಿಗಳನ್ನು ನಂಬಬೇಕು, ಹಾಗೆ ನಂಬಿ ಮುಂದಿನ ಕಾರ್ಯವಿಧಾನವನ್ನು ರೂಪಿಸಬೇಕು. ಆದ್ದರಿಂದ ಭಂಡಾರಿಗಳು ಯಾವುದಕ್ಕೂ ಇಲ್ಲಿ ಬಾಧ್ಯಸ್ಥರಲ್ಲ. ಒಟ್ಟು ಆಡಳಿತ ಚೆನ್ನಾಗಿದೆ. ಹಾಗೆ ನೋಡಿದರೆ ಆಯವ್ಯಯದ ವಿವೇಚನೆ ರಾಜ್ಯಹಿತಕ್ಕೆ ಅನುಗುಣವಾಗಿಯೇ ನಡೆದಿದೆ, ಬೊಕ್ಕಸದಲ್ಲಿ ಉಳಿದಿರುವ ಮೊತ್ತ ವರ್ಷ ವರ್ಷೇ ಹೆಚ್ಚುತ್ತಿದೆ. ಕೆಲವು ವೇಳೆ ಲೋಪಗಳಾಗಿರಬಹುದು. ಅದು ಯಾವ ಹಂತದಲ್ಲಿ ನಡೆದಿದೆಯೆಂದು ಹೇಳುವುದೂ ಸಾಧ್ಯ. ಅಂಥ ಕೆಲವನ್ನು, ಪ್ರಮುಖವನ್ನು, ವರದಿಯಲ್ಲಿ ಸೂಚಿಸಿಯೂ ಇದೆ. ಆಯಾ ವಿಭಾಗದ ಅಧಿಕಾರಿಗಳೇ ಇದಕ್ಕೆ ಹೊಣೆ. ಇಂಥದು ಕೂಡ ತುಂಬ ಕಡಿಮೆಯ ಪ್ರಮಾಣದ್ದು. ಇದಕ್ಕೆ ಭಂಡಾರಿಗಳ ಜಾಣ್ಮೆಯೆ, ಪ್ರಾಮಾಣಿಕತೆ ಹಾಗೂ ರಾಜ್ಯಹಿತದಿಂದ ಕೂಡಿದ ಉಸ್ತುವಾರಿಯೇ ಕಾರಣ ಎಂದೂ ವರದಿಯಲ್ಲಿ ಪ್ರಶಂಸಿಸಲಾಗಿತ್ತು.

ವರದಿಯನ್ನು ಓದಿದನಂತರ ಹಿರಿಯ ಕರಣಕರು ಅದನ್ನು ಪ್ರಭುಗಳಿಗೆ

ಒಪ್ಪಿಸಿದರು. ವರದಿಯ ಓದು ಮುಗಿದಾಗ ಪ್ರಭುಗಳೇ ಮೊದಲು ಕರತಾಡನ ಮಾಡಿದರು, ಉಳಿದವರು ಅದನ್ನು ಅನುಸರಿಸಿದರು. ರಾಜರು ಈಗ ಮಾತನಾಡಲು ಆರಂಭಿಸಿದರು: "ಭಂಡಾರದ ಹಣ ದುರುಪಯೋಗವಾಗುತ್ತಿದೆ ಎಂದು ಕೆಲವರು ನಮ್ಮ ಬಳಿ ದೂರಿತ್ತರು. ಹಾಗೆ ದೂರಿತ್ತವರು ಯಾರು ಎಂದು ನಾವು ಹೇಳಲಿಚ್ಚಿಸುವುದಿಲ್ಲ. ಹಾಗೆ ಹೇಳಿದರೆ ವೃಥಾ ಮನಸ್ತಾಪ ಬೆಳೆಯಬಹುದು. ಹಾಗಾಗಬಾರದು. ಈಗ ತನಿಖೆಯ ವರದಿಯನ್ನು ಪೂರ್ಣ ಕೇಳಿದ್ದೀರಿ, ನೀವೆಲ್ಲ. ಆರೋಪ ಪೂರ್ಣ ಸುಳ್ಳೆಂಬುದು ಸಾಬೀತಾಗಿದೆ. ಬಸವಣ್ಣನವರು ಆರೋಪಮುಕ್ತರಾಗಿದ್ದಾರೆ. ಆದರೆ ಅವರಂತಹ ಪ್ರಾಮಾಣಿಕ ಅಧಿಕಾರಿಯ ಬಗ್ಗೆ ತನಿಖೆ ನಡೆಸಲು ನಾವು ಆಜ್ಞೆಮಾಡಿ ಅವರ ಮನಸ್ಸಿಗೆ ವೃಥಾ ಮುಜುಗರವುಂಟಮಾಡಿದ್ದೇವೆ. ಬಸವಣ್ಣನವರಂತಹ ಪ್ರಾಜ್ಞರು ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು. ಅವರ ಮೇಲೆ ಬಂದ ಆರೋಪವನ್ನು ಬುಡವಿಲ್ಲದ್ದೆಂದು ನಾವೇ ತಳ್ಳಿಹಾಕಬಿಡಬಹುದಾಗಿತ್ತು. ಆದರೆ ಹಾಗೆ ಮಾಡದೆ ತನಿಖೆಗೆ ಆಜ್ಞೆ ಮಾಡಿ ಅಪರಾಧಿಸ್ಥಾನದಲ್ಲಿ ನಾವೇ ನಿಂತುಬಿಟ್ಟದ್ದೇವೆನ್ನಿಸುತ್ತಿದೆ. ಬಸವಣ್ಣನವರಿಗೆ ಖೇದವುಂಟುಮಾಡಿದ ತಪ್ಪಿಗಾಗಿ ನಾವು ತಪ್ಪುದಂಡವನ್ನು ಸಲ್ಲಿಸುತ್ತೇವೆ" ಎಂದು ಚಪ್ಪಾಳೆ ತಟ್ಟಿ, ಸೇವಕ ತಂದ ಹರಿವಾಣವನ್ನು ತಮ್ಮ ಕೈಗಳಲ್ಲಿ ಪಡೆದು ನನಗೆ ನೀಡಲು ಬಂದ. "ರಾಜ್ಯದಲ್ಲಿ ವಸೂಲಾದ ಎಲ್ಲ ದಂಡವೂ ಬೊಕ್ಕಸಕ್ಕೆ ಸೇರಬೇಕು. ಇದನ್ನು ಬೊಕ್ಕಸದ ವರಮಾನವೆಂದು ಭಾವಿಸಲಾಗುವುದು" ನಾನೆಂದೆ. ಬಿಜ್ಜಳ ಜೋರಾಗಿ ಕರತಾಡನ ಮಾಡಿದ. ನನ್ನ ಬಳಿ ಬಂದು ಭುಜತಟ್ಟಿದ.

ಮಾರನೆಯ ದಿನ ಮತ್ತೆ, ಏಕಾಂತದಲ್ಲಿ ಕರೆಸಿಕೊಂಡು ನನಗೆ ಹೇಳಿದ ಮಾತುಗಳನ್ನು ಕೇಳಿ ನನಗೆ ಎದೆಯುಕ್ಕಿ ಬಂದಿತು. ಅವನೆಂದ: "ಬಸವಣ್ಣನವರೇ, ಹಿಂದೆ ನಡೆದದ್ದನ್ನೆಲ್ಲ ದಯವಿಟ್ಟು ಮರೆತುಬಿಡಿ. ನಿಮ್ಮ ಬೆಲೆಯನ್ನು ನಾನು ಚೆನ್ನಾಗಿ ಬಲ್ಲೆ, ಆದರೆ ಇದು ರಾಜ್ಯದ ಆಡಳಿತ ನೋಡಿ, ಬೇಕಾದವರು ಬೇಡಾದವರು ಎಲ್ಲರೊಂದಿಗೂ ನಾವು ಏಗಬೇಕಲ್ಲ. ನಿಮ್ಮ ಬಗ್ಗೆ ತನಿಖೆಯಾಗಲಿ ಎಂದು ಆಜ್ಞೆ ಮಾಡಿದ್ದು ಅನುಮಾನದಿಂದಲ್ಲ, ನಿಮ್ಮ ಬಗ್ಗೆ ಇಂತಹ ದೂರನ್ನು ಮತ್ತಾರೂ ಮತ್ತೆಂದೂ ತಾರದಿರಲಿ ಎಂದು. ಎಲ್ಲ ಸರಿಯಾಗಿ ನಡೆಯಿತು. ನನ್ನಿಂದ ತಪ್ಪಾಗಿದ್ದರೆ ಕ್ಷಮಿಸಬೇಕು" ಎಂದು ಕೈಹಿಡಿದುಕೊಂಡ.

ನಾನು ಮೂಕನಾಗಿದ್ದೆ. ಆದರೂ ಸಂಭಾಳಿಸಿಕೊಂಡು ಪರಿಶೀಲನೆಗೆ ಆಜ್ಞೆಯಾದಾಗ ನನ್ನ ಮಡದಿಯರು ಹೇಳಿದ್ದನ್ನು ಹೇಳಿದೆ. "ನಿರಪರಾಧಿಯಾಗಿ ಪದತ್ಯಾಗ ಮಾಡುವುದು ಉತ್ತಮ ಎಂದಿದ್ದೆ" ಎಂದೆ. ಈ ಮಾತು ಕೇಳಿದವರೇ ತಮ್ಮ ಆಸನದಿಂದ ಮೇಲೆದ್ದು "ಬಸವಣ್ಣನವರೇ, ನಿಮ್ಮ ಶಿವನಾಣೆ ಅಂಥ ಕೆಲಸ ಮಾಡಬೇಡಿ. ನಿಮ್ಮ ಮನಸ್ಸಿಗೆ ಇನ್ನೆಂದೂ ಖೇದವಾಗದಂತೆ ನೋಡಿಕೊಳ್ಳುವ ಹೊಣೆ ನಮ್ಮದು. ನಿಮ್ಮಂತಹ ಅಧಿಕಾರಿಗಳು ಇರುವುದರರಿಂದ ಆಡಳಿತ ಇದ್ದುದರಲ್ಲಿ ಸುಸೂತ್ರವಾಗಿದೆ"

ಎಂದ. ಇಷ್ಟು ಹೇಳಿದ ಮೇಲೆ ನಾನು ಪದತ್ಯಾಗದ ಮಾತನ್ನು ಮತ್ತೆಂದೂ ಎತ್ತಲಿಲ್ಲ.

ಬಿಜ್ಜಳ ಪ್ರಭುವಿಗೆ ರಾಜಕೀಯ ಎದುರಾಳಿಗಳ ಬಗ್ಗೆ ಕ್ರೋಧವಿದ್ದಿರಬಹುದೇ ಹೊರತು, ನಮ್ಮಂತಹವರ ಬಗ್ಗೆಯಲ್ಲ ಎಂಬುದು ಸ್ಪಷ್ಟವಾಯಿತು. ಆದರೂ ರಾಜ ರಾಜನೇ. ಅವನ ಐಷಾರಾಮದ ಜೀವನಕ್ಕಾಗಿ ಎಷ್ಟುಬೇಕಾದರೂ ಬೊಕ್ಕಸದ ಹಣವನ್ನು ಖರ್ಚುಮಾಡುವ ಪರಿಪಾಠ ರಾಜರದು. ಇಂತಹ ಸನ್ನಿವೇಶವನ್ನು ಉಪಯೋಗಿಸಿಕೊಂಡು ಮುಂದೆ ಒಂದು ನೀತಿ ರೂಪಿಸಿದೆ. ಅರಮನೆಗೆ ಬೇಕಾದಂತೆ ಬೇಕಾದಷ್ಟು ಹಣ ನೀಡುವ ಪರಿಪಾಠ ತಪ್ಪಬೇಕು. ಅರಮನೆಯ ವೆಚ್ಚ ರಾಜ್ಯಾದಾಯದ ಒಂದು ನಿಗದಿತ ಪ್ರಮಾಣವನ್ನು ಮೀರಬಾರದು ಎಂಬುದೇ ಅದು. "ನಮ್ಮ ಬಾಯಿಗೂ ಬಂತೇ ತೊಂದರೆ" ಎಂದ ಬಿಜ್ಜಳ. ಆದರೆ ಆ ಮೊತ್ತವೇನೂ ಕಡಿಮೆಯದಲ್ಲ ಎಂದು ವಿವರಿಸಿದ ಮೇಲೆ ಆ ನಿಯಮಕ್ಕೂ ಜಾರಿಯಿತ್ತನು.

ಬಿಜ್ಜಳ ಕ್ರೂರಿಯೆಂಬುದೂ ನಿಜ. ತಂದೆ ಪೆರ್ಮಾಡಿರಾಯ ಬದುಕಿದ್ದಾಗಲೂ ಇವನು ತಂದೆಯನ್ನು ಉಚಾಯಿಸಿ ಆಡಳಿತ ನಡೆಸಿದವನೇ. ತೈಲಪ ಚಕ್ರವರ್ತಿಯನ್ನು ಅವನು ಮೂಲೆಗುಂಪಾಗಿಸಿದ ಬಗೆಯಂತೂ ಗಾದೆ ಮಾತಾಗಿ ಬಿಟ್ಟಿತ್ತು. "ತೈಲಪನಂಥ ರಾಜಬೇಡ, ನಿನ್ನಂಥ ಮಗ ಬೇಡ" ಎಂಬುದೇ ಆ ಗಾದೆ ಮಾತು. ಕೆಲಸಕ್ಕೆ ಬಾರದ ಮಗನನ್ನು ಬೈಯುವ ಪರಿ ಅದು. ಹಾಗೆಯೇ ಯದ್ವಾತದ್ವಾ ಜನರ ಮೇಲೆ ಕರಭಾರ ಹೇರಿದ್ದೂ ಉಂಟು. ಸಾಮಾನ್ಯ ಶ್ರಮಿಕಜೀವಿಗಳ ಬವಣೆಯನ್ನು ಕಣ್ಣಾರೆ ಬಲ್ಲ ನಾನು, ಅವರನ್ನು ಸಂಘಟಿಸಿ ಶರಣಮಾರ್ಗದಲ್ಲಿ ಬರುವಂತೆ ಪ್ರೇರಿಸುತ್ತಿದ್ದ ನಾನು, ಅವರ ಬಗ್ಗೆ ರಾಜರಲ್ಲಿ ಎಷ್ಟೋ ವೇಳೆ ಅರಿಕೆಮಾಡಿಕೊಂಡು ಅವರ ತೊಂದರೆಗಳನ್ನು ಕಡಿಮೆಮಾಡಿದ್ದೂ ಉಂಟು. "ಅಧಿಕಾರಿಗಳ ಸಲಹೆಯ ಮೇರೆಗೆ ನಾವು ಬಹು ಬಾರಿ ನಡೆಯಬೇಕಾಗುತ್ತದೆ. ನಿಜವಾಗಿಯೂ ತೊಂದರೆಯಾಗಿದ್ದರೆ ನಮ್ಮ ಗಮನಕ್ಕೆ ತಂದರೆ ಏನಾದರೂ ಸಹಾಯ ಮಾಡಬಹುದು" ಎಂದು ನನಗೆ ಹೇಳಿ ಬಿಜ್ಜಳ ಒಂದೆರಡು ಬಾರಿ ಆ ರೀತಿ ಮಾಡಿಯೂ ಇದ್ದ. ಆದರೆ ನಾನು ಮುತ್ಸದ್ದಿಯಲ್ಲ, ಪರ್ಯಾಯ ರಾಜಕೀಯ ವ್ಯವಸ್ಥೆ ನನ್ನಿಂದ ಸಾಧ್ಯವಿಲ್ಲ. ಜನರಿಗೆ ಹೆಚ್ಚು ಹೆಚ್ಚು ಆಧ್ಯಾತ್ಮಿಕರಾಗುವಂತೆ ತಿಳಿವಳಿಕೆ ನೀಡುವ ಮೂಲಕ ಐಹಿಕ ಬದುಕು ಹೆಚ್ಚು ಸಹನೀಯವಾಗುವಂತೆ ಮಾಡಲು ಪ್ರಯತ್ನಿಸುವುದೇ ನನ್ನ ಕರ್ತವ್ಯ, ಮಣಿಹ ಎಂದು ನಂಬಿದ್ದವನು ನಾನು. ಅಲ್ಲದೆ, ಸಾಮಾನ್ಯಜನ ತಿಳಿವಳಿಕಸ್ಥರಾದರೆ ಅವರನ್ನು ವಂಚಿಸಲು, ಸುಲಿಗೆ ಮಾಡಲು ಇತರರಿಗೆ ಸಾಧ್ಯವಾಗದು; ಆದ್ದರಿಂದ ನಮ್ಮ ಗುರಿ ಒಟ್ಟಾರೆ ಜೀವನದ ಗುಣವನ್ನು ಉತ್ತಮಪಡಿಸುವುದರ ಕಡೆಗಿರಬೇಕು. ನಮ್ಮ ದಾರಿ ಕೆಳಗಿರುವವರು ಮೇಲೇರುವಂತೆ ಅವರಿಗೆ ಒತ್ತಾಸೆಯಾಗಿ ನಿಲ್ಲುವಂಥದು.

೬

ಚಕ್ರವರ್ತಿಗಳು ತುಂಬೇಶ್ವರ ದೇವಸ್ಥಾನದಿಂದ ವಾಪಸು ಬರುವಾಗ ಮರಕ್ಕೆ ಯಾರೋ ಬಟ್ಟೆ ಕಟ್ಟಿದ್ದುದು ಕಂಡದ್ದು, ಅವರಲ್ಲಿ ಏನೋ ಬರೆದಿದ್ದುದು ಕಲ್ಯಾಣದಲ್ಲಿ ದೊಡ್ಡ ಸುದ್ದಿಯಾಯಿತು. ಕಲ್ಯಾಣವೆಂದರೆ ಕಲಚುರಿಗಳ ರಾಜಧಾನಿ. ಕಲ್ಯಾಣಪಟ್ಟಣ ದೇಶವಿದೇಶಗಳಲ್ಲೂ ಪ್ರಸಿದ್ಧ. ವಿಶಾಲವಾದ ಊರು, ದೊಡ್ಡ ದೊಡ್ಡದಾದ ಬೀದಿಗಳು, ವ್ಯಾಪಾರಕ್ಕಾಗಿ ಸುತ್ತುಮುತ್ತಲ ಊರುಗಳಿಂದ ಮಾತ್ರವಲ್ಲ, ದೂರದ ದೇಶಗಳಿಂದಲೂ ಹಲವರು ಬರುತ್ತಿದ್ದರು. ಸದಾ ಗಿಜಿಗುಡುವ ಬೀದಿಗಳು. ಜೊತೆಗೆ ಬಸವಣ್ಣನವರನ್ನು ಕಾಣಲು ಬರುವ ಶರಣರು, ನಿತ್ಯ ದಾಸೋಹದ ದೃಶ್ಯಗಳು. ಇಂಥ ಊರಲ್ಲಿ ಸುದ್ದಿ ಎಂದರೆ ಗಾಳಿಯಲ್ಲಿ ತೇಲಿ ಎಲ್ಲೆಡೆ ತುಂತುರುಗಳು ಬೀಳುತ್ತವೆ. ಅದು ಬಿದ್ದದ್ದರಿಂದಾಗಿ ಕೆಲವರ ಕಲ್ಪನೆ ಗರಿಗೆದರುವುದು. ಪಕ್ಕದವನ ಕಿವಿಯಲ್ಲಿ ಹಾಗಂತೆ ಹೀಗಂತೆ ಎಂದು ಪಿಸುಗುಟ್ಟುವಾಗ ನಾಲಗೆಗೆ ಹೊಸ ಚೈತನ್ಯಬರುವುದು. ನದಿಗೆ ಇತರ ಹೊಳೆಗಳು ಬಂದು ಸೇರಿ ಮುಂದೆ ಹರಿದಂತೆ ಅದು ವಿಶಾಲವಾಗುತ್ತ, ಆಳವಾಗುತ್ತ ಹೋಗುವುದಿಲ್ಲವೇ, ಹಾಗೆ! ತನ್ನ ಕಿವಿ ಕೇಳಿದ್ದನ್ನು ಇನ್ನೊಬ್ಬನ ಕಿವಿಗೆ ಊದುವ ಹೊತ್ತಿಗೆ ನಾಲಗೆಯಲ್ಲಿ ಜೊಲ್ಲು ಹುಟ್ಟಿದಂತೆ ಹೇಳುವ ಸುದ್ದಿಗೆ ರುಚಿ ಬೆರೆತಿರುತ್ತದೆ, ವಾಸನೆ ಹತ್ತಿರುತ್ತದೆ, ಬಣ್ಣ ಬಂದಿರುತ್ತದೆ. ಮನುಷ್ಯನ ಕಿವಿಯಿಂದ ಬಾಯಿಗೆ ಇರುವ ದೂರವಾದರೂ ಎಷ್ಟು, ಒಂದು ಚೋಟು ಕೂಡ ಇಲ್ಲ, ಅಂಥದ್ದರಿಂದ ಅಷ್ಟೇ ದೂರ ಸರಿದ ಸುದ್ದಿ ಎಷ್ಟೊಂದು ಮೈತುಂಬಿಕೊಳ್ಳುತ್ತದಲ್ಲ, ಆಶ್ಚರ್ಯ!

ಈ ಸುದ್ದಿಯೂ ಹೀಗೆಯೇ ಬೆಳೆಯಿತು. ರಾಕ್ಷಸರು ಬೆಳೆಯುವರಂತಲ್ಲ ಹಾಗೆ, ಕ್ಷಣ ಕ್ಷಣಕ್ಕೆ ದೊಡ್ಡದಾಗಿ ಬೆಳೆಯಿತು. ಬೆಳೆದು ಬೆಳೆದು ಎಂತಹ ರೂಪ ಪಡೆಯಿತೆಂದರೆ ಆ ಬಟ್ಟೆ ರಾಜರು ಉಡುವ ಪೀತಾಂಬರವೇ ಆಗಿತ್ತು; ಯಾರೋ ಪರದೇಶದ ಶತ್ರುಗಳು ಅರಮನೆಗೆ ಕಾಣದಂತೆ ನುಗ್ಗಿ ಅದನ್ನು ಅಪಹರಿಸಿ ತಂದಿದ್ದರಂತೆ! ಅದರ ಮೇಲೆ ಏನೋ ಬರೆದಿದ್ದರಲ್ಲ, ಅದಂತೂ ಕಾವ್ಯವೇ ಆಗಿಬಿಟ್ಟಿತು. ಅದು ಬಿಜ್ಜಳರಾಯರ ಆಳ್ವಿಕೆಯ ಬಗ್ಗೆ ಕಾಲಜ್ಞಾನವಂತೆ. ಇನ್ನೇನು ಕಲಿಗಾಲ ಮುಳುಗಿ ಹೋಗುವುದಂತೆ, ಮತ್ತೆ ಕೆಲವರ್ಷಗಳಲ್ಲಿ ಕೃತಯುಗ ಪುನಃ ಪ್ರಾರಂಭವಂತೆ! ಹೀಗೆ ಏನೇನೋ. ಎಲ್ಲರ ಕಿವಿಗೆ ಬಿದ್ದ ಸುದ್ದಿಯ ಈ ರೂಪ ಬಸವಣ್ಣನವರ ಕಿವಿಗೂ ಬಿತ್ತು; ಬಿಜ್ಜಳರ ಕಿವಿಗೂ ಬಿತ್ತು.

ರಾಜರು ಈ ಬಗ್ಗೆ ಯೋಚನೆ ಮಾಡುತ್ತಲೇ ಇದ್ದರು. ಯಾರು ಬರೆದಿರಬಹುದು, ಕಟ್ಟಿರಬಹುದು ಈ ಬಟ್ಟೆಯನ್ನು; ಅವರಲ್ಲಿ ಬರೆದ ಪ್ರಾಸಬದ್ಧವಾದ ಮಾತುಗಳ ಅರ್ಥವೇನಿದ್ದಿರಬಹುದು! ಹೊಸ ರೀತಿಯಾಯಿತಲ್ಲ ಇದು. ಇದು ಅಪಶಕುನವೇ, ಎಚ್ಚರಿಕೆಯೇ ಅಥವಾ ಜನರು ಅಧಿಕಾರಿಗಳನ್ನು ಮಾತಾಡಿಸುವ ಹೊಸ ಬಗೆಯೇ. ಇದು ಅಧಿಕಾರಸ್ಥರನ್ನು ಕುರಿತ ಮಾತೇ ಎನ್ನಲು ಆಧಾರವೇನು? ಬರೆದ ಪದಗಳಲ್ಲಿ ಅಧಿಕಾರದ ಬಗ್ಗೆ ಸೂಚನೆಯೇ ಇಲ್ಲವಲ್ಲ. ರಾಜನ ಚಿಂತೆಯೆಂದರೆ ಅವನ ಸುತ್ತಮುತ್ತಲಿನವರ ಚಿಂತೆಯೆಂದೇ ತಾನೇ. ಬಿಜ್ಜಳ ಭೂಪರು ಈ ವಿಚಾರದ ಬಗ್ಗೆ ಆಗಾಗ್ಗೆ ತಮ್ಮ ಆಪ್ತರೊಡನೆ ಮಾತನಾಡುವರು; ಅಧಿಕಾರಿಗಳನ್ನು ಕೇಳುವರು; ಗುರುಗಳಲ್ಲಿ ಬಿನ್ನೈಸುವರು.

ಒಂದೆರಡು ದಿನಗಳು ಕಳೆದ ಮೇಲೆ ಒಮ್ಮೆ ಬಿಜ್ಜಳ ತಮ್ಮ ರಾಜಗುರುಗಳಾದ ನಾರಣಕ್ರಮಿತರೊಡನೆ ಮಾತಾಡುತ್ತಿದ್ದರು. ಮಾತಿಗೆ ಮಾತು ಬಂದು ಬಟ್ಟೆ ಬರಹಗಳ ವಿಚಾರವೂ ಪ್ರಸ್ತಾಪಿತವಾಯಿತು. ಮತ್ತೊಮ್ಮೆ ಆ ಬಟ್ಟೆಯನ್ನು ತರಿಸಿ ಪರಿಶೀಲಿಸಿದ್ದಾಯಿತು. ಪದಗಳ ನಡುವೆಯೇನಾದರೂ ವಿಶೇಷ ಅರ್ಥ ಕಾಣುತ್ತದೆಯೇ ಎಂದು ಹುಡುಕಾಡಿದರು. ಊಹ್ಞೂ, ಅಂಥದ್ದೇನೂ ಇಲ್ಲವಲ್ಲ, ಎನ್ನಿಸಿತು. ಇದ್ದರೆ ತಾನೇ ಕಾಣುವುದು ? ಕೆಲವು ವೇಳೆ ಇಲ್ಲದ್ದೂ ಕಾಣಬಹುದಲ್ಲ ಎಂದೂ ಎನ್ನಿಸಿತು. ಕೊನೆಗೆ ನಾರಣಕ್ರಮಿತರಿಗೆ ಏನೋ ಹೊಳೆದಂತಾಯಿತು. ಕಣ್ಣಿಗೆ ಕಾಣದ್ದು ಬುದ್ಧಿಗೆ ಕಾಣಿಸಿದಂತಾಗಿತ್ತು.

"ಮಹಾಪ್ರಭುಗಳೇ, ಈ ಬರವಣಿಗೆ ನೋಡಿದರೆ ಇದು ಪ್ರಭುಗಳಿಗೆ ಅಂದರೆ ಅರಮನೆಗೆ ಸಂಬಂಧಿಸಿದಂತೆ ತೋರದು. ಏನೋ ಜಾತಿಗಳ ವಿಷಯ ಬೇರೆ ಬರೆದಿದೆ. ಅಲ್ಲದೆ ಪದಗಳ ಜೋಡಣೆಯ ರೀತಿ ಆ ಶರಣರುಗಳ ರೀತಿಯ ಹಾಗಿದೆ" ಎಂದು ಯೋಚಿಸುತ್ತ, ಕೆನ್ನೆಯ ಮೇಲೆ ಬಲಗೈ ಬೆರಳುಗಳನ್ನು ಆಡಿಸುತ್ತ ಹೇಳಿದರು. ಕಿವಿಯಲ್ಲಿದ್ದ ಹತ್ತಕಡಕುಗಳ ಹೊಳಪಿನ ಒಂದಂಶ ಅವರ ತಲೆಗೂ ಇಳಿದಂತಿತ್ತು, ಕಣ್ಣುಗಳ ಮೇಲೂ ಬಿದ್ದಂತಿತ್ತು.

"ಅದು ಹೇಗೆ ಗುರುಗಳೇ? ಅರಮನೆಗೆ ಸಂಬಂಧಿಸಿದ ವಿಷಯವಲ್ಲವಾದರೆ ನಮ್ಮ ಗಮನಕ್ಕೆ ಬರುವಂತೆ ಹಾಕುತ್ತಿದ್ದರೇ?" ಅದೂ ನಿಜ. ಪ್ರಭುಗಳು ತುಂಬೇಶ್ವರ ಸನ್ನಿಧಾನಕ್ಕೆ ದಯಮಾಡಿಸುವಾಗ ಹಾಕಿರದಿದ್ದ ಬಟ್ಟೆಯು, ಅವರು ವಾಪಸು ಬರುವಾಗ ಹಾಕಿತ್ತಲ್ಲ. ಅಥವಾ ಹೋಗುವಾಗಲೂ ಅದು ಅಲ್ಲೇ ಇದ್ದು, ಯಾರ ಕಣ್ಣಿಗೂ ಬೀಳಲಿಲ್ಲವೇ? ಅದು ಹೇಗೆ ಸಾಧ್ಯ. ಇಷ್ಟುದ್ದ, ರಥದ ಕಳಶಕ್ಕೇ ತಾಕುವಂತೆ ಇಳಿಬಿದ್ದಿತ್ತಲ್ಲ. ಇದ್ದಿದ್ದರೆ ಹೋಗುವಾಗಲೇ ಕಣ್ಣಿಗೆ ಬೀಳುತ್ತಿತ್ತು. ಆದ್ದರಿಂದ ಇರಲಿಲ್ಲ. ಹೋಗುವಾಗಲೇ ಯಾಕೆ ಹಾಕಲಿಲ್ಲ ಹಾಗಾದರೆ? ಹಾಕಲು ಸಾಧ್ಯವಾಗಲಿಲ್ಲವೇನೋ. ಏಕೆಂದರೆ ಏರ್ಪಾಡುಗಳ ಉಸ್ತುವಾರಿ ನೋಡುತ್ತಿದ್ದವರು ಸುಳಿದಾಡುತ್ತಿದ್ದರೇನೋ. ಅಥವಾ ಹೋಗುವಾಗಲೇ ಕಂಡಿದ್ದರೆ ಪ್ರಭುಗಳು ಅಪಶಕುನವೆಂದು ಭಾವಿಸಿ ಗುಡಿಗೆ ಹೋಗದೇ ವಾಪಸ್ಸಾಗಿ ಬಿಡುತ್ತಿದ್ದರೇನೋ. ಹಾಗೆ ಪ್ರಭುಗಳು ದೇವರ ದರ್ಶನ ಮಾಡುವುದನ್ನು ಅಡ್ಡಿಪಡಿಸುವ

ಉದ್ದೇಶವಿರಲಿಲ್ಲವೇನೋ ಆ ಬಟ್ಟೆ ಕಟ್ಟಿದವರಿಗೆ! ಅಂದರೆ ಪ್ರಭುಗಳಿಗೆ ಬೇಕಾದವರೇ, ಅವರಿಗೆ ಆಗದಿರುವವರ ಬಗ್ಗೆ ಸೂಚನೆಯೀಯುತ್ತಿದ್ದಾರೆಯೇ? ಹೀಗೆ ಬರೆದು ನೇರವಾಗಿ ಅರಿಕೆ ಮಾಡಿಕೊಳ್ಳಬಹುದಿತ್ತಲ್ಲ. ಹಾಗೆ ಹೇಳಲು ಅವರಿಗೆ ಯಾರದೋ ಭಯವಿರಬಹುದು. ಪ್ರಭುಗಳು ಅಂಥವರಿಗೆ ರಕ್ಷಣೆ ಒದಗಿಸುವುದರಲ್ಲಿ ಅನುಮಾನವಿಲ್ಲ. ಆದರೆ ಆ ವ್ಯಕ್ತಿಗೆ ಇಷ್ಟೆಲ್ಲ ವಿಷಯ ಹೊಳೆಯಬೇಕಲ್ಲ!

ನಾರಣಕ್ರಮಿತರು ತಮ್ಮ ಮನಸ್ಸಿನಲ್ಲಿ ಬಂದ ವಿಚಾರವನ್ನೆಲ್ಲ ಬಿಜ್ಜಳ ಪ್ರಭುಗಳಿಗೆ ಹೇಳುತ್ತ ಹೋದರು. ಅವರು ಏನು ಬೇಕಾದರೂ ಹೇಳಬಹುದಾಗಿತ್ತು; ರಾಜಗುರುಗಳು! ರಾಜರು ಕೇಳುತ್ತ ಹೋದರು. ಇಂಥ ವಿಷಯಗಳಲ್ಲಿ ಗುರುಗಳ ಬುದ್ಧಿ ಪಾದರಸ. ಕಾರಣಕ್ಕೆ ಕಾರಣ ಜೋಡಿಸಿ ವಿಷಯವೊಂದನ್ನು ಇತ್ಯರ್ಥಪಡಿಸುವುದನ್ನು ಅವರಿಗೆ ಹೇಳಿಕೊಡಬೇಕೆ ? ಇದನ್ನು ಎಷ್ಟು ಕಾಲದಿಂದ ಮಾಡಿಕೊಂಡು ಬಂದವರು ಅವರು ? ಅವರೇನು, ಅವರ ಪೂರ್ವಜರೆಲ್ಲ ಇದನ್ನೇ ಮಾಡಿಕೊಂಡು ಬಂದವರಲ್ಲವೇ ? ಯೋಚನೆ, ಕಾರಣ – ಕಾರ್ಯ ಸಂಬಂಧ ಪರಿಶೀಲನೆ ಅವರ ವಂಶದಲ್ಲಿಯೇ ಹರಿದು ಬಂದದ್ದು!

"ತಮಗೆ ಹಾಗನ್ನಿಸಿಬಹುದು. ಆದರೆ ಈ ಸಾಮ್ರಾಜ್ಯದಲ್ಲಿ ನಡೆಯುವ ವಿಚಾರವೂ ತಮಗೆ ಸಂಬಂಧಿಸಿದ್ದೇ ಅಲ್ಲವೇ? ಆದ್ದರಿಂದ ಈ ಬಟ್ಟೆ ಬರವಣಿಗೆಯಲ್ಲಿರುವುದು ತಮ್ಮ ರಾಜ್ಯದಲ್ಲಿ ನಡೆಯುವ ವಿಷಯದ ಬಗ್ಗೆ ಏನನ್ನೋ ತಮ್ಮ ಗಮನಕ್ಕೆ ತರುವ ಪ್ರಸ್ತಾಪವಿದ್ದಂತಿದೆ" ಗುರುಗಳು ತಮ್ಮ ಆಲೋಚನೆಗೆ ಖಚಿತ ರೂಪವಿತ್ತರು.

"ಹಾಗಾದರೆ ಇದನ್ನು ಯಾವ ಕಡೆಯಿಂದ ತನಿಖೆ ನಡೆಸಬೇಕೆಂದು ತಮ್ಮ ಅಭಿಪ್ರಾಯ?"

"ತನಿಖೆಗೆ ಇನ್ನೂ ಕಾಲ ಕೂಡಿ ಬಂದಿಲ್ಲವೆನ್ನಿಸುತ್ತದೆ, ಮಹಾಪ್ರಭುಗಳೇ. ಇದನ್ನು ಓದಿದರೆ, ಮತ್ತೆ ಮತ್ತೆ ಓದಿದರೆ ಯಾರೋ ಶರಣನೇ ಮಾತಾಡಿದಂತಿದೆ. 'ಹೆಂಡದ ಮಡಕೆಯ ಹೊರಗೆ ತೊಳೆದಂತೆ' ಎಂಬುದಂತೂ ನಾನೆಲ್ಲೋ ಕೇಳಿದ ಹಾಗಿದೆ. ಅಲ್ಲಿಂದಲೇ ಪ್ರಾರಂಭಿಸಬೇಕು."

"ಏನು, ಹೆಂಡದ ಮಡಕೆಯಿಂದಲೇ?" ಮಹಾಪ್ರಭುಗಳ ಮಾನಸಿಕ ಬಿಗಿವು ಕಡಿಮೆಯಾಗಿ ತಮಾಷೆಯ ಮಾತಾಡಿದರು. ನಾರಣಕ್ರಮಿತರು ವಿಷಯದ ಬೇರೆ ಬೇರೆ ಮಗ್ಗುಲನ್ನು ಎಳೆಎಳೆಯಾಗಿ ಬಿಡಿಸಿ ಇಡುವ ರೀತಿ ಎಂದರೆ ಕಿತ್ತಳೆಹಣ್ಣಿನ ತೊಳೆ ಬಿಡಿಸಿ, ಅದರ ಒಳಗಿನ ಕುಸುಮೆಗಳನ್ನು ಒಂದೊಂದಾಗಿ ತೆಗೆದಿಡುವಂತೆ. ಹಾಗಾಗಿ ಈ ವಿಷಯದ ಬಗ್ಗೆ ತಾವೇ ಯೋಚಿಸಿ ತಲೆ ಬಿಸಿಯಾಗಿದ್ದಾಗ ಚಕ್ರವರ್ತಿಗಳಿಗೆ ಗುರುಗಳು ಹೇಳಿದ ಮಾತಿನಿಂದ ಹಗುರವೆನಿಸಿತ್ತು. ಆದಕ್ಕೇ ಈ ಹಾಸ್ಯದ ಮಾತು.

ರಾಜಗುರುಗಳೂ ನಕ್ಕರು. ಸ್ವಲ್ಪ ಉಬ್ಬಿದ ಹಲ್ಲು, ಸ್ವಲ್ಪವೇ. ಹೀಗಾಗಿ ಕೊಂಚ ಮುಗುಳ್ನಕ್ಕರೂ ಅವರು ವಿಶಾಲವಾಗಿ ನಕ್ಕಂತೇ ನೋಡಿದವರಿಗೆ

ಅನ್ನಿಸುವುದು. ವಿಶಾಲವಾದ ಮುಖ, ದೇಹಕ್ಕೆ ಅನುಗುಣವಾಗಿ ನೆತ್ತಿಯ ಮೇಲೆ ಜೋತಾಡುವ ಶಿಖೆಯ ಹಿನ್ನೆಲೆಯಲ್ಲಿ ಅವರ ಮುಖ ಲಕಲಕಿಸುವುದು. ಮಹಾಪ್ರಭುಗಳಿಗಿಂತ ಕೊಂಚ ದೊಡ್ಡವರಾದರೂ ಮುಖದ ಮೇಲೆ ಕಳೆ. ರಾಜರಿಗೆ ಇಲ್ಲವೆಂದಲ್ಲ. ಪ್ರಭುಗಳ ಮುಖದ ಮೇಲೆ ರಾರಾಜಿಸುವ್ವುದು ರಾಜಕಳೆ. ಗುರುಗಳ ಮುಖ ತೇಜಸ್ವಿಯಾಗಿ ಕಾಣುವುದು ಬ್ರಹ್ಮಕಳೆಯಿಂದ. ಆ ಕಳೆ ಸಾಂದ್ರಗೊಂಡಂತೆ ಹಣೆಯ ಮೇಲೆ ಎದ್ದು ಕಾಣುವ ವಿಭೂತಿಪಟ್ಟೆಗಳು. ಶಿವಶರಣರ ಹಣೆಯ ಮೇಲಿನ ವಿಭೂತಿಪಟ್ಟೆಗಳಿಗೂ ಇದಕ್ಕೂ ವ್ಯತ್ಯಾಸವಿದೆ. ಅದು ಕಾಣುವ ವ್ಯತ್ಯಾಸವಿರದಿರಬಹುದು; ಆದರೆ ಯೋಚಿಸಿದರೆ ತಿಳಿಯುವ ವ್ಯತ್ಯಾಸ. ವಿಭೂತಿಪಟ್ಟೆಗಳ ನಡುವೆ ಹಣೆಯ ಮಧ್ಯೆ, ಹುಬ್ಬುಗಳು ಸೇರುವೆಡೆ ಸ್ವಲ್ಪ ಮೇಲೆ ಗುಂಡಾಗಿರುವ ಕುಂಕುಮ. ಅವರ ಮುಖದ ಮೇಲಿರುವ ಒಂದೊಂದೂ ಗುರುಗಳ ತೇಜಸ್ಸನ್ನು ಹೆಚ್ಚಿಸುವಂತಹುದೇ!

"ಮಹಾಪ್ರಭುಗಳು ಒಮ್ಮೆ ಬಸವ ದಣ್ಣಾಯಕರನ್ನು ಕರೆಸಿ ಈ ವಿಷಯ ಪ್ರಸ್ತಾಪಿಸಿದರೆ ಒಳಿತೆಂದು ನನ್ನ ಅನ್ನಿಸಿಕೆ."

"ಅವರಿಗೆ ಈ ವಿಷಯ ಸಂಬಂಧಿಸಿದೆಯೆನ್ನುತ್ತೀರಾ?"

"ಖಚಿತವಾಗಿ ಹೇಳಲಾರೆ. ಹೆಂಡ – ಮಡಕೆ ಇವೆಲ್ಲ ಆ ಶರಣರ ಮಾತುಗಳೇ. ಅದಕ್ಕೆ ಹೇಳಿದೆ. ಒಮ್ಮೆ ಪ್ರಯತ್ನಿಸಿದರೆ ಒಳ್ಳೆಯದು."

"ಬಸವಣ್ಣನವರಿಗೆ ಇದನ್ನು ಹೇಳಬೇಕಾಗಿದ್ದರೆ ನಮ್ಮ ಗಮನಕ್ಕೆ ಬರುವಂತೆ ಏಕೆ ಹಾಕಬೇಕಾಗಿತ್ತು! ಅಂದ ಹಾಗೆ ಗುರುಗಳೇ, ಈ ಬಗ್ಗೆ ಏನಾದರೂ ಶಾಂತಿಕರ್ಮಗಳನ್ನು ಮಾಡಿಸುವ ಅವಶ್ಯಕತೆಯಿದೆಯೇ?"

"ಯಾತಕ್ಕಾಗಿ ಶಾಂತಿಕರ್ಮ? ತಮ್ಮ ಅನುಮಾನವೇನು, ಮಹಾಪ್ರಭುಗಳೇ?"

"ಹೀಗೆ ನಮ್ಮ ಸವಾರಿಯ ಎದುರಿಗೆ ಧುತ್ತೆಂದು ಕಾಣಿಸಿದ ಈ ಬಟ್ಟೆಯ ತುಂಡು...." ಅವರೇನೂ ಮಾತನ್ನು ಪೂರ್ತಿ ಮಾಡಬೇಕಾಗಿರಲಿಲ್ಲ. ಅವರ ವಾಕ್ಯದ ಮೊದಲೆರಡು ಪದಗಳನ್ನು ಕೇಳಿಯೇ ಮಹಾಪ್ರಭುಗಳ ಆಲೋಚನೆಯ ರೀತಿಯನ್ನು ರಾಜಗುರುಗಳು ಗುರುತಿಸಬಲ್ಲರು. ಚಕ್ರವರ್ತಿಗಳ ಆಲೋಚನೆಯ ಧಾಟಿಯು ಅವರಿಗೆ ಅಷ್ಟು ಆಪ್ತವಾಗಿ ಪರಿಚಯವಾಗಿತ್ತು. ಅಂಥ ಆಲೋಚನಾಕ್ರಮ ತಾವೇ ಗುರುಗಳಾಗಿ ಪ್ರಭುಗಳಿಗೆ ಕಲಿಸಿಕೊಟ್ಟದ್ದಲ್ಲವೇ ಎಂದರೂ ಸರಿಹೋಗುತ್ತದೆ.

"ಇದರಲ್ಲಿ ಅಪಶಕುನವೂ ಇಲ್ಲ, ಎಂಥದೂ ಇಲ್ಲ ಎಂದು ನನ್ನ ಭಾವನೆ. ಏಕೆಂದರೆ ಪ್ರಾಕೃತಿಕ ಘಟನೆಯ ಹಿಂದೆ ದೈವನಿಯಮವು ಕೆಲಸಮಾಡುವುದೇ ವಿನಾ ಇಂಥ ಮನುಷಕೃತ್ಯದ ಹಿಂದೆ ಅಲ್ಲ."

"ಆದರೂ ಎಂದೂ ಆಗದುದು ನಡೆದಿದೆಯೆಂದರೆ...." ಪ್ರಭುಗಳು ವಾಕ್ಯಪೂರ್ಣ ಮಾಡುವುದಕ್ಕಿಂತ ಮೊದಲೇ ಗುರುಗಳು ಹೀಗೆ ಹೇಳಿದರು: "ಪ್ರಭುಗಳೆಂದರೆ, ಅದರಲ್ಲಿಯೂ ತಮ್ಮಂತಹ ಚಕ್ರವರ್ತಿಗಳೆಂದರೇನು ಸಾಮಾನ್ಯವೇ? ಸಾಕ್ಷಾತ್ • ರಕ್ಷಣಕರ್ತನಾದ ವಿಷ್ಣುವಿನ ಅಂಶ ತಮ್ಮಲ್ಲಿರುತ್ತದೆ. ನಾವಿಷ್ಣುಃ ಪೃಥಿವೀಪತಿಃ ಎಂಬ ಮಾತೇ ಇಲ್ಲವೇ? ಎಲ್ಲರನ್ನೂ ಆ ನಾರಾಯಣನ ಪರವಾಗಿ

ರಕ್ಷಿಸುವವರು ತಾವು. ಹಾಗಾಗಿ ತಮಗೆ ಕೆಡುಕುಮಾಡಲು ಸಾಮಾನ್ಯರಿಗೆ ಸಾಧ್ಯವೇ ಇಲ್ಲ. ಹಣತೆಯಲ್ಲಿರುವ ಬೆಳಕು ದೊಡ್ಡ ಬೆಂಕಿಯ ಬೆಳಕಿನಲ್ಲಿ ಸೇರಿಹೋಗುವುದಿಲ್ಲವೇ ಹಾಗೆ. ಕ್ಷುಲ್ಲಕರ ಶಕ್ತಿ ತಮ್ಮ ತೇಜಸ್ಸಿನಲ್ಲಿ ಲಯವಾಗಿಬಿಡುತ್ತದೆ."

ಈ ವಿವರಣೆಯಿಂದ ಪ್ರಭುಗಳಿಗೆ ಕೊಂಚ ಸಮಾಧಾನವಾಯಿತು. ಕೊನೆಗೆ ಕೇಳಿದರು. "ಹಾಗಾದರೆ ಬಸವಣ್ಣನವರನ್ನು ವಿಚಾರಿಸುವುದು ಒಳಿತೆಂದು ತಮ್ಮ ಸಲಹೆಯೇ ?"

"ಹೌದು, ಮಹಾಪ್ರಭುಗಳೇ. ಆದರೆ ಇದು ಏನು ಎಂದು ಕೇಳಿದರೆ ಅವರು ತಾನೇ ಏನಾದರೂ ಹೇಳಿಯಾರೇ ಎಂಬ ಅನುಮಾನವಿದೆ ನನಗೆ. ಹಾಗಾಗಿ ಅವರಿಗೆ ಈ ಬರಹವನ್ನು ತೋರಿಸಿ, ಇದರಿಂದ ನಿಮಗೇನನ್ನಿಸುತ್ತದೆ ಎಂದು ಕೇಳಿದರೆ ಒಳಿತು. ಅವರೂ ಪ್ರಚಂಡರು. ಎಷ್ಟಾದರೂ ಬ್ರಹ್ಮ ಪಿಂಡವಲ್ಲವೇ, ಈಗೇನೋ ಬೇರೆ ದಾರಿ ಹಿಡಿದಿರಬಹುದು, ಅಷ್ಟೆ!"

"ಆಗಲಿ, ತಮಗೆ ತೋಂದರೆಯಿತ್ತೆ" ಎಂದು ಪ್ರಭುಗಳು ಚಪ್ಪಾಳೆ ತಟ್ಟಿದರು. ಅರಮನೆಯ ಪರಿಚಾರಕಿಯು ಬಂದು ಹರಿವಾಣದ ತುಂಬ ಫಲತಾಂಬೂಲಗಳನ್ನಿರಿಸಿಕೊಂಡು ಬಂದಳು. ಅದನ್ನು ತಮ್ಮ ಕೈಯಿಂದಲೇ ಪ್ರಭುಗಳು ನಾರಣಕ್ರಮಿತರಿಗೆ ಅರ್ಪಿಸಿ ಬೀಳ್ಕೊಟ್ಟರು.

ಈ ವಿಷಯ ಈಗ ಪ್ರಭುಗಳ ತಲೆ ಕೊರೆಯುವುದನ್ನು ಕಡಿಮೆ ಮಾಡಿದರೂ, ಇದರ ಬಗ್ಗೆ ಅವರಿಗೆ ಕುತೂಹಲ ಕೆರಳಿತ್ತು. ತಾವಾರೂ ಕೇಳದ ರೀತಿಯ ಪ್ರಸಂಗ ಇದು. ಅದರ ಮೂಲಚೂಲಗಳನ್ನು ಹುಡುಕಬೇಕೆಂಬ ತನಿಖೆಗಾರನ ಹುಮ್ಮಸ್ಸು ಪ್ರಭುಗಳಲ್ಲಿ ಸೇರಿದ್ದರಿಂದಾಗಿ ಅಂದೇ ಬಸವಣ್ಣನವರನ್ನು ಕರೆತರಲು ಬಿಜ್ಜಳರು ಬಳಿಯಟ್ಟಿದರು.

ಬಸವಣ್ಣನವರಿಗೆ ತಮ್ಮನ್ನು ಚಕ್ರವರ್ತಿಗಳು ಕಾಣಲು ಬಯಸುವ ಕಾರಣ ತಿಳಿಯಲಿಲ್ಲ. ಎಂದಾದರೊಮ್ಮೆ ಇಂಥ ಕರೆ ಅರಮನೆಯಿಂದ ಬರುವುದು ಸಾಮಾನ್ಯವಾದ ವಿಷಯ ತಾನೇ. ಹಾಗೆ ಕರೆಕಳಿಸುವಾಗ ಇಂಥ ವಿಷಯದ ಬಗ್ಗೆ ಚರ್ಚೆಗಾಗಿ ಎಂದೇನೂ ತಿಳಿಸುವ ಸಂಪ್ರದಾಯ ಅರಮನೆಯದಲ್ಲ. ರಾಜರು ಹೇಳಿದ ಕ್ಷಣ ಸೇವಕರು ಬರಬೇಕಾದದ್ದು ಅವರ ಕರ್ತವ್ಯ. ಬಂದ ಮೇಲೆ ವಿಷಯ ಏನೆಂದು ಪ್ರಸ್ತಾಪಿಸುವುದು. ಅಲ್ಲದೆ, ಪ್ರಭುಗಳು ಚರ್ಚಿಸಬೇಕಾದ ವಿಚಾರವು ಬೇರೆಲ್ಲರಿಗೂ ತಿಳಿಯಬೇಕೇ? ಎಷ್ಟೋ ರಾಜಕಾರ್ಯಗಳಿರುತ್ತವೆ, ಯಾರಿಗೂ ತಿಳಿಯದಂತೆ ನಡೆಸಬೇಕಾದ ವ್ಯವಹಾರವಿರುತ್ತದೆ, ಕೆಲವು ವೇಳೆ ಖಾಸಗೀ ಮಾತುಕತೆಗಳೂ ಇರಬಹುದಲ್ಲ. ಎಲ್ಲವನ್ನೂ ಎಲ್ಲರಿಗೂ ತಿಳಿಯುವಂತೆ ಮಾಡಿದರೆ ರಾಜ್ಯಸೂತ್ರಗಳನ್ನು ಹಿಡಿದು ಆಡಳಿತ ನಡೆಸಿದಂತೆಯೇ!

ನಿಗದಿಯಾದ ವೇಳೆಗೆ ಬಸವಣ್ಣನವರು ಅರಮನೆಯ ಮಂತ್ರಾಲೋಚನೆಯ ಕೋಣೆಗೆ ಬಂದರು. ಕೆಲವು ವೇಳೆ ಮಾತುಕತೆಗಳು ನಡೆಯುತ್ತಿದ್ದುದು ಆಸ್ಥಾನದಲ್ಲಿ; ಮತ್ತೆ ಕೆಲವು ವೇಳೆ ಮಂತ್ರಾಲೋಚನೆ ಕೋಣೆಯಲ್ಲಿ. ಚರ್ಚಿಸಲು

ಹಲವಾರು ಜನರಿದ್ದರೆ ಬೇರೊಂದು ಕಡೆ. ಪ್ರಭುಗಳು ಚರ್ಚಿಸಬೇಕಾಗಿದ್ದುದು ಹಲವರೊಡನೆ ಸೇರಿ ಸಭೆಯಲ್ಲಲ್ಲ, ಏಕಾಂತದಲ್ಲಿ ಬಸವಣ್ಣನವರೊಡನೆ ಮಾತ್ರ. ಹಾಗಾಗಿ ಅವರನ್ನು ಆಪ್ತಕೋಣೆಗೆ ಕರೆತರಲು ಪ್ರಭುಗಳು ಮುಂಚೆಯೇ ಆದೇಶವಿತ್ತಿದ್ದರು.

ಬಸವಣ್ಣನವರು ಕೋಣೆಯನ್ನು ಪ್ರವೇಶಿಸಲು ಬಾಗಿಲು ತೆರೆದ ಪಡಿಹಾರಿ ಅವರನ್ನು ಒಳಗೆ ದಾರಿತೋರಿಸಿ ಸುಖಾಸೀನದ ಮೇಲೆ ಕುಳಿತುಕೊಳ್ಳಲು ಬಿನ್ನವಿಸಿದ. ಮತ್ತೊಬ್ಬ ಚಿನ್ನದ ಹರಿವಾಣದಲ್ಲಿ ಬೆಳ್ಳಿಯ ಬಟ್ಟಲಲ್ಲಿ ಗಮಗಮಿಸುವ ಕೇಸರಿ, ಹಾಲನ್ನು ತಂದು ಅವರ ಮುಂದೆ ನೀಡಿ "ಒಪ್ಪಿಸಿಕೊಳ್ಳಬೇಕು" ಎಂದ. ಬಸವಣ್ಣನವರು ಮುಗುಳ್ನಕ್ಕು, ಬೇಡ ಎಂದು ಸೂಚಿಸಿದರು. "ಚಿತ್ತ" ಎಂದವನೇ ಅವನು ಅದನ್ನು ವಾಪಸ್ಸು ತೆಗೆದುಕೊಂಡು ಹೋದ.

ಒಂದೆರಡು ಕ್ಷಣಗಳಲ್ಲಿಯೇ ಪ್ರಭುಗಳು ದಯಮಾಡಿಸಿದರು. ಸಾರ್ವಜನಿಕ ಸ್ಥಳಗಳಲ್ಲಿ ನಡೆವ ಸಮಾರಂಭಗಳಲ್ಲಿಯೋ ಅಥವಾ ಆಸ್ಥಾನದಲ್ಲಿ ನಡೆವ ಚರ್ಚೆಗಳಲ್ಲಿಯೋ ಭಾಗವಹಿಸಲು ಪ್ರಭುಗಳು ಆಗಮಿಸುವಾಗ ಅವರ ಬಿರುದಾವಳಿಗಳ ನಿರ್ಘೋಷ ನಡೆಯುವುದು. ಆದರೆ ಆಪ್ತಕೋಣೆಯ ಸಭೆಗೆ ಬರಲು ಅಂಥ ಸಂಪ್ರದಾಯವಿಲ್ಲ. ಪ್ರಭುಗಳು ಹತ್ತು ಹೆಜ್ಜೆ ಅಲ್ಲಿರುವಾಗಲೇ ಒಬ್ಬ ಚಾರ ಸರಸರ ಬಂದು ಬಸವಣ್ಣನವರಿಗೆ "ಪ್ರಭುಗಳ ಸವಾರಿ ಬರುತ್ತಿದೆ" ಎಂದು ಹೇಳಿ, ಕೈಜೋಡಿಸಿ ಮೈಸೆಟೆದು ಪಕ್ಕಕ್ಕೆ ನಿಂತ. ಕ್ಷಣದಲ್ಲಿಯೇ ಪ್ರಭುಗಳು ಬಂದರು. ಎಂದಿನಂತೆ ಬಸವಣ್ಣನವರು ಮುಗುಳ್ನಗುತ್ತ ಕೈಜೋಡಿಸಿ ತುಸು ಶಿರಬಾಗಿಸಿ ನಿಂತರು. ಪ್ರಭುಗಳೂ ಮುಖದಲ್ಲಿ ಮುಗುಳ್ನಗುವನ್ನು ಮುಡಿದು ತಮ್ಮ ಕರ ಚಾಚುತ್ತ ಬಂದು ಬಸವಣ್ಣನವರ ಮುಗಿದ ಕರಗಳನ್ನು ಅದುಮುತ್ತ "ದಣ್ಣಾಯಕರು ಕ್ಷೇಮವೇ?" ಎಂದರು.

ದಣ್ಣಾಯಕ ಎಂಬುದು ಮಾರ್ಯಾದೆಯ ಪದ. ರಾಜರ ಸೇವೆಯಲ್ಲಿರುವ ಹಿರಿಯ ಅಧಿಕಾರಿಗಳಿಗೆ ಬರುವ ಸಹಜ ಮರ್ಯಾದೆ. ದಂಡನಾಯಕ ಎಂಬುದರ ಸಂಕ್ಷಿಪ್ತ ರೂಪ ಅದು. ಸೇನಾಪತಿಗಳಿಗೆ ಮಾತ್ರವೇ ಆ ಬಿರುದು ಎಂದೇನಿಲ್ಲ. ಹೆಸರು ಹಿಡಿದು ಕರೆಯಬಾರದಾಗಿ, ಅಥವಾ ಸಾಂಪ್ರದಾಯಿಕವಾಗಿ ಮಾತನಾಡಿಸಬೇಕಾದಾಗ ಹೀಗೇ ಪದನಿಮಿತ್ತ ಕರೆಯುವುದು ವಾಡಿಕೆ.

"ಸಂಗನ ಕೃಪೆಯಿಂದ ಚೆನ್ನಾಗಿದ್ದೇನೆ."

"ಮನೆಯಲ್ಲಿ ಎಲ್ಲರೂ ಸೌಖ್ಯವಷ್ಟೇ?"

"ಎಲ್ಲ ಚೆನ್ನಾಗಿದ್ದಾರೆ, ಪ್ರಭುಗಳೇ" ಎಂದರು ಬಸವಣ್ಣ ಸೌಜನ್ಯಪೂರ್ಣರಾಗಿ. ನೀವೆಲ್ಲ ಚೆನ್ನಾಗಿದ್ದೀರಾ ಎಂದು ಮರುಪ್ರಶ್ನೆ ಹಾಕಬೇಕಾಗಿಲ್ಲ. ಹಿರಿಯರನ್ನು ಕೇಳುವುದು ಸಮಂಜಸವಲ್ಲ. ಅವರ ಯೋಗಕ್ಷೇಮದ ವಿಷಯವನ್ನು ಇತರರಿಂದ ತಿಳಿದುಕೊಳ್ಳಬೇಕಾದುದು ಕಿರಿಯರ ಕರ್ತವ್ಯ. ಅರಮನೆಯಲ್ಲಿ ನಡೆಯುವುದೆಲ್ಲ ಹೀಗೇ ವಿಧಿಬದ್ಧವಾಗಿ. ಆದರೂ ಬಿಜ್ಜಳ ಪ್ರಭುಗಳು

ಬಸವಣ್ಣನವರ ಬಗ್ಗೆ ಇರಿಸಿಕೊಂಡ ವಿಶ್ವಾಸ ಪ್ರಾಮಾಣಿಕವಾದದ್ದಲ್ಲ ಎಂದು ತಿಳಿಯಲು ಕಾರಣವಿಲ್ಲ, ಅವರು ಕ್ಷೇಮಸಮಾಚಾರ ಕೇಳಿದ್ದು ಕೇವಲ ಉಪಚಾರಕ್ಕೆಂದೇನೂ ಭಾವಿಸಬೇಕಾಗಿಲ್ಲ.

"ಕುಳಿತುಕೊಳ್ಳಿ" ಎಂದು ತಾವೂ ಪಲ್ಲಂಗದ ಮೇಲೆ ದಿಂಬಿಗೆ ಒರಗಿ ಪ್ರಭುಗಳು ಕುಳಿತರು. ಬಸವಣ್ಣನವರು ತಮ್ಮ ಆಸನದ ಮೇಲೆ ಕುಳಿತರು, ತುಸು ಮುಂದೆ ಬಾಗಿ.

ಪ್ರಭುಗಳು ಸೆಟೆದು ನಿಂತಿದ್ದ ಭಟನತ್ತ ತಿರುಗಿ ಏನನ್ನೋ ತರುವಂತೆ ಸೂಚಿಸಿದರು. ಅವನು ಹಾಗೇ ಸೆಟೆದುಕೊಂಡೇ ನಡೆದು ಹೋಗಿ ಅರೆಕ್ಷಣದಲ್ಲಿ ಹರಿವಾಣದಲ್ಲಿ ಬಟ್ಟೆಯ ತುಂಡೊಂದನ್ನು ಮಡಿಸಿಟ್ಟುಕೊಂಡು ಪ್ರಭುಗಳ ಮುಂದೆ ಇರಿಸಿದ ಪೀಠದ ಮೇಲಿರಿಸಿ, ಅವರ ಕಣ್ಸನ್ನೆಯರಿತಂತೆ ಬಾಗಿಲು ಸರಿಸಿಕೊಂಡು ಹೊರನಡೆದ.

"ಬಸವಣ್ಣನವರೇ, ಯಾವುದೇ ರಾಜಕಾರ್ಯಕ್ಕೆಂದು ತಮ್ಮನ್ನು ಬರಮಾಡಿಕೊಳ್ಳಲಿಲ್ಲ" ಎಂದು ಆಡುವ ಮಾತಿಗೆ ಪೀಠಿಕೆ ಹಾಕಿದರು. ಹಾಗಾದರೆ ಏನು ವಿಷಯ ಎಂದು ತಿಳಿಯಲು ಕುತೂಹಲವಿರುವಂತೆ ಬಸವಣ್ಣನವರು ಪ್ರಭುಗಳತ್ತ ನೋಡಿದರು.

"ಮೊನ್ನೆ ನಾವು ತುಂಬೇಶ್ವರ ಸನ್ನಿಧಿಗೆ ಹೋಗಿ ಬರುವಾಗ ಒಂದು ವಿಚಿತ್ರ ನಡೆಯಿತು. ನೀವಾದರೂ ಯಾವುದೇ ದೇವಸ್ಥಾನಕ್ಕೆ ಬರುವವರಲ್ಲವಲ್ಲ...." ಎಂದು ಮಾತನ್ನು ಪ್ರಭುಗಳು ಅಲ್ಲಿಗೆ ನಿಲ್ಲಿಸಿದರು. ಹೌದು, ಬಸವಣ್ಣನವರು ದೇವಸ್ಥಾನಕ್ಕೆ ಹೋಗುತ್ತಿರಲಿಲ್ಲ ಮಾತ್ರವಲ್ಲ, ದೇವಸ್ಥಾನ ನಿರ್ಮಾಣ, ಅದಕ್ಕಾಗಿ ನೀಡುವ ದಾನ – ದತ್ತಿ, ಉತ್ಸವಾದಿಗಳು ಸರಿಯಲ್ಲವೆಂದೇ ವಾದಿಸುವವರು; ಹಾಗೆ ನಡೆದುಕೊಳ್ಳುತ್ತ ಬಂದಿರುವವರು. ಪ್ರಭುಗಳ ಮಾತನ್ನು ಕೇಳಿ ಮುಗುಳ್ನಕ್ಕರು. ವಿಷಯ ಮುಂದುವರಿಸಲು ಇದರಿಂದ ಅನುವು ದೊರೆಯಿತು ಪ್ರಭುಗಳಿಗೆ. "ನೀವು ಗುಡಿಗೆ ಬರುವ ಬರದಿರುವ ವಿಚಾರವಲ್ಲ ಮುಖ್ಯವಾದದ್ದು; ಅಥವಾ ಅದು ಎಂದಿಗೂ ಚರ್ಚೆಯ ವಿಷಯವಲ್ಲ ಅಂದುಕೊಳ್ಳಿ. ಅವತ್ತು ಏನಾಯಿತೆಂದರೆ...." ಎಂದು ಹೇಳುವಾಗ ಅವರ ಕಣ್ಣುಗಳು ಮಂದೆ ಹರಿವಾಣದಲ್ಲಿದ್ದ ಬಟ್ಟೆಯ ಕಡೆ ಹೋಯಿತು. "ನಾವು ವಾಪಸ್ಸು ಬರುವಾಗ ಈ ಬಟ್ಟೆ ತುಂಡೊಂದನ್ನು ದಾರಿಯ ಹುಣಸೇಮರದ ಕೊಂಬೆಗೆ ನೇತುಹಾಕಿದ್ದುದು ನಮ್ಮ ಗಮನಕ್ಕೆ ಬಂದಿತು."

"ಹೌದು, ಅಂಥದ್ದೊಂದು ಪ್ರಸಂಗ ಅಂದು ನಡೆಯಿತೆಂದು ನನ್ನ ಕಿವಿಗೂ ಬಿತ್ತು, ಪ್ರಭುಗಳೇ!" ಊರೆಲ್ಲ ಹರಡಿದ್ದ ವದಂತಿ ಅವರ ಕಿವಿಗೆ ಬೀಳದಿರಲು ಸಾಧ್ಯವೇ? ಆದರೆ ಏನೇನೋ ರೂಪ ಅದಕ್ಕೆ. ಏಕೆಂದರೆ ಬಸವಣ್ಣನವರಿಗೆ ಆ ವಿಷಯವನ್ನು ಹೇಳಿದವರೆಷ್ಟೋ ಮಂದಿ. ಕನಿಷ್ಠ ಪಕ್ಷ ಮೂರು ನಾಲ್ಕು ಜನವಾದರೂ ಆ ಬಗ್ಗೆ ತಿಳಿಸಿದ್ದರು. ಆದರೆ ಬಟ್ಟೆಯ ತುಂಡು ಅನ್ನುವ ಅಂಶದ ಹೊರತು ಇನ್ನಾವುದರಲ್ಲೂ ಹೊಂದಾಣಿಕೆಯಿರಲಿಲ್ಲ. ಈ ವಿಷಯದ ಬಗ್ಗೆ

ಅವರು ಇದುವರೆಗೆ ತಲೆಕೆಡಿಸಿಕೊಂಡವರಲ್ಲ. ರಾಜರ ಮಾರ್ಗಮಧ್ಯದಲ್ಲಿ ನಡೆಯುವ ಎಲ್ಲದರ ಬಗ್ಗೆಯೂ ತಾವೇಕೆ ಯೋಚಿಸಬೇಕು. ಅಲ್ಲದೆ ಹಾಗೆ ನಡೆಯುವುದು ಒಂದೇ ಎರಡೇ, ಯಾರು ಅದನ್ನೆಲ್ಲ ಗಮನಿಸಬೇಕೋ ಅವರು ಹಾಗೆ ಮಾಡಲಿ ಎಂಬ ಅಕೌತುಕ ಪ್ರವೃತ್ತಿ ಬಸವಣ್ಣನವರದು. ಆದರೆ ಏಕಾಂತದಲ್ಲಿ ಮಾತನಾಡಲೆಂದು ತಮ್ಮನ್ನು ಬರಮಾಡಿಕೊಂಡು ಪ್ರಭುಗಳು ಈಗ ಪ್ರಸ್ತಾಪಿಸುತ್ತಿರುವುದು ಆ ಬಟ್ಟೆಯ ತುಂಡಿನ ಬಗ್ಗೆ! ಕೇಳಿದ ಆ ವಿಷಯದ ಬಗೆಗಿನ ವದಂತಿಗಳೇನೇ ಇರಲಿ ಅದು ಮುಖ್ಯವಾದ ಘಟನೆಯೆಂಬುದೀಗ ಖಚಿತವಾದಂತಾಯಿತು. ಕನಿಷ್ಠ ಪಕ್ಷ ಪ್ರಭುಗಳ ಮನಸ್ಸಿನಲ್ಲಿ ಆ ವಿಚಾರ ಪ್ರಮುಖವಾಗಿ ಕಾಡುತ್ತಿದೆ, ಅದರೀಗ ಅದರ ಬಗ್ಗೆ ಪ್ರಸ್ತಾಪಿಸಿದ್ದು ಆನುಷಂಗಿಕವಾಗಿಯೂ ಅಲ್ಲ. ಎಲ್ಲ ಪೂರ್ವಯೋಜಿತವೆಂಬಂತೆ ಅದನ್ನಾಗಲೇ ತರಿಸಿಯೂ ಇರಬೇಕೆಂದರೆ, ಇದು ವಿಶೇಷವೆನಿಸಿರಬೇಕು ಎಂಬುದರಿಂದಾಗಿ ಬಸವಣ್ಣನವರಲ್ಲಿ ಕುತೂಹಲ ಕೊನರೊಡೆಯಿತು.

"ಇದೊಂದು ಹೊಸ ಬಗೆ ಆವಿಷ್ಕಾರಗೊಂಡಂತಿದೆ ನಮ್ಮ ನಾಡಿನಲ್ಲಿ" ಎಂದರು ಪ್ರಭುಗಳು, ಏನನ್ನೊ ಯೋಚಿಸುತ್ತ, ನಿಧಾನವಾಗಿ.

"ಹಾಗೇ ಕಾಣುತ್ತಿದೆ,"ಎಂದಷ್ಟೇ ಹೇಳಿ ಬಸವಣ್ಣನವರು ಸುಮ್ಮನಾದರು. ಪ್ರಭುಗಳು ಈ ಗಳಿಗೆಯಲ್ಲಿ ಚಪ್ಪಾಳೆ ತಟ್ಟಲು ಸೇವಕನೊಬ್ಬ ಬಾಣದಂತೆ ಬಾಗಿಲು ತೆರೆದುಕೊಂಡು ಬಂದ. ಕೈಯನ್ನು ಚಾಚುತ್ತ ಸೂಚಿಸಿದಾಗ ಬಂದ ಸೇವಕ ಆ ಬಟ್ಟೆಯನ್ನು ಹರಿವಾಣದಿಂದ ತೆಗೆದು ನೆಲದ ಮೇಲೆ ಉದ್ದವಾಗಿ ಹಾಸಿ ನಿಂತುಕೊಂಡು ಪ್ರಭುಗಳೆಡೆ ನೋಡಿದ. ಅವರ ಸೂಚನೆಯರಿತು ಮತ್ತೆ ಬಾಗಿಲು ಮುಂದೆ ಸರಿಸಿಕೊಂಡು ಅವನು ಹೊರನಡೆದ.

ಪ್ರಭುಗಳು ಈಗ ಬಸವಣ್ಣನವರ ಕಡೆಗೆ ನೋಡಿದರು. ಅವರು ಬಟ್ಟೆಯ ಮೇಲಿದ್ದ ಬರಹಗಳ ಮೇಲೆ ಕಣ್ಣಾಡಿಸುತ್ತಿದ್ದರು. ಹಾಗೆ ಮಾಡಿದವರೇ ಮರುಕ್ಷಣ ಪ್ರಭುಗಳೆಡೆ ಮುಖ ತಿರುಗಿಸಿದರು.

"ಏನನ್ನಿಸುತ್ತಿದೆ" ಎಂಬಂತೆ ಕಣ್ಣಲ್ಲಿಯೇ ವಿಚಾರಿಸುವಂತೆ ಪ್ರಭುಗಳು ನೋಡಿದಾಗ ಬಸವಣ್ಣನವರು, "ಈ ಎರಡನೆಯ ಸಾಲು ನನ್ನ ವಚನವೊಂದರಲ್ಲಿ ಬರುತ್ತದೆ" ಎಂದರು. ಅವರ ಮಾತಿನಲ್ಲಿ ವಿಶೇಷ ಅರ್ಥವೇನೂ ಇದ್ದಂತಿರಲಿಲ್ಲ.

"ಆ!" ಎಂದರು ಪ್ರಭುಗಳು ಚಕಿತರಾಗಿ.

"ಹೌದು ಪ್ರಭುಗಳೇ" ಎಂದರು ತಮ್ಮ ಮಾತನ್ನು ಖಚಿತಗೊಳಿಸುತ್ತ.

"ರಾಜಗುರುಗಳು ಹೇಳಿದ್ದು ಸರಿ, ಹಾಗಾದರೆ" ಎಂದು ತಮ್ಮಲ್ಲಿಯೇ ಎಂಬಂತೆ ಪ್ರಭುಗಳು ಮೆತ್ತಗೆ ಅಂದುಕೊಂಡರು. ಆಮೇಲೆ ಬಸವಣ್ಣನವರ ಕಡೆ ತಿರುಗಿ, "ಈ ಮಾತುಗಳು ಶರಣರ ಮಾತುಗಳಿದ್ದಂತಿದೆ ಎಂದಿದ್ದರು ಅವರು," ತಮ್ಮ ಮೆಲುಸಿಡಿಯ ವ್ಯಾಖ್ಯಾನದಂತೆ ಹೇಳಿದರು.

ಬಸವಣ್ಣನವರು ಮುಗುಳ್ನಕ್ಕರು.

"ಬಸವಣ್ಣನವರೇ, ಈ ಬರೆಹವನ್ನು ಓದಿದರೆ ನಿಮ್ಮ ಮನಸ್ಸಿಗೆ ತಕ್ಷಣ ಏನನ್ನಿಸುತ್ತದೆ?"

"ಅಂಥ ಸ್ಪಷ್ಟವಾದದ್ದೇನೂ ನನಗೆ ಕಾಣುತ್ತಿಲ್ಲ; ಪ್ರಭುಗಳೇ ಆದರೂ...."

ಈ ಆದರೂ ತಮ್ಮ ಸಮಸ್ಯೆಗೆ ಪರಿಹಾರ ಒದಗಿಸಬಹುದೆಂಬ ಆಸೆ ಪ್ರಭುಗಳಲ್ಲಿ ಕಾಣಿಸಿತು. "ಆದರೂ...." ಮುಂದೇನು ಎಂದು ಕೇಳುವವರಂತೆ ಆ ಮಾತನ್ನೇ ಪ್ರಭುಗಳು ಪುನರುಚ್ಚರಿಸಿದರು.

"ಸಂಬಂಧವಿದೆಯೋ ಇಲ್ಲವೋ ಹೇಳಲಾರೆ. ಆದರೆ ನನಗನ್ನಿಸುತ್ತದೆ...." ಎಂದು ಪ್ರಾರಂಭಿಸಿದ ಬಸವಣ್ಣನವರು ಮಾತು ನಿಲ್ಲಿಸಿ ಮೊದಲ ಸಾಲಿನ ಮೇಲೆ ತಮ್ಮ ಅಭಿಪ್ರಾಯಕ್ಕೆ ಹಿನ್ನೆಲೆಯನ್ನು ಯೋಚಿಸಿದರು. ತಾವು ಆಚರಿಸಬಯಸಿದ್ದ ಮದುವೆಗೆ ಸಂಬಂಧಪಟ್ಟಂತಿದೆ ಮೊದಲ ಸಾಲು. ಅದನ್ನು ಕಂಡರೆ ಆ ಮದುವೆಗೆ ಬರೆದವನ ವಿರೋಧವಿದ್ದಂತಿದೆ ಎನಿಸುತ್ತದೆ, ಮಾತಿನ ವ್ಯಂಗ್ಯವನ್ನು ಗಮನಿಸಿದರೆ. ಅದೂ ಆ ವ್ಯಂಗ್ಯ ಆ ಮಾತಿಗೆ ದಕ್ಕಿಸಿರುವುದು ತಮ್ಮ ವಚನದ ಸಾಲೊಂದನ್ನು ತಗುಲಿಹಾಕುವುದರ ಮೂಲಕ. ಅಂದು ತಮ್ಮ ಮಹಮನೆಯಲ್ಲಿ ಸಂಜೆ ನಡೆದ ಶರಣರ ಸಭೆಯ ಚಿತ್ರ ಬಸವಣ್ಣನವರ ಮನಸ್ಸಿನಲ್ಲಿ ಹಾದುಹೋಯಿತು. ಈ ಮದುವೆಗೆ ವಿರೋಧವ್ಯಕ್ತಪಡಿಸಿ ಮಾತನಾಡಿದವರ ಧ್ವನಿ ಈಗಲೂ ಕಿವಿಯಲ್ಲಿ ಅನುರಣನಗೊಂಡಂತೆ ಆಗುವುದಾದರೂ ಅವರ ಮುಖಗಳು ಮನೋಭಿತ್ತಿಯಲ್ಲಿ ಮೂಡಲಾರವು. ಅವರ ಹೆಸರುಗಳೇನೋ ತಿಳಿಯದು. ಕೆಲವರ ಹೆಸರೇನೆಂದು ಸಭೆಯ ಇತರರೇ ಕೇಳಿ ಅವರಿಂದಲೇ ತಿಳಿದುಕೊಂಡಿದ್ದರು. ನಿಜವಾದ ಹೆಸರುಗಳೇ ಇರಬಹುದು ಅವು. ಬಾಯಿಗೆ ಬಂದ ಹೆಸರು ಹೇಳಿರಲೂಬಹುದು. ಏಕೆಂದರೆ ವ್ಯಕ್ತಪಡಿಸುತ್ತಿದ್ದದ್ದು ವಿರೋಧಾಭಿಪ್ರಾಯ. ಯಾಕೆ ಸುಮ್ಮನೆ ಜಟಿಲಮಾಡಿಕೊಳ್ಳಬೇಕೆಂದು ಸುಳ್ಳು ಹೆಸರು ಹೇಳಿರಬೇಕು, ಅಥವಾ ಹೇಳಿರಬಹುದು. ಆದರೆ ಯಾವುದೋ ಹೆಸರುಗಳನ್ನವರು ಹೇಳಿದ್ದರು. ಆದರೆ ಅವು ನೆನಪಿಲ್ಲ. ಉತ್ತಣ್ಣನನ್ನೋ ಅಪ್ಪಣ್ಣನನ್ನೋ ಕೇಳಿದರೆ ಹೇಳಿಯಾರು. ಅಥವಾ ಅವರ ನೆನಪಿನಲ್ಲೂ ಉಳಿದಿದೆಯೋ ಇಲ್ಲವೋ. ಆ ವ್ಯಕ್ತಿಗಳೇ ಈ ಬಟ್ಟೆಯ ಮೇಲೆ ಬರೆದಿರಬಹುದೇ? ಅವರೇಕೆ ಬರೆಯಬೇಕು, ನೇರವಾಗಿ ತಮ್ಮ ಅಭಿಪ್ರಾಯವನ್ನು ಎದುರಿಗೆ ಹೇಳಿದರಲ್ಲ, ಅದನ್ನು ಪ್ರಭುಗಳ ಗಮನಕ್ಕೆ ತರಲು ಈ ಕೆಲಸ ಮಾಡಿರಬಹುದೇ? ಅಂದರೆ ನಮ್ಮ ವಿರುದ್ಧ ಪ್ರಭುಗಳಿಗೆ ಈ ಬಗ್ಗೆ ಹೇಳಲಿಕ್ಕಾಗಿಯೇ? ಈ ಅನುಮಾನ ಬಂದ ಕ್ಷಣ ಅಣ್ಣನವರ ಮುಖದಲ್ಲಿ ವಿಷಾದದ ಗೆರೆ ಮೂಡಿತು. ಭಕ್ತರ ನಡುವಣ ವಿವಾದ ಹೊರಕ್ಕೆ ಹೋಗಬಹುದೇ? ಎಂದು ಖೇದವಾಯಿತು. ಆದರೆ ಅವರೇ ಇದನ್ನು ಮಾಡಿದವರು ಎನ್ನಲು ಆಧಾರಗಳಿಲ್ಲ. ಅಲ್ಲದೆ, ನಮ್ಮ ನಮ್ಮಲ್ಲಿ ಆದ ವಿವಾದವನ್ನು ಇತರರ ಗಮನಕ್ಕೆ ತರುವುದು ಸೂಕ್ತವಲ್ಲ.

"ಏನು ಬಸವಣ್ಣನವರೇ, ಸುಮ್ಮನಾಗಿಬಿಟ್ಟಿರಿ?"

ಎಲ್ಲೋ ಯೋಚಿಸುತ್ತಿದ್ದ ಅವರ ಮನಸ್ಸು ಪ್ರಭುಗಳ ಪ್ರಶ್ನೆಯಿಂದ ನೆಲಕ್ಕೆ ಅಪ್ಪಳಿಸಿಬಿದ್ದ ರೆಕ್ಕೆ ಹರಿದ ಪಕ್ಷಿಯಂತಾಯಿತು.

"ಏನಿಲ್ಲ," ಎಂದು ಮತ್ತೆ ಸುಮ್ಮನಾದರು. ಕೇತಗ-ಚಂದಲೆಯರ ಮದುವೆಯ ವಿಷಯ ಜಗಜ್ಜಾಹೀರವಾಗಿದೆ, ಹಾಗಾಗಬೇಕೆಂಬುದೇ ತಮ್ಮ ಇಚ್ಛೆಯೂ ಅಲ್ಲವೇ. ಅದನ್ನು ಪ್ರಭುಗಳಿಗೆ ವಿವರಿಸಿ ಈ ಬರಹಕ್ಕೂ ಅದಕ್ಕೂ ಸಂಬಂಧವಿರಬಹುದೆಂಬ ತಮ್ಮ ಅನುಮಾನವನ್ನು ಹೇಳಿಕೊಳ್ಳಬಹುದಲ್ಲ. ಆದರೆ ಸಮ್ಮಲ್ಲಿ ಆದ ವಿವಾದವನ್ನು ಹೇಳಬಾರದು, ವಿಶೇಷವಾಗಿ ವಿರೋಧಿಸಿದ ಆ ವ್ಯಕ್ತಿಗಳ ಬಗ್ಗೆಯೂ ಹೊರಗಿನವರಿಗೆ ಮಾಹಿತಿ ನೀಡಬಾರದು. ಅಲ್ಲದೆ, ಈ ಬಟ್ಟೆ ಪ್ರಕರಣದ ಹೊತ್ತಿಗಾಗಲೇ ಮದುವೆಯ ವಿಚಾರ ಬಹಳ ಜನಕ್ಕೆ ತಿಳಿದಿದೆ. ಅವರಲ್ಲಿ ಯಾರಾದರೂ ಮಾಡಿರಬಹುದು ಅಥವಾ ಶರಣವಿರೋಧಿಗಳೇ ಮಾಡಿರಬಹುದಲ್ಲ.

ಬಸವಣ್ಣನವರು ಆಯೋಜಿಸಿದ ಕೇತಗ-ಚಂದಲೆಯರ ಮದುವೆಯ ಬಗ್ಗೆ ಸಂಕ್ಷಿಪ್ತವಾಗಿ ಪ್ರಭುಗಳಿಗೆ ವಿವರಿಸಿದರು.

"ಹಾಗಾದರೆ ಇದಕ್ಕೆ ಒಂದು ರೀತಿ ನೀವೇ ಕಾರಣ!" ಅರ್ಧ ಪರಿಹಾಸದಿಂದ ಪ್ರಭುಗಳು ಹೇಳಿದರು: "ಗಾಬರಿಯಾಗಬೇಡಿ ದಣ್ಣಾಯಕರೇ, ನಿಮ್ಮ ವಚನದ ಸಾಲು ಇಲ್ಲಿದೆಯಲ್ಲ ಅದಕ್ಕೆ, ನೀವು ಕಾರಣರೆಂದೆವು" ಎಂದು ಜೋರಾಗಿ ನಕ್ಕರು. ಅಣ್ಣನವರಿಗೂ ನಗು ಬಂತು.

"ಹೀಗೆನ್ನುತ್ತೇವೆಂದು ಬೇಸರಿಸಿಕೊಳ್ಳಬೇಡಿ. ಯಾಕೆ ಇಂಥ ವಿಚಾರಗಳನ್ನು ಮಾಡುತ್ತೀರಿ, ಬಸವಣ್ಣನವರೇ ಈ ಮದುವೆಯನ್ನು ನಿಲ್ಲಿಸಿಬಿಡಿ."

"ಅದು ಅಷ್ಟು ಸುಲಭವೂ ಅಲ್ಲ, ನಿಲ್ಲಿಸುವ ಇಚ್ಛೆಯೂ ಇಲ್ಲ. ಅದು ನಡೆಯಲೇಬೇಕೆಂದು ನಮ್ಮೆಲ್ಲರ ಬಯಕೆ." ಹಾಗನ್ನುವಾಗ ಮಾತು ಸ್ವಲ್ಪ ನಿಂತಿತು. 'ನಮ್ಮೆಲ್ಲರ' ಎಂದರೆ ಯಾರು? ನಮ್ಮಲ್ಲಿ ಕೆಲವರು ಅದಕ್ಕೆ ವಿರೋಧವಾಗಿದ್ದಾರಲ್ಲ ಎಂಬ ಕಾರಣದಿಂದ ಹೀಗಾಗಿರಬೇಕು.

"ಬಲವಂತವೋ ಆಗ್ರಹವೋ ಅಲ್ಲ, ಸಲಹೆ ಅಷ್ಟೆ. ಸುಮ್ಮನೆ ಏಕೆ ಗೋಜಲು?"

"ನಮ್ಮ ಶರಣ ಮಾರ್ಗ ವೈದಿಕ ಪರಂಪರೆಯ ವ್ಯಾಪ್ತಿಗೆ ಬರುವುದಿಲ್ಲವಲ್ಲ ಪ್ರಭುಗಳೇ, ಹಾಗಾಗಿ...."

"ನಾವು ಬಲ್ಲೆವು ಬಸವಣ್ಣನವರೇ, ನೀವು ಯಜ್ಞವಿರೋಧಿಗಳು. ವರ್ಣ ವಿರೋಧಿಗಳು, ಬಲ್ಲೆವು ಅವನ್ನು. ಜೈನರೋ ಬೌದ್ಧರೋ ಹೀಗೆ ನಡೆದರೆ ಅದನ್ನು ನಾವು ಹೇಗೆ ತಡೆಯಬಲ್ಲೆವು, ತಡೆಯಬೇಕೇಕೆ? ವೈದಿಕ ಪರಂಪರೆಯನ್ನು ಅನುಸರಿಸುವ ಜನರಲ್ಲಿ ಜಾತಿಸಂಕರವಾಗಬಾರದೆಂದು ನಮ್ಮ ಶಾಸ್ತ್ರಗಳು ಹೇಳುತ್ತವೆ. ಅಂಥವು ನಡೆದಾಗ ನಾವು ಅದನ್ನು ತಡೆಯುವ ಅಧಿಕಾರ ಹೊಂದಿದ್ದೇವೆ. ಆದರೆ ನಿಮ್ಮ ಪಂಗಡದಲ್ಲಿ ಜಾತಿಭೇದವೇ ಇಲ್ಲವಲ್ಲ."

"ಹೌದು ಪ್ರಭುಗಳೇ, ಜಾತಿನಿರಾಕರಣೆಯೇ ನಮ್ಮ ಗುರಿ. ಅದಕ್ಕಾಗಿಯೇ ಈ ಮದುವೆಯನ್ನು ಕುಟುಂಬವ್ಯಾಪ್ತಿಯಿಂದ ಹೊರಗೆ ತಂದು ಸಮಾಜದ ಘಟನೆಯನ್ನಾಗಿ ಮಾಡುತ್ತಿರುವುದು."

"ಬಸವಣ್ಣನವರೇ, ನಿಮ್ಮ ಮಾರ್ಗ ನಿಮ್ಮದು, ನಮ್ಮ ದಾರಿ ನಮ್ಮದು. ನಿಮ್ಮ ಆದರ್ಶಗಳು ರಾಜದ್ರೋಹವಾಗದಿರುವವರೆಗೆ ಅದಕ್ಕೆ ನಮ್ಮ ಅಡ್ಡಿಯಿಲ್ಲ. ನಿಮ್ಮ ದಾರಿಯಲ್ಲಿ ನೀವು ನಡೆಯಿರಿ. ಆದರೆ ಸ್ನೇಹಿತರಾಗಿ ಒಂದು ಮಾತು ಹೇಳಬೇಕೆನ್ನಿಸುತ್ತದೆ. ರಾಜಕಾರಣವು ಹೇಗೋ ಧರ್ಮಕಾರಣವೂ ಹಾಗೇ ಎಂಬುದು ನಮ್ಮ ಅನಿಸಿಕೆ. ನಮ್ಮ ಅನುಯಾಯಿಗಳಂತೆ ಕಾಣಿಸುವವರಲ್ಲಿ ಕೆಲವರು ವಿರೋಧಿಗಳಿರಬಹುದು. ನಿಮ್ಮ ಹಿಂಬಾಲಕರೆಲ್ಲ ಬಸವಣ್ಣನವರುಗಳಲ್ಲ. ನಿಮ್ಮ ಎಚ್ಚರ ನಿಮ್ಮನ್ನು ಕಾಪಾಡಲಿ. ಅದಿರಲಿ. ಈ ವಿಷಯ ತನಿಖೆ ನಡೆಸುತ್ತೇವೆ. ನಿಮ್ಮ ಹಿತವೂ ಸಾಮ್ರಾಜ್ಯಕ್ಕೆ ಮುಖ್ಯ" ಎನ್ನುತ್ತ ಪ್ರಭುಗಳು ಅಣ್ಣನವರ ಭುಜ ತಟ್ಟಿ ಹೊರನಡೆದರು.

"ನಮಸ್ಕಾರ" ಎನ್ನುತ್ತ ಅವರಿಗೆ ನಸುಬಾಗಿ ಕೈಜೋಡಿಸಿ ನಿಂತ ಬಸವಣ್ಣನವರೂ ಪ್ರಭುಗಳು ಹೋದಮೇಲೆ ಹೊರಡಲು ಸಿದ್ಧರಾದರು.

## ೧೦

ನೀಲಳದು ನನ್ನನ್ನು ಕೆಣಕುವ ರೂಪ. ಮೊದಲು ಅವಳ ಮುಖದ ಮೇಲೆ ಸದಾ ತುಂಟತನವೇ ತುಂಬಿರುತ್ತಿತ್ತು. ಅದಕ್ಕೇ ಅವಳ ಜೊತೆ ಎಂದರೆ ಉಲ್ಲಾಸದ ವಾತಾವರಣ. ಗಂಗೆ ಹಾಗಲ್ಲ. ಅವಳೊಡನೆ ಚೆಲ್ಲಾಟವೆಂದರೂ ಗಂಭೀರವಾಗಿರಬೇಕು! ಅವಳೂ ಚೆಲುವೆಯೇ. ಆದರೆ ಮುಖದಲ್ಲಿ ಆಹ್ವಾನದ ಬಗೆಯಿರಲಿಲ್ಲ. ಸದಾ ಗಂಭೀರೆ. ಚಿಕ್ಕ ವಯಸ್ಸಿನಲ್ಲಿಯೇ ಅವರ ತಾಯಿ ತೀರಿಕೊಂಡಿದ್ದರಿಂದ ಮೊದಲನೆಯ ಮಗಳಾದ ಅವಳೇ ಮನೆಯ ಹಿರಿಯ ಹೆಂಗಸಲ್ಲವೇ? ಹೀಗಾಗಿ ಅವಳು ಹಿರಿಯಳಂತೆ ವರ್ತಿಸಲು ಚಿಕ್ಕವಯಸ್ಸಿನಿಂದಲೇ ಪ್ರಾರಂಭಿಸಿರಬೇಕು. ಬೇಗ ತಾಯಿ ಇಲ್ಲವಾದರೆ ಮೊದಲ ಮಗಳ ಮೇಲೆ ಮನೆಯ ಜವಾಬ್ದಾರಿಯೆಲ್ಲ ಬಿದ್ದುಬಿಡುತ್ತದೋ ಏನೋ. ತಂದೆ ಇಲ್ಲವಾದರೆ ಮೊದಲ ಮಗನ ಮೇಲೆ ಹೊಣೆ ಬೀಳುವುದಲ್ಲ ಹಾಗೆ. ಮಗನಾದರೆ ಸಂಸಾರ ನಿರ್ವಹಿಸುವ ಹೊಣೆ, ಮಗಳಾದರೆ ಸಂಸಾರ ನಡೆಸಿಕೊಂಡು ಹೋಗುವ ಹೊಣೆಯೇನೋ. ಅಂತೂ ಗಂಗೆ ಮೊದಲಿನಿಂದ ಹಾಗೆಯೇ. ಹೀಗಾಗಿ ನೀಲಳೆಂದರೆ ನನ್ನ ಮನಸ್ಸಿನಲ್ಲೆಲ್ಲೋ ವಿಶೇಷ ಬಯಕೆಯೋ ಏನೋ.

ಆದರೆ ಬರಬರುತ್ತಾ ಹೇಗಾಗಿ ಹೋಯಿತು ನಮ್ಮ ಸಂಸಾರ! ಇಬ್ಬರು ಹೆಂಡಿರ ಕಾಟ, ಇರುಳು ತಿಗಣೆಯ ಕಾಟ ಎಂಬ ರೀತಿಯ ಬವಣೆಯೇನೂ ನನಗಾಗಲಿಲ್ಲ. ಇಬ್ಬರೂ ಅಕ್ಕತಂಗಿಯರಾಗಿದ್ದವರು, ಈಗಲೂ ಹಾಗೆಯೇ ಇದ್ದಾರೆ. ಆದರೆ ಮೊದಲಿನ ಸೊಬಗು ಸಂಸಾರದಲ್ಲಿಲ್ಲವೆಂದರೆ ಅದೇನೂ ದೂರಿದಂತಲ್ಲ. ನಮ್ಮೆಲ್ಲರಿಗೂ ವಯಸ್ಸಾಗಿದೆಯೆಂಬುದೂ ಮುಖ್ಯವಾದ ಕಾರಣವೇ. ಸದ್ಯ 'ಸವತಿಗಂಧವಾರಣೆ'ಯರಾಗುವ ಛಲ ಇಬ್ಬರಿಗೂ ಇಲ್ಲ. ಅವಳ ಸೊಕ್ಕು ಮುರಿಯುವ ಹಟ ಇವಳಿಗೆ, ಇವಳ ಹೆಮ್ಮೆ ಅಡಗಿಸುವ ಛಲ ಅವಳಿಗೆ ಎಂಬ ರೀತಿಯಾಗಿದ್ದಿದ್ದರೆ ನನ್ನ ಗತಿಯೇನಾಗುತ್ತಿತ್ತೋ!

ಗಂಗೆ ಹಿರಿಯವಳಾಗಿ ಹಿರಿಯ ನಡವಳಿಕೆಯವಳೇ ಆಗಿದ್ದಾಳೆ. ಮದುವೆಯಾದ ನಂತರ ದೀರ್ಘಕಾಲದವರೆಗೆ ನಮಗೆ ಮಕ್ಕಳಾಗಲಿಲ್ಲ. ಆದರೆ ಅದಕ್ಕೆ ಕಾರಣವನ್ನಾರು ಹೇಳಬೇಕು. ಅವರಿಬ್ಬರೂ ವಿವಿಧ ದೇವರುಗಳಲ್ಲಿ ಹರಕೆ ಹೊತ್ತಿರಬೇಕು. ನನಗೆ ಕಾಣದಂತೆ ಪ್ರಾರ್ಥನೆ ನೆಲೆಸಿರಬೇಕು. ಈ ಗುಡಿ – ಗುಂಡಾರಗಳ ಗೊಡವೆ ನನಗೆ ಮೊದಲಿನಿಂದಲೂ ಇಲ್ಲ. ಆದರೆ ಆ ವಿಷಯವಾಗಿ ನನ್ನ ಮನದಿಂಗಿತವನ್ನು ಬಲವಂತವಾಗಿ ಇತರರ ಮೇಲೆ

ಹೇರುವಂತಹವನು ನಾನಲ್ಲ, ಅದು ಹೆಂಡತಿಯರಾದರೆ ಏನು? ನನ್ನ ಮನವರಿಕೆಯನ್ನು ವಿವರಿಸಬಲ್ಲೆ, ವಾದಿಸಬಲ್ಲೆ, ಅವರಿಗೆ ಈ ವಿಚಾರದ ಬಗೆಯನ್ನು ಕಣ್ಣಿಗೆ ಕಾಣಿಸಬಲ್ಲೆನೆ? ಯಾರಿಗೂ ಅದು ಸಾಧ್ಯವಿಲ್ಲ. ಕೂಡಲಸಂಗ ಎಂದರೆ ನನ್ನ ಮನದಾಳದಲ್ಲಿ ತಂಗಾಳಿಯು ತೀಡುತ್ತದೆ, ನಿಜ. ಆದರೆ ಸಂಗನೆಂದರೆ ಹೇಗಿದ್ದಾನೆ, ನೀನು ಕಂಡಿದ್ದೀಯ ಎಂದು ಕೇಳಿದರೆ ಏನು ಹೇಳಬಲ್ಲೆ ನಾನು. ಕಂಡಿದ್ದೇನೆ ಎನ್ನಬಹುದು. ನನ್ನ ರೀತಿಯಲ್ಲಿಯೇ ಕಂಡಿದ್ದೇನೆ. ಆದರೆ ಇತರರಿಗೆ ಕಾಣಿಸಬಹುದೇ? ನಾನು ಕಂಡದ್ದನ್ನು ಬೇರೆಯವರಿಗೆ ಪ್ರತ್ಯಕ್ಷ ಮಾಡಿಸಬಲ್ಲ ಶಕ್ತಿ ಯಾರಿಗಾದರೂ ಇದ್ದರೆ ಜಗತ್ತು ಹೀಗೆ ಇರುತ್ತಿರಲೇ ಇಲ್ಲ. ಪ್ರತಿಯೊಬ್ಬರಿಗೂ ತನ್ನದೇ ಕಣ್ಣು, ತನ್ನದೇ ಕಾಣ್ಕೆ. ಇನ್ನೊಬ್ಬನ ಕಣ್ಣಿನಲ್ಲಿ ಕಾಣುವುದು ಯಾರಿಗೂ ಸಾಧ್ಯವಿಲ್ಲ. ತಾನೇ ಕಾಣಬೇಕು, ಅದನ್ನೇ ತಾನೇ ಇಷ್ಟಲಿಂಗ ಎನ್ನುವುದು.

ಕೂಡಲ ಸಂಗ ಎಂದರೆ ಸಂಗಮದ ಮಂಟಪದ ನಡುವಣ ಲಿಂಗ ನನ್ನ ಮನದಲ್ಲಿ ಸುಳಿಯುವುದು ನಿಜವಾದರೂ, ಅದನ್ನೇ ದೈವವೆಂದು ಹೇಳುವವನಲ್ಲ ನಾನು. ಹಾಗಾದರೆ ದೇವರ ರೂಪವೇನೆಂದು ಕೇಳಿದರೆ ನಾನೇನು ಹೇಳಬಲ್ಲೆ? ಜೇಡರ ದಾಸಿಮಯ್ಯನವರ ವಚನ ನನ್ನ ಮೇಲೆ ತುಂಬ ಪ್ರಭಾವ ಬೀರಿರುವುದನ್ನು ನಾನು ಒಪ್ಪಲೇಬೇಕು. ಅವರನ್ನು ಕಂಡು ಮಾತನಾಡಿದಾಗ ಅವರೇ ತಮ್ಮ ವಚನವನ್ನು ಹೇಳಿದ್ದರು, ಮಾತಿನ ನಡುವೆ. ಆಕ್ಷಣದವರೆಗೂ ನಾನು ಸಂಗನೆಂದರೆ ಏನು ತಿಳಿದಿದ್ದೆನೋ ಆ ವಚನ ಕೇಳಿದ ಮೇಲೆ ಬೇರೆ ರೂಪದಲ್ಲಿ ಕಾಣಿಸತೊಡಗಿತು. ಅಲ್ಲಿಯವರೆಗೆ ನನ್ನ ತಿಳಿವಳಿಕೆ ತಪ್ಪಾದುದೇನೂ ಆಗಿರಲಿಲ್ಲವೆಂದೇ ಈಗಲೂ ಅನ್ನಿಸುತ್ತದೆ, ಆದರೆ ಆ ಮಾತು ಕೇಳಿದ ಮೇಲೆ ನಾನು ವಸ್ತುಗಳನ್ನು ಕಾಣುವ ರೀತಿಯೇ ಬದಲಾಯಿಸಿತೆಂದು ಅನ್ನಿಸುತ್ತದೆ. ಎಂದರೆ ನಮ್ಮ ಅನುಭವ ವ್ಯತ್ಯಾಸವಾದಂತೆ ನಮ್ಮ ದೃಷ್ಟಿ ಬದಲಾಯಿಸುತ್ತದೆ.

ಜೇಡರ ದಾಸಿಮಯ್ಯನವರನ್ನು ನಾನು ಮೊದಲು ಕಂಡು ಅದೆಷ್ಟೋ ವರ್ಷಗಳಾಗಿಬಿಟ್ಟಿವೆ. ನನಗಾಗ ಇನ್ನೂ ಹುರುಪು ಅತೀವವಾಗಿದ್ದ ಕಾಲ. ಪರವೂರುಗಳನ್ನು ಸುತ್ತುವುದೆಂದರೆ ಎಲ್ಲಿಲ್ಲದ ಆಸಕ್ತಿ. ಹೊಸ ಜಾಗ, ಹೊಸ ಜನ ಎಂದರೆ ನನ್ನ ಕ್ಷೇತ್ರ ವಿಸ್ತಾರವಾಯಿತೆಂದೇ ಅಲ್ಲವೇ. ಮಾತುಕತೆ–ಚರ್ಚೆ–ಸಂವಾದ, ಇವುಗಳಿಂದ ಜೀವನದಲ್ಲಿ ಹೊಸ ಬೆಳಕು. ಹಾಗೆಯೇ ಸುರಪುರ ಪ್ರಾಂತಕ್ಕೊಮ್ಮೆ ಭೇಟಿಯಿತ್ತಿದ್ದೆ. ಯಾಕೆ ಎಂದು ಹೇಳಲಾರೆ, ಎಲ್ಲ ಮರೆತಿದೆ. ಆದರೆ ಆ ಪುಣ್ಯಾತ್ಮನನ್ನು ಮರೆಯಲಾದೀತೆ! ಆ ಕಾಲಕ್ಕಾಗಲೇ ದಾಸಿಮಯ್ಯನವರು ಅಗಾಧ ಕಾಯಕನಿಷ್ಠರೆಂಬ ಮಾತು ಎಲ್ಲೆಡೆಗೂ ಜನಜನಿತವಾಗಿತ್ತು. ಅವರು ವಸ್ತ್ರವನ್ನು ನೇಯ್ದು ಶಿವನಿಗರ್ಪಿಸಿ ತವನಿಧಿಯನ್ನು ಸಂಪಾದಿಸಿದರೆಂಬ ಕತೆಯೂ ಹಬ್ಬಿತ್ತು. ಕತೆಗೆ ಕಾಲುಗಳಿಲ್ಲ, ಇರುವುದು ರೆಕ್ಕೆಗಳೇ; ಹಾಗೆ ಹಾರುತ್ತದೆ ಅದು. ವಸ್ತ್ರ ನೇಯುವುದು, ಶಿವಾರ್ಪಣಮಾಡುವುದು, ಸಿಧಿ ಪಡೆಯುವುದು – ಎಂದರೆ ಈ ಜನಗಳಿಗೆ ಅರ್ಥವಾಗುವುದು ಅಷ್ಟೇ; ಉದ್ದ ಅಳತೆಗಳುಳ್ಳ

ಬಟ್ಟೆ, ಕಣ್ಣಾರೆ ನೋಡಿ ಶಿವನನ್ನು ಮಾತಾಡಿಸಿ ಅದನ್ನು ನೀಡುವುದು, ಅಪಾರ ಹಣ ಸಂಪಾದನೆ ಮಾಡುವುದು! ದಡ್ಡಜನ! ಕತೆಗಳ ಹಿಂದೆ ಒಂದು ಭಾವನೆಯಿರುತ್ತದೆ, ಅದೇ ಅದರ ಸತ್ವ ಎಂಬ ತಿಳಿವಳಿಕೆ ಇವರಿಗೆ ಬರುವುದಾದರೂ ಎಂದು!

ಜೇಡರ ದಾಸಿಮಯ್ಯನವರು, ನಾನವರನ್ನು ಕಾಣುವ ಕಾಲಕ್ಕಾಗಲೇ, ಮುಪ್ಪಿನಲ್ಲಿದ್ದರು. ಜೋತು ಬಿದ್ದ ಹುಬ್ಬುಗಳು, ಸುಕ್ಕುಗಟ್ಟಿದ್ದ ಮುಖ, ನಸುಬಾಗಿದ್ದ ಸೊಂಟ. ಆದರೇನು ಅವರ ಕಂಠ ಕಂಚಿನದು, ಅವರ ಮಾತು ಬಾಣಗಳಂತೆ ಮೊನಚಾದದ್ದು. ಅವರನ್ನು ಕಾಣಲೆಂದೇ ನಾನು ಮುದನೂರಿಗೆ ಆಗ ಹೋಗಿದ್ದೆ, ಮತ್ತಾವುದೋ ಜಾಗದಲ್ಲಿ ನನ್ನ ಕೆಲಸವಿದ್ದರೂ. ನನ್ನ ವಿಚಾರವನ್ನು ಬಲ್ಲಂತೆ ಮಾತನಾಡಿದರು. “ನಮ್ಮ ಜನದ ಕತ್ತಲ್ ಹರಿಸಬೇಕಪ್ಪ. ನಮ್ಮ ಕಾಲವಾಯಿತು, ನಿಮ್ಮಂತೋರು ಬೆಳಗಬೇಕು” ಎಂದರು.

ಮನೆಯಲ್ಲಿ ಉಪಚಾರವಾದ ಮೇಲೆ ಊರ ಹೊರಗೆ ಕರೆದೊಯ್ದರು. ಬೆಂಗಾಡ ಪ್ರದೇಶದಲ್ಲಿ ನಮ್ಮೂರು ಅಂದರೆ ಚೆಲುಮೆ ಇದ್ದ ಹಾಗೆ ಎಂದು ಹೆಮ್ಮೆಯಿಂದ ಹೇಳಿಕೊಂಡರು. ಊರ ಹೊರವಲಯದಲ್ಲಿ ಸುತ್ತಾಡುವಾಗ ಅವರ ಮಾತು ನಿಜವೆನ್ನಿಸಿತು ಬಹಳ ಹಳೆಯ ರಾಮನಾಥನ ದೇವಸ್ಥಾನ; ಅದರ ಹಿಂಭಾಗಕ್ಕೇ ಒಂದು ಕೊಳ. ಒಂದೇನು, ಆ ಊರಲ್ಲಿ ಅಂಥ ಹಲವಾರು ಜಲಾಶಯಗಳು. ಸಮೃದ್ಧವಾದ ನೀರಿನ ಆಸರೆ, ಅದಿದ್ದರೆ ಹಸುರಿಗೆ ಬರವೇ? ಎಲ್ಲೆಲ್ಲೂ ಕಣ್ಣು ತುಂಬುವ ಗಿಡಮರಗಳು ಬಿದಿರಿನ ಮೆಳೆಗಳು ಹಣ್ಣು ಹಂಪಲು ಬಿಡುವ ವೃಕ್ಷಗಳು ಕಬ್ಬು ಬೆಳೆವ ಗದ್ದೆಗಳು. ಸುತ್ತುಮುತ್ತಲೂ ಅಪರೂಪವಾದ ತೆಂಗಿನ ಮರಗಳು ಬೇರೆ! ಊರಿನ ಬಗ್ಗೆ ದಾಸಿಮಯ್ಯನವರರಿಗೆ ಅಪಾರ ಹೆಮ್ಮೆ. ಆ ಊರು ಹಾಗೇ. ಮುಂದೆ ಊರು ದಾಸಿಮಯ್ಯನವರ ಬಗ್ಗೆ ಅದೇ ಹೆಮ್ಮೆ ತಾಳುತ್ತದೆ ಎನಿಸಿತ್ತು ಆಗಲೂ.

ಮಾತಿಗೆ ಮಾತು ಬಂದು, ಎಲ್ಲ ಕಡೆ ತೋರಿಸುತ್ತ “ರಾಮನಾಥನ್ನ ನೋಡಿದಿರಿ, ಹೇಗೆ ಕಾಣ್ತಾನೆ? ಅವನೆಲ್ಲಿದಾನೆ ಆ ಗುಡಿಯಲ್ಲಿ, ಅವನಿರೋದು ಇಲ್ಲಿ” ಎಂದಿದ್ದರು. ಕಣ್ಣಿಗೆ ಕಾಣುವುದರಲ್ಲೆಲ್ಲ ರಾಮನಾಥನೇ ಕಾಣಿಸುತ್ತಾನೆ ಅವರಿಗೆ. ಅವರೆಂದೂ ಮಠಕ್ಕೆ ಹೋದವರಲ್ಲ, ಗುಡಿಗೆ ಹೋದವರಲ್ಲವಂತೆ. ಪೈರು ಪಚ್ಚೆಯಲ್ಲಿ, ಕಾಡುಮೇಡಲ್ಲಿ, ಗಿಡಗಂಟೆಯಲ್ಲಿ – ಎಲ್ಲೆಲ್ಲಿ [illegible] ಮೊಳೆಯುತ್ತದೋ ಅಲ್ಲಿ ರಾಮನಾಥನಿದ್ದಾನೆ ಎಂದರು. “[illegible] ಮುಡಿಗೆಯಿದೆ ಕೇಳಿದ್ದೀರಾ?” ಎಂದರು “ಏನು?” ಎಂದೆ.

“ಮುಡಿಗೆಯೆಂದರೆ ನಿಜವಾಗಿಯೂ ಮುಡಿಗೆಯಲ್ಲ ಬಸವಣ್ಣ, [illegible] ಪ್ರಶ್ನೆಯಿರುವ ವಚನ. ಕೇಳಿ : ಖಂಡಿತವಿಲ್ಲದ ಅಖಂಡಿತನ. [illegible] ಕಂಡವರುಂಟೆ ಹೇಳಯ್ಯಾ? ಕಂಡೆನೆಂಬುವರೆಲ್ಲ ಬಂಜೆಯ ಮಕ್ಕಳು [illegible] ಬಂದ ಹೆಜ್ಜೆಯ ಕೆಳಗೆ ಒಂದು ಬಿಂದು ಹುಟ್ಟಿ ಬೆಳಗುವ ಚಂದದ [illegible] ಕಾಣಾ ರಾಮನಾಥ, ಹೆಂಗಿದೆ?” ಎಂದಿದ್ದರು ಕಣ್ಣಲ್ಲಿ ಕಾಂತಿ [illegible]. ಆ ವಯಸ್ಸಲ್ಲಿ ಅಂಥ ಮಾತು ಎಂದರೆ ಅವರು ಜೀವ ಅದೆಷ್ಟು ಪಕ್ವ[illegible]ಕು!

ಮುಂದೆ ಆ ಮಾತು, ಆ ವಚನ ನನ್ನ ಯೋಚನಾಪಿಧಾನವನ್ನು ಬದಲಿಸಿತ್ತು. ಎಷ್ಟೋ ವೇಳೆ ಒಳಗೆ ಅನಿಸಿದ್ದನ್ನು ಹೊರಗೆ ನೇರವಾಗಿ ಹೇಳಲಾಗುವುದಿಲ್ಲ. ಅದೂ ಒಂದು ಮುಖ್ಯ ಹೊಣೆಯನ್ನು ಹೊತ್ತವನು. ಆದರೆ ಈಗೀಗ ದಾಸಿಮಯ್ಯನವರ ಮಾತು ನನ್ನನ್ನಾವರಿಸಿದೆ. ಅವರಂತೆ ಯೋಚಿಸಿದರೆ ಕೊನೆಗೆ ಆ ನಿಲವನ್ನೇ, ತಲುಪುವುದೇನೋ. ಅವನನ್ನು ಕಂಡೆವೆಂದು ಹೇಳುವವರು ಬಂಜೆಯ ಮಕ್ಕಳಂತೆ! ನಿಜ ಬಂಜೆಗೆ ಮಕ್ಕಳೇ ಇಲ್ಲ, ಅಂಥವರು ಎಷ್ಟು ಸತ್ಯವೋ, ಕಂಡೆವೆನ್ನುವುದೂ ಅಷ್ಟೇ!

ಎಲ್ಲಿಂದಲೆಲ್ಲಿಗೋ ಹಾರುತ್ತದೆ ಮನಸ್ಸು. ಗಂಗೆ–ನೀಲರು ಮಗುವಿಗಾಗಿ ಹಂಬಲಿಸಿದರು ಎಂದೆ. ಅದು ಕೊನೆಗೂ ಫಲಪ್ರದವಾದೀತೆಂಬಂತೆ ನೀಲ ಬಸುರಾದಳು. ಆಗಿನ ಅವಳ ಚೆಲುವೇನು, ನಿಲವೇನು! ಗಂಗೆ ಕೂಡ ಸಂಭ್ರಮಿಸಿದಳು. ತನಗೆ ಬಸಿರು ನಿಲ್ಲಲಿಲ್ಲವಲ್ಲ ಎಂದು ಅವಳ ಮನದಾಳದಲ್ಲೂ ಕೊರಗಿರಲಿಲ್ಲವೇ? ಇದ್ದಿರಬೇಕು, ತಪ್ಪೇನು? ಅಂಥ ತಾಯ್ತನದ ಬಯಕೆ ಅಷ್ಟು ಆಳವಾಗಿರುವುದರಿಂದಲೇ ಅಲ್ಲವೇ ನಮ್ಮಂಥವರು ಹುಟ್ಟುವುದು. ಆದರೆ ಅವಳ ಹೃದಯ ಪರಿಶುದ್ಧವಾದದ್ದು. ತಂಗಿ ಬಸುರಾದಳೆಂದು ಎಲ್ಲ ಜವಾಬ್ದಾರಿ ತಾನು ಹೊತ್ತಳು. ನೀಲಳನ್ನು ನೆಲದ ಮೇಲೆ ಓಡಾಡಲು ಬಿಡಲಿಲ್ಲ. ಮುಂದೆ ನೀಲಳೇ ಉದ್ಗರಿಸಿದ್ದಳು: "ಅಮ್ಮ ಇದ್ದಿದ್ದರೆ ಇದಕ್ಕಿಂತ ಇನ್ನೇನು ಅತಿಶಯವಾಗಿ ನೋಡಿಕೊಳ್ಳುತ್ತಿದ್ದಳು!" ಎಂದು. ಗಂಗೆ ಮಗುವನ್ನು ಹಡೆಯದೇ ತಾಯ್ತನವನ್ನು ತುಂಬಿಕೊಂಡಿದ್ದಳು. ಗಂಗೆ–ನೀಲ ವಜ್ರ–ನೀಲಮಣಿಯ ಹಾಗೆ. ನನ್ನ ಅದೃಷ್ಟ–ಅವರು ನನಗೆ ಹೆಂಡಿರಾದದ್ದು, ಅದೂ ಒಮ್ಮೆಗೇ. ಕಣ್ಣು ಬಿಟ್ಟಾಗ ಎರಡೂ ಕಣ್ಣು ಬಿಡುವಂತೆ ಆಗಿತ್ತು ಅವರನ್ನು ಪಡೆದದ್ದು.

ತಂಗಿಯ ಬಾಣಂತನವೆಲ್ಲ ಗಂಗಳ ಜವಾಬ್ದಾರಿಯೇ. ಮನೆಯಲ್ಲೇನೂ ಕೊರತೆಯಿಲ್ಲ. ಇದ್ದದ್ದು, ಸಿದ್ಧರಸರು ಇಲ್ಲದಿದ್ದ ಕೊರತೆ ಮಾತ್ರ. ಅವರೂ ಕೊನೆಯುವರೆಗೆ ಮೊಮ್ಮಗುವನ್ನು ಕಾಣಲು ಹಂಬಲಿಸಿದ್ದರು. ಆದರೆ ಅವರ ಆಸೆ ನೆರವೇರುವ ಮುಂಚೆ ತೀರಿಕೊಂಡರು. ನೀಲ ಎಷ್ಟೋ ವೇಳೆ ಹುಡುಗಾಟದಿಂದ ತಂದೆಗೆ, "ಇವರನ್ನೇ ನಿನ್ನ ಮೊಮ್ಮಗ ಅಂದುಕೋ" ಎಂದು ನನ್ನ ಕಡೆ ತೋರಿಸಿ ಅಂದದ್ದುಂಟು. ನನಗೆ ಮಾವನವರ ಮುಂದೆ ನನ್ನನ್ನು ತಮಾಷೆ ಮಾಡುತ್ತಾಳಲ್ಲ ಇವಳು ಎಂಬ ಹುಸಿಮುನಿಸು. ಆದರೆ ಸಿದ್ಧರಸರು ನನ್ನನ್ನು ನೋಡಿಕೊಳ್ಳುತ್ತಿದ್ದುದು ತಾನೇ ಕಡಮೆ ಅಕ್ಕರೆಯಿಂದಲೇ. ನನ್ನನ್ನೇಕೆ, ನಾಗಕ್ಕ–ಚೆನ್ನಬಸವರ ಬಗ್ಗೆಯೂ ಅವರದು ಅಷ್ಟೇ ಪ್ರೀತಿ. ಮದುವೆಯಾದ ಮೇಲೆ ನಾಗಕ್ಕ ನಾನು ಚೆನ್ನಬಸವರು ಅವರೊಡನೆಯೇ ವಾಸಮಾಡಲು ಬಂದೆವಲ್ಲ. ಆಗ ದಿನವೂ ಹೊರಗಡೆಯಿಂದ ಬರುವಾಗಲೇ ಚೆನ್ನಣ್ಣಾ ಎಂದುಕೊಂಡೇ ಬರುವರು. ಇವನೂ ಅಷ್ಟೆ; ಆ ಧ್ವನಿ ಕೇಳಿದ ಕೂಡಲೇ ಚಿಗರೆಯ ಹಾಗೆ ಒಳಗಿನಿಂದ ಹಾರಿಬಂದು ಅಂಗಳದಲ್ಲಿರುತ್ತಿದ್ದ. ಮಕ್ಕಳಿಗೆ ವಿಶ್ವಾಸ ತೋರಿಸುವವರೆಂದರೆ ಅಪಾರ ಪ್ರೇಮ. ಅದೂ ವಯಸ್ಸಾದರೆ, ಮಕ್ಕಳ ನಿಸ್ಸಹಾಯಕತೆ ಬರುವುದರಿಂದಲೋ ಏನೋ, ಅವರ ಮುಗ್ಧತೆಯೂ ಬರುವಂತೆ ಕಾಣುತ್ತದೆ. ಅದಕ್ಕೇ ಮುದುಕರಿಗೂ ಮಕ್ಕಳಿಗೂ ಸ್ನೇಹ!

ಸಿದ್ಧರಸರು ಮೊಮ್ಮಗನನ್ನು ಕಾಣುವ ಅದೃಷ್ಟವನ್ನು ಪಡೆದು ಬಂದಿರಲಿಲ್ಲ. ಅವರೆ ನಾವು ತಾನೇ ಪಡೆದು ಬಂದ ಅದೃಷ್ಟವೆಂಥದು? ಮಗು ಆಯಿತು, ನೀಲಳಿಗೆ. ಅದೂ ಎಂಥ ಚೆಂದಗಾರ. ನೀಲಳಂತೆಯೇ ಇವನು ಎನ್ನುತ್ತಿದ್ದೆ. "ನಿಮಗೆ ಏನೂ ಗೊತ್ತಾಗುವುದಿಲ್ಲ, ಇಲ್ಲಿ ನೋಡಿ" ಎಂದು ನಾಲ್ಕಾರು ತಿಂಗಳ ಮಗುವಿನ ಕೈ ಬೆರಳನ್ನು ತನ್ನ ಕೈಯಲ್ಲಿ ತೆಗೆದು ಒಂದೊಂದಾಗಿ ಬಿಡಿಸುವಳು. ನನ್ನ ಕೈ ಹಿಡಿದು ಬೆರಳನ್ನು ವಿಂಗಡಿಸಿ ತೋರಿಸುವಳು. "ನೋಡಿದಿರಾ, ಒಂದೇ ತದ್ರೂಪು" ಎನ್ನುವಳು. ಮಗುವಿನ ಕಾಲನ್ನು ಮುಂದೆ ಹಿಡಿದು, "ಎಲ್ಲಿ, ನಿಮ್ಮ ಕಾಲು ತನ್ನಿ" ಎನ್ನುವಳು. ಅವಳ ಜೊತೆಗಿರುವುದೆಂದರೆ ನನಗೆ ಎಲ್ಲಿಲ್ಲದ ಸಂತಸವೆಂದೆನಲ್ಲ, ಇವಕ್ಕೇ. ಚಕಚಕ ಮಾತು, ಗಲಗಲ ಗದ್ದಲ, ಜಳಜಳ ನಗು. ನನ್ನ ಕಾಲು ಮುಂದಿಟ್ಟರೆ, ಅದರ ಬಳಿ ಮಗುವಿನ ಕಾಲಿಟ್ಟು "ನೋಡಿ, ನೀವೇ" ಎನ್ನುವಳು. ಮಗುವಿನ ಕಣ್ಣ ಮೇಲೆ ಕೈಯಿಟ್ಟು, ಆಮೇಲೆ ನನ್ನ ಕಣ್ಣುಗಳ ಮೇಲೆ; ಮೂಗಿನ ಮೇಲೆ ಕೈಯಿಟ್ಟು, ಮತ್ತೆ ನನ್ನ ಮೂಗಿನ ಮೇಲೆ; ಹಣೆಯ ಮೇಲೆ ಕೈಯಾಡಿಸಿ, ನನ್ನ ಹಣೆಯ ಮೇಲೆ – ಹೀಗೆ ಮಗು–ನಾನು ಎರಡರ ಲಕ್ಷಣಗಳನ್ನು ವಿವರವಾಗಿ ಹೋಲಿಸಿ ಒಂದೇ ಎನ್ನುವಳು. "ಒಂದಷ್ಟು ಕಲ್ಪನೆ ಮಾಡಿಕೊಳ್ಳಿ. ಇಪ್ಪತ್ತು ವರ್ಷದ ನಂತರ ನನ್ನ ರಾಜ ಹೆಂಗೆ ಕಾಣಿಸುವನೆಂದು, ಆಮೇಲೆ ಹೋಗಿ ಕನ್ನಡಿ ನೋಡಿಕೊಳ್ಳಿ; ಎರಡೂ ಒಂದೇ" ಎನ್ನುವಳು.

ಇದೇನು ಮಗುವಿನ ಬಗೆಗಿನ ಅಕ್ಕರೆಯೋ, ನನ್ನ ಮೇಲಿನ ಪ್ರೀತಿಯೋ ಎಂಬ ಅಚ್ಚರಿ ನನಗೆ. ಮಗುವೆಂದರೆ ಇಂಥ ಸಂಭ್ರಮವೇ! ನನಗೆ ಸಂಭ್ರಮವಿರಲಿಲ್ಲವೆಂದಲ್ಲ. ಎಷ್ಟಾಗಲಿ, ಹೊರಗೆ ಜವಾಬ್ದಾರಿ ಹೊತ್ತವನು ನಾನು. ಜೋಳವಾಳಿಯ ಜೊತೆ, ವೇಳೆವಾಳಿಯೂ ಇತ್ತಲ್ಲವೇ? ಭಂಡಾರದ ಕೆಲಸ ಮತ್ತು ಚಳುವಳಿ–ಸಂಘಟನೆ–ಶರಣಮಾರ್ಗ. ಮನೆಗೆ ತಡವಾಗಿ ಹೋದರೆ ನೀಲ ಹುಸಿಮುನಿಸು ತೋರಿಸುತ್ತಿದ್ದಳು. "ನಿಮಗೆ ಯಾವಾಗಲೂ ಏನೋ ಕೆಲಸ ಮುಖ್ಯ. ಮನೆಯ ಕಡೆ ಧ್ಯಾಸವಿಲ್ಲ" ಎನ್ನುವಳು.

"ಇನ್ನೇನು ನಿನಗೆ ಸಂಗಾತಿ ಸಿಕ್ಕಿದನಲ್ಲ. ನಾನೇಕೆ ಇನ್ನು?" ಎಂದು ತಮಾಷೆ ಮಾಡುತ್ತಿದ್ದೆ ನಾನು.

"ನನ್ನ ಮುಂದೇನು ಕುಳಿತುಕೋಬೇಕಾಗಿಲ್ಲ ನೀವು. ಅಕ್ಕನ ಜೊತೆಗೆ ಯಾರಾದರೂ ಬೇಡವೇನು?"

"ಅಂದರೆ ನಾನು ನಿನಗೆ ಬೇಡವೇ. ಹಾಗಾದರೆ ಅವನನ್ನು ಗಂಗೆಯ ಬಳಿ ಕೊಡು."

"ಅಂದರೆ, ನಾನು ನಿಮಗೆ ಬೇಡವೇ?" ಎನ್ನುವಳು ಗಂಗೆ. ನಿಜವಾಗಿಯೂ ತಮಾಷೆಯ ಮಾತಿನಲ್ಲಿ ನೋವಿನ ಎಳೆ ಸೇರಿಬಿಡುತ್ತದಲ್ಲ ಎಷ್ಟೋ ವೇಳೆ. ಮಗುವಾಗಲಿಲ್ಲವೆಂದು ಗಂಡ ನನ್ನನ್ನು ದೂರಸರಿಸುತ್ತಿದ್ದಾನೆ ಎಂಬ ಭಾವನೆ ಅವಳಿಗೆ ಬರಬಾರದೆಂದು ತುಂಬ ಎಚ್ಚರದಿಂದಲೇ ಇರುತ್ತಿದ್ದೆ ನಾನು. ಆದರೆ ಮಾತಿನ ಭರದಲ್ಲಿ ಇಂಥ ನುಡಿಗಳು ಬಾಯಿಂದ ಬಂದುಬಿಡುತ್ತಿದ್ದವು. ಎಂಥ

ತಪ್ಪು ಮಾಡಿದೆ ಎಂಬ ಭಾವನೆ ಮೂಡಿ ತಕ್ಷಣ ನಾನು ಗಂಭೀರನಾಗುತ್ತಿದ್ದೇನೋ. ಗಂಗೆಯ ಕಣ್ಣಂಚಿನಲ್ಲಿ ನನ್ನ ಮಾತು ಹನಿಯನ್ನು ಮೂಡಿಸಿರಬಹುದೇ ಎಂಬ ಅಳುಕು ಎದೆಯನ್ನು ಹಿಂಡುತ್ತಿತ್ತು.

"ಅಕಾ, ಅದು ಯಾಕೆ ಹಾಗೆ ಕುಳಿತಿರಿ? ಸುಮ್ಮನೆ ಹೇಳಿದರೆ ಅಷ್ಟು ಗಂಭೀರವಾಗುವುದ?" ಎಂದು ತಾನೇ ಮುಂದೆ ಸರಸವಾಗಿ ಸಂಭಾಷಣೆಯನ್ನು ನಿರ್ವಹಿಸುವಳು ಗಂಗೆ. ಎಂತಹ ನಿರ್ಮಲ ಇವಳ ಮನಸ್ಸು ಎಂದು ಎದೆ ತುಂಬುವುದು. ಸರಿಯಾದ ಹೆಸರಿಟ್ಟಿದ್ದಾರೆ ಅವಳಿಗೆ ಎನ್ನಿಸುವುದು.

ನಾನೂ ಅನೇಕ ವೇಳೆ ನೀಲಳನ್ನು ಚೇಷ್ಟೆ ಮಾಡುತ್ತಿದ್ದೆ. "ಇವನು ಹುಟ್ಟಿದ ಮೇಲೆ ನೀನು ನನ್ನ ಬಗ್ಗೆ ಪ್ರೀತಿ ಕಡಿಮೆ ಮಾಡಿಬಿಟ್ಟೆ" ಎಂದು ನೀಲಳ ತಲೆ ಕೂದಲು ಹಿಡಿದೆಳೆಯುತ್ತಿದ್ದೆ ಮೃದುವಾಗಿ. ಅವಳು ಕಣ್ಣರಳಿಸಿ ತುಟಿ ಕೊಂಕಿಸಿ ಹೇಳುವಳು "ಪ್ರೀತಿ ಕಡಿಮೆ ಮಾಡಿದೆನಾ?" ಅವಳ ತುಟಿ ಈಗ ಮೊದಲಿಗಿಂತ ಕೆಂಪಾಗಿದೆಯೇನೋ ಅನ್ನಿಸುವುದು. ತಾನು ತಾಯಿ ಎಂಬ ಹೆಮ್ಮೆ ಅವಳ ಮೈಯಲ್ಲೆಲ್ಲ ಹರಿದಾಡಿದಂತೆ ಕಾಣಿಸುವಳು.

"ಇನ್ನೇನು, ಮೊದಲಿನ ಹಾಗೆ ನನ್ನ ಜೊತೆ ಮಾತುಕತೆ, ಉಪಚಾರ, ಆರೈಕೆ ಏನಿಲ್ಲ. ಪ್ರೀತಿ ಕಡಿಮೆ ಮಾಡಿಲ್ಲವೇ?" ಎನ್ನುತ್ತಿದ್ದೆ.

"ಪ್ರೀತಿ ಕಡಿಮೆಯಲ್ಲ ಆಗಿರುವುದು. ಈಗ ಇಲ್ಲವೇ ಇಲ್ಲ. ಎಲ್ಲ ಇನ್ನು ಮೇಲೆ ಇವನಿಗೆ ಮೀಸಲು."

"ಹಾಗಾದರೆ ನನ್ನ ಗತಿ?" ನಟನೆಯ ಗಾಬರಿಯಿಂದ ಮೂಡುತ್ತಿದ್ದ ಪ್ರಶ್ನೆ.

"ಗಂಗೆಯೇ ಗತಿ!"

"ಅಂದರೆ ಗಂಗಾನದಿಯಲ್ಲಿ ಮುಳುಗಬೇಕಾ?" ಎಂದಾಗ ಜೋರಾಗಿ ನಗು.

ಮನಸ್ಸಿನಲ್ಲಿ ಮಾಡಬೇಕಾದ ಕೆಲಸದ ಅರಿವು, ದೊಡ್ಡದನ್ನು ಮಾಡಿಸುವ ಛಲ ಇಲ್ಲದಿದ್ದರೆ ಇಂಥ ಸಾಂಸಾರಿಕ ಕ್ಷಣಗಳಲ್ಲೇ ತನ್ನ ಜೀವನ ಸಾರ್ಥಕ್ಯವನ್ನು ಕಾಣುತ್ತೇವೇನೋ! ಬಹುತೇಕ ಜನರು ಅದಕ್ಕೇ ಹಿರಿದನ್ನು ಸಾಧಿಸುವುದಿಲ್ಲ. ಸಾಧಿಸುವ ಶಕ್ತಿಯಿಲ್ಲವೆಂದಲ್ಲ, ಇಂಥ ಸುಖದ ಸಂಸಾರ ಅವರನ್ನು ಕಾರ್ಯತತ್ಪರರಾಗಲು ಬಿಡುವುದೇ ಇಲ್ಲವೆಂಬಂತೆ ತೋರುತ್ತದೆ. ಸದ್ಯ, ನನ್ನದು ಅಂತಹ ಮನಸ್ಸಲ್ಲವಲ್ಲ!

ಮಗುವಿಗೆ ಸಿದ್ಧರಸ ಎಂದು ಹೆಸರಿಟ್ಟಿದ್ದೆವು 'ಕೆಲವೇಳೆ ತಂದೆಯನ್ನು ನೆನಪಿಸಿಕೊಂಡಾಗ ನೀಲ "ಅಪ್ಪಾಜಿ" ಎಂದು ಮಗುವನ್ನು ಕರೆಯುತ್ತಿದ್ದಳು. ನಾನು ಪುಟ್ಟಸಂಗಯ್ಯ ಎನ್ನುತ್ತಿದ್ದೆ. ಸಂಗ ಎಂದರೆ ನನಗೆ ಕೃಷ್ಣೆ–ಮಲಪ್ರಹರಿಗಳ ತಂಪು ನೀರಲ್ಲಿಳಿದಂತೆ, ಬೊಗಸೆ ಬೊಗಸೆಯಾಗಿ ಎತ್ತಿ ಕುಡಿದಂತೆ, ಕಣ್ಣು ಹಾಯಿಸಿದಷ್ಟೂ ಸಾಗುವ ನೀರ ಹಾಳೆಯಂತೆ ಸಮೃದ್ಧಿಯ ಸಂಕೇತ. ಅದಕ್ಕೇ ಮಗು ನನಗೆ ಪುಟ್ಟಸಂಗಯ್ಯ.

ಕಾಲಕಳೆದಂತೆ ಹೊರಗಿನಿಂದ ಬರುವ ನನ್ನನ್ನು ಕಂಡ ಕೂಡಲೇ ಪುಟ್ಟಸಂಗಯ್ಯ ತಾಯ ಮಡಿಲಿನಿಂದ ಜಾರಲು ಪ್ರಯತ್ನಿಸುವನು. "ನೋಡಿದಿರಾ, ದಿನವೆಲ್ಲ ಲಾಲಿಸಿ ಪಾಲಿಸಲು ನಾನು ಬೇಕು. ಈಗ ನಿಮ್ಮನ್ನು ಕಂಡರೆ ನಾನು ಬೇಡ" ಎನ್ನುವಳು ನೀಲ.

"ಎಷ್ಟಾದರೂ ನಮ್ಮ ವಂಶೋದ್ಧಾರಕನಲ್ಲವೇ ಅವನು"

"ಹೌದು, ಜೋಳಕ್ಕೆ ಬೆಳೆದ ಪೈರಿಗಿಂತ ಕೂಡಿಹಾಕುವ ವಾಡೆಯೇ ಹೆಚ್ಚು" ಎಂದು ಅಣಕಿಸುವಳು.

"ಬಾರೋ ಪುಟ್ಟಸಂಗಯ್ಯ, ಪುಟಾಣಿ ಸಂಗಯ್ಯ, ಚಿನ್ನ ಸಂಗಯ್ಯ, ಚಿನ್ನಾರಿ ಸಂಗಯ್ಯ" ಎಂದು ತೋಳು ಮುಂದೆ ಮಾಡಿದರೆ ದಟ್ಟಡಿಯಿಡುತ್ತ ತೋಳುಗಳ ಒಳಸೇರುವನು.

ಸುಖಸಂಸಾರವನ್ನು ಕಂಡರೆ ಯಮನಿಗೆ ಕರುಬು ಎಂದು ಜನಪದರು ಹೇಳುತ್ತಾರೆ. ನಮ್ಮ ಜೀವನ ಹೀಗೆ ಬೆಳುದಿಂಗಳ ಕಡಲಂತೆ ಇತ್ತು. ಆದರೆ ಅದೇನು ದುರದೃಷ್ಟವೋ ಪುಟ್ಟಸಂಗಯ್ಯನಿಗೆ ಒಮ್ಮೆ ಇದ್ದಕ್ಕಿದ್ದಂತೆ ಮೈ ಕಾವೇರಿತು. ತಕ್ಷಣಕ್ಕೆ ಗೊತ್ತಿದ್ದ ಪರಿಹಾರಕಾರ್ಯವನ್ನು ಕೈಗೊಂಡು ಪಂಡಿತರಿಗೆ ಹೇಳಿಕಳಿಸಿದೆವು. ಆದರೆ ನಮ್ಮ ಮನೆಗೆ ಗೊತ್ತಾಗಿದ್ದ ಪಂಡಿತರು ಊರಲ್ಲಿರಲಿಲ್ಲ. ರಾಜವೈದ್ಯರಿಗೂ ಹೇಳಿಕಳಿಸಬಹುದು. ಆದರೆ ಇದೆಲ್ಲ ನಡೆಯುವಾಗ ಆಗಲೇ ಏರಿದ ಕತ್ತಲೆ. ಬೆಳಗಾಗುವರೆಗೆ ತಡೆದು ರಾಜವೈದ್ಯರನ್ನು ಬರಮಾಡಿಕೊಳ್ಳಬೇಕೆಂದು ನಿಶ್ಚಯಿಸಿದೆವು.

ರಾತ್ರಿಯೆಲ್ಲ ಯಾರಿಗೂ ನಿದ್ದೆಯಿಲ್ಲ, ಪಲ್ಲಂಗದಲ್ಲಿ ಮಲಗಿದ ಕೂಸನ್ನು ನೋಡುವುದೇ ಕಣ್ಣಿಗೊಂದು ಶಿಕ್ಷೆ. ಯಾರು ಯಾರಿಗೂ ಧೈರ್ಯ ಹೇಳುವ ಸ್ಥಿತಿಯಲ್ಲಿರಲಿಲ್ಲ, ಮಾತೂ ಉಡುಗಿತ್ತು. ತಾಯಂದಿರಿಬ್ಬರೂ ತದೇಕರಾಗಿ ಮಗುವನ್ನೇ ನೋಡುತ್ತಿದ್ದರು. ಕಾವೇರಿದ ಮೈ, ಬಳಲಿಕೆಯಿಂದ ಮುಚ್ಚಿದ ಕಣ್ಣು, ತುಂಬ ತಗ್ಗಿದ ಧ್ವನಿಯ ನರಳಾಟ. ಒಳಲೆಯಲ್ಲಿ ಹಾಲು ಹಾಕಿದರೂ ಕುಡಿಯದ ಕೂಸು ಹೊಟ್ಟೆಗಿಲ್ಲದೆ ಬೆಂಡಾಗಿತ್ತು. ಬೆಳಗಿನ ಜಾವದ ಬೆಳ್ಳಿಯನ್ನು ಕಂಡಂತೆ ಆಗುತ್ತಿದ್ದ ಪುಟ್ಟಸಂಗಯ್ಯನ ಕಣ್ಣುಗಳು ಕಾಂತಿಹೀನವಾಗಿದ್ದವು. ಕತ್ತಿನ ಬಳಿ ಏನು ನೋವಿತ್ತೋ ಆಗಾಗ ಮಗುವಿನ ಕೈ ಅದರೆಡೆ ಸಾಗುತ್ತಿದ್ದವು. ಮೈಯೆಲ್ಲ ಮುಟ್ಟಿ ನೋಡಿದರೂ ನಮಗೇನೂ ತಿಳಿಯದು. ನಾಗಕ್ಕ ಕೂಡ ತನಗೆ ತಿಳಿದದ್ದನ್ನು ಮಾಡಿದಳು. ಗಂಟಲು ನೋವಿರಬೇಕೆಂದು ಏನನ್ನೋ ಸಾಣೆಯ ಕಲ್ಲಲ್ಲಿ ತೇಯ್ದು ಪಟ್ಟು ಹಾಕಿದಳು. ಮಾಡಿದ್ದನ್ನೆಲ್ಲ ಮಾಡಿಸಿಕೊಳ್ಳುತ್ತಿತ್ತೇ ಹೊರತು ಮಗುವಿನ ಸ್ಥಿತಿ ಸುಧಾರಿಸಿದಂತೆ ಕಾಣಲಿಲ್ಲ. ಮೈಯಿನ ಕಾವು ಕಂಡದಂತೆ, ದೂರದಲ್ಲಿ ಕೂತರೂ ಝಳ! ಅದಕ್ಕೇನು ತನ್ನ ಕಷ್ಟ ಹೇಳಿಕೊಳ್ಳುವ ವಯಸ್ಸೇ, ವಿವರಿಸಬಹುದಾದಷ್ಟು ಮಾತೇ! ಬಂದದ್ದನ್ನು ಅನುಭವಿಸುತ್ತಿತ್ತೆಂದು ತೋರುತ್ತದೆ.

ರಾತ್ರಿ ಕಳೆದಂತೆ ಮಗುವಿನ ಕಣ್ಣು ಮುಚ್ಚಿಕೊಂಡವು. ನಿದ್ರೆಯಿಂದಲೋ, ಜ್ವರದ ತಾಪದಿಂದಲೋ, ನೋವಿನ ತೀವ್ರತೆಯಿಂದಲೋ ನಿದ್ದೆ ಬಂದಿರಬೇಕು.

ನಮ್ಮ ಕಣ್ಣುಗಳೂ ರೆಪ್ಪೆಮುಚ್ಚಿಕೊಳ್ಳುತ್ತಿದ್ದವು. ಬಲವಂತವಾಗಿ ರೆಪ್ಪೆಗಳನ್ನು ಕಿತ್ತರೂ ಮತ್ತೆ ದೊಪ್ಪನೆ ಕಣ್ಣ ಮೇಲೆ ತೆರೆಯೆಳೆಯುವುದು. ಹೀಗೆ ಎಷ್ಟು ಹೊತ್ತು ಇದ್ದೆವೋ. "ಬಸವರಾಜ" ಎಂದು ಯಾರೋ ಗಟ್ಟಿಯಾಗಿ ಕೂಗಿದಂತಾಗಿ ಕಣ್ತೆರೆದೆ ನಾನು. ಆ ಶಬ್ದವೇ ಎಚ್ಚರಗೊಳಿಸಿರಬೇಕೇನೋ, ಗಂಗೆ-ನೀಲರೂ ಕಣ್ಣುಜ್ಜಿಕೊಳ್ಳುತ್ತಿದ್ದರು. ನಾಗಕ್ಕ ಮಗುವಿನ ಬಳಿಯಿದ್ದಳು. ಮೈಮೇಲೆ ಬಂದವಳಂತೆ ಮಗುವಿನ ಮೈಮೇಲೆಲ್ಲ ಕೈಯಾಡಿಸಿ ಮುಟ್ಟಿ ಮುಟ್ಟಿ ನೋಡುತ್ತಿದ್ದಳು.

"ಏನಕ್ಕ?" ಗಾಬರಿಯಿಂದ ಕೇಳಿದೆ.

"ಇಲ್ಲಿ ನೋಡು" ಎಂದು ನನ್ನ ಕೈಯನ್ನು ಮಗುವಿನ ಮೈಮೇಲೆ ಇರಿಸಿದಳು. ಬೆಂಕಿಯಂತೆ ಕಾಯುತ್ತಿದ್ದ ಮೈ ಹಿಮದಂತೆ ತಣ್ಣಗಾಗಿತ್ತು. "ಜ್ವರ ಇಳಿದಿದೆಯಾ?" ಎಂದೆ.

"ನನಗೇನೋ ಭಯವಾಗುತ್ತಿದೆಯಪ್ಪ?" ಎಂದಳು. ಅವಳ ಕಂಠ ನಡುಗುತ್ತಿತ್ತು, ಕಣ್ಣಲ್ಲಿ ಗಾಬರಿ ತುಳುಕುತ್ತಿತ್ತು.

"ಹ್ಞಾ" ಎಂದು ಮತ್ತೆ ಮತ್ತೆ ಪುಟ್ಟಸಂಗಯ್ಯನ ಮೈಮೇಲೆ ತಡವಿದೆ, ಏನೋ ಅನುಮಾನ, ಮೂಗಿನ ಬಳಿ ಕೈಯಿಟ್ಟೆ. ಬಲವಾದ ಅನುಮಾನ. ಕಣ್ಣಿಂದ ರೆಪ್ಪೆ ಬಿಡಿಸಲು ಪ್ರಯತ್ನಿಸಿದೆ. ಅಯ್ಯೋ ದೇವರೇ!

ತನ್ನ ಅಜೀರ್ಣವನ್ನು ವಾಸಿಮಾಡಿಕೊಳ್ಳಲು ಅಗ್ನಿ ನುಗ್ಗಿದ ಖಾಂಡವ ವನವಾಗಿತ್ತು ನಮ್ಮ ಮನೆ. ಎಲ್ಲರ ಹೃದಯಗಳೂ ಶೂನ್ಯವಾದವು. ಬದುಕಿನಲ್ಲಿ ಇನ್ನೇನೂ ಇಲ್ಲ ಎನ್ನಿಸಿತ್ತು.

ಆದರೆ ಎಷ್ಟು ದಿನ ಹೀಗಿರಲು ಸಾಧ್ಯ? ದಿನ ಕಳೆದಂತೆ ಮನೆಯಲ್ಲಿ ಚಟುವಟಿಕೆ ಪ್ರಾರಂಭವೇನೋ ಆಯಿತು. ಆದರೆ ಮನೆಯಲ್ಲಿ ಉಲ್ಲಾಸ ಮಾತ್ರ ಮಾಯವಾಗಿತ್ತು. ನೀಲಳಂತೂ ಜೀವಚ್ಛವವಾಗಿದ್ದಳು. ಗಂಗೆ ಎಲ್ಲವನ್ನೂ ಎದುರಿಸಿ ಅನುಭವವಿದ್ದ ಹಿರಿಯಳಂತೆಯೇ ಇರುತ್ತಿದ್ದುದರಿಂದಲೂ, ತನ್ನ ಮನಸ್ಸಿನ ಭಾವನೆಯನ್ನು ಎಂದೂ ಪೂರ್ಣವಾಗಿ ಹೊರಚೆಲ್ಲುವ ಸ್ವಭಾವದವಳಲ್ಲದಿದ್ದುದರಿಂದಲೂ ಅವಳೇನೋ ಕ್ರಮೇಣ ಚೇತರಿಸಿಕೊಂಡಳು. ಆದರೆ ನೀಲ ಅಂದಿನಿಂದ ಚೇತರಿಸಿಕೊಂಡೇ ಇಲ್ಲವೇನೋ ಎನ್ನಿಸುತ್ತಿದೆ. ಇವೆಲ್ಲ ಆಗಿದ್ದು ಮಂಗಳವಾಡದಲ್ಲಿದ್ದಾಗ; ಕಲ್ಯಾಣಕ್ಕೆ ಬರುವ ತುಂಬ ಹಿಂದೆ. ಎಂದರೆ ಇಪ್ಪತ್ತೈದು ಇಪ್ಪತ್ತಾರು ವರ್ಷಗಳೇ ಆದವೇನೋ.

ನೀಲ, ನೀಲ! ಗಂಗೆ ಎಂದೂ ನನ್ನಲ್ಲಿ ಒಂದು ಬಗೆಯ ಗೌರವಭಾವನೆಯನ್ನು ಮೂಡಿಸಿದವಳು. ಹೆಂಡತಿ, ನಿಜ, ಆದರೆ ಮಾರ್ಗದರ್ಶಿಯಂತಿದ್ದವಳು. ಸರಸವಾಡಿದ್ದಳು, ಆದರೆ ಹಿರಿಯಳಂತೆಯೇ ಅವಳ ವರ್ತನೆ. ಆದರೆ ನನ್ನಲ್ಲಿ ಎಳೆತನವನ್ನು ಉಲ್ಲಾಸವನ್ನು ತುಂಟತನವನ್ನು ತುಂಬಿ ನನ್ನನ್ನು ಆವರಿಸಿದ್ದವಳು ನೀಲಳೇ. ಹಾಗಾಗೀ ಪುಟ್ಟಸಂಗಯ್ಯ ಹೋದ ಮೇಲೂ ನನ್ನ ಮನಸ್ಸು ನೀಲಳ ಸಾಮಿಪ್ಯವನ್ನೇ ಬಯಸುತ್ತಿತ್ತು. ಒಮ್ಮೆ ಅವಳ ಜೊತೆಗಿದ್ದಾಗ ಕೇಳಿದ್ದೆ: "ನನ್ನ ನಿನ್ನ ಹೃದಯದಿಂದ ತೊರೆದುಬಿಟ್ಟಿದ್ದೀಯಾ?" ಅವಳು ನನ್ನನ್ನು ಬಾಚಿ

ತಬ್ಬಿಕೊಂಡು ಗೊಳೋ ಎಂದು ಅತ್ತಳು, ನನ್ನ ತಲೆ ಮುಂಡಾಡಿದಳು. ಹೀಗೆ ಕೇಳಿದ್ದರಿಂದಲೋ ಏನೋ ಮುಂದೆ ನನ್ನೊಡನೆ ಸರಸವಾಗಿರಲು ಪ್ರಯತ್ನಿಸಿದ್ದಳು. ಅವಳು ನಕ್ಕರೆ ಇವಳು ಯಾಕಾದರೂ ನಗುತ್ತಾಳೋ ಎನ್ನಿಸುತ್ತಿತ್ತು.

ಆಮೇಲೆ ಹೀಗೆ ಒಂದು ರಾತ್ರಿ ಅವಳೊಡನೆ ಏಕಾಂತದಲ್ಲಿ ಮಾತನಾಡುತ್ತಿದ್ದೆ. ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಹಿತವೆಂದು ಭಾವಿಸಿದವನಲ್ಲವೇ ನಾನು ? ಅವಳ ಸಾಮಿಪ್ಯ ಬಹಳ ಕಾಲದ ಮೇಲೆ ನನ್ನ ಮೈಯ ಬಿಸಿಯನ್ನು ಹೆಚ್ಚಿಸಿತ್ತು. ಅವಳ ಮುಂಗುರುಳು ತೀಡಿದೆ, ಮೈಮೇಲೆ ಕೈಯಿರಿಸಿ ನೇವರಿಸಿದೆ, ಮುದ್ದಿಸಿದೆ. ನಾನು ಕಾವೇರುತ್ತಿದ್ದರೂ ಅವಳು ತಣ್ಣಗೇ ಇದ್ದಳೆಂದು ನನಗೆ ಆಗ ಗೊತ್ತಾಗಲಿಲ್ಲವೇನೋ. ಪ್ರೀತಿಯ ಭರದಲ್ಲಿ ಅವಳನ್ನು ತಬ್ಬಿ "ನಿನ್ನ ಹೊಟ್ಟೆಯನ್ನು ಸೇರಿಬಿಡುತ್ತೇನೆ" ಎಂದು ಪಿಸುಗುಟ್ಟಿದೆ. ಅವಳು ಧಡಾರನೆ ನನ್ನನ್ನು ನೂಕಿದಳು. "ಬೇಡ ಬೇಡ" ಎಂದಳು. ನನಗೆ ಗಾಬರಿಯಾಯಿತು. ಇವಳೇಕೆ ಹೀಗೆ ಮಾಡಿದಳೆಂದು ಅರ್ಥವಾಗಲಿಲ್ಲ. "ನೀಲ, ನೀಲ" ಎಂದು ಅವಳ ಮೈಯಲುಗಿಸಿ "ಏನಾಯಿತು?" ಎಂದೆ.

"ನನ್ನಲ್ಲಿ ಸೇರಬೇಡಿ, ಮತ್ತೆ ಪುಟ್ಟಸಂಗಯ್ಯನ ಗತಿಯೇ ಆಗುತ್ತೆ!" ಎಂದಳು ಕಣ್ಣಲ್ಲಿ ನೀರು ಸುರಿಸುತ್ತ. ದೊಡ್ಡದಾಗಿ ನಿಟ್ಟುಸಿರು ಬಿಡುವುದಲ್ಲದೇ ಮತ್ತೇನು ಉಳಿದಿತ್ತು ನನಗೆ?

ಮುಂದೆ ಇನ್ನೊಂದು ದಿನ ಏಕಾಂತದಲ್ಲಿದ್ದಾಗಲೂ ಇಂಥದೇ ಇನ್ನೊಂದು ಪ್ರಸಂಗ ನಡೆಯಿತು. ಅವಳು ಪ್ರಸನ್ನಳಾಗಿದ್ದಂತೆ ಕಂಡಳು ಆಗ. ಸದ್ಯ, ಹಳೆಯ ದಿನಗಳ ತಂಗಾಳಿ ಮತ್ತೆ ಕೊಂಚವಾದರೂ ಬೀಸುವ ಸಮಯ ಬಂತೇನೋ ಎನ್ನಿಸಿತು. ಬಹುದಿನಗಳ ನಂತರ ನನ್ನಲ್ಲಿ ನೀಲ ಅನುರಾಗವನ್ನು ತೋರಿಸುವಂತೆ ಕಂಡಿತು. ಹಾಗೆ ತೋರಿಸಿದಳು ಕೂಡ. ನನ್ನ ಹಣೆ ನೇವರಿಸಿದಳು, ಕಣ್ಣುಗಳಿಗೆ ಹೂಮುತ್ತನಿತ್ತಳು, ಮೂಗನ್ನು ತನ್ನ ಬೆರಳಿನಿಂದ ಗೆರೆಯೆಳೆದಳು, ತುಟಿಗಳ ಮೇಲೆ ಕೈಯಾಡಿಸಿದಳು. ಹಾಗೆ ಮಾಡುತ್ತಲೇ ಕಣ್ಣು ಮುಚ್ಚಿದಳು. "ನೀಲ" ಎಂದೆ ಮೃದುವಾಗಿ.

"ಉಞ"

"ಏನು ಯೋಚಿಸುತ್ತಿದ್ದೀಯಾ?"

"ನಿಮ್ಮ ಮುಖವನ್ನು ನೋಡಿ ಕಣ್ಣುಮುಚ್ಚಿದರೆ ಪುಟ್ಟಸಂಗಯ್ಯನೇ ಕಾಣುತ್ತಾನೆ" ಎನ್ನುತ್ತ ಗೊಳೋ ಎಂದು ಅಳಲು ತೊಡಗಿದಳು. ನನ್ನಲ್ಲಿ ಪುಟ್ಟಸಂಗಯ್ಯನನ್ನು, ಅವನಲ್ಲಿ ನನ್ನನ್ನು ಕಂಡವಳು ನೀಲ. ಹಾಗಾಗಿ ನಾನೆಂದರೆ ಮುಂದೆ ಮಗು. ಓಲೈಸಿದಳು, ಮುದ್ದಿಸಿದಳು, ಲಲ್ಲೆಗೈಸಿದಳು, ರಮಿಸಿದಳು, ಆರೈಕೆ ಮಾಡಿದಳು – ಆದರೆ ತನ್ನ ಪುಟ್ಟಸಂಗಯ್ಯನೇ ನಾನು ಎಂಬಂತೆ. ನಾನು ಕಳೆದುಕೊಂಡಿದ್ದ ತಾಯಿಯನ್ನು ಅವಳಲ್ಲಿ ಕಂಡೆ ಎಂಬುದು ನಿಜವಾದರೂ, ನನ್ನ ನೀಲ ನನ್ನಿಂದ ಎಂದೆಂದೂ ದೂರವಾಗಿದ್ದಳು.

ಅದನ್ನೆಲ್ಲ ನೆನಸಿಕೊಂಡರೆ ಹೃದಯ ಮೂಕವಾಗುತ್ತದೆ. ಒಡನಾಟಪಿಲ್ಲ, ಜೋಪಾನವಿದೆ. ನಮ್ಮ ದೇಹಗಳು ಒಂದೇ ಸೂರಿನಡಿ ಇವೆ, ಆದರೆ ಹೃದಯ ಸಂಭಾಷಣೆ ನಿಂತಿದೆ. ಅವಳ ಕಟಾಕ್ಷದಡಿ ನಾನು ಕ್ಷೇಮ; ಆದರೆ ನಾನು ನನ್ನ ದೃಷ್ಟಿಯನ್ನು ಅವಳ ನೋಟದಲ್ಲಿ ಸೇರಿಸಲಾರೆ. ಅವಳ ಎದೆಯಲ್ಲಿ ನಾನು ತುಂಬಿಕೊಂಡಿದ್ದೇನೆ, ಆದರೆ ಅದರಲ್ಲಿ ಪರಸ್ಪರತೆಯಿಲ್ಲ. ಹೀಗಾಗಿ ನಾನು ಒಂಟಿ ಎನ್ನಿಸುತ್ತದೆ.

# ೧೧

ಶರಣಮಾರ್ಗದ ಒಂದು ಮುಖ್ಯ ಘಟ್ಟವಾಗಲಿರುವ ಕೇತಗ–ಚಂದಲೆಯರ ಮದುವೆಯ ವಿಚಾರ ನೂರಾರು ಭಕ್ತರಲ್ಲಿ ಉತ್ಸಾಹದ ಹೊಸ ಅಲೆಯನ್ನೆಬ್ಬಿಸಿತ್ತು. ಗದ್ದುಂಬಳ್ಳಿಯ ಗಂಡುಹೆಣ್ಣುಗಳು ರಾಜಧಾನಿ ಕಲ್ಯಾಣದಲ್ಲಿ ಶರಣರ ಸಮ್ಮುಖದಲ್ಲಿ ಸತಿಪತಿಗಳಾಗಿ ತಮ್ಮ ಬಾಳಲ್ಲಿ ಚಿನ್ನದ ರೇಕು ಅಂಟಿಸಿಕೊಂಡಂತೆ ಶಿವಾಚಾರದ ಕಟ್ಟಳೆಯಲ್ಲಿ ಸಮಾನತೆಯ ಭಾಷ್ಯ ಬರೆಯುತ್ತಿದ್ದರು. ಊರಿನ ಭಕ್ತರಲ್ಲಿ ಕೆಲವರ ನಡವಳಿಕೆ ಏನೋ ಹೊಸ ಬಗೆಯಾಗಿ ಕಂಡರೂ, ಚಕ್ರವರ್ತಿಗಳು ಬಟ್ಟೆ ತುಂಡು ಕಂಡ ಪ್ರಕರಣ ಎಂಥದೋ ಅರ್ಥವಾಗದ ಒಳಗುದಿಯನ್ನು ಸೃಷ್ಟಿಸಿದ್ದರೂ, ಬಹುಪಾಲು ಭಕ್ತರಿಗೆ ಅದೊಂದು ಜೀವಮಾನದ ಘಟನೆಯೆನ್ನಿಸುತಿತ್ತು. ಕೇತಗ–ಚಂದಲೆಯರು ಯಾವುದೇ ಸಾಮ್ರಾಜ್ಯದ ರಾಜರಾಣಿಯರಲ್ಲದಿದ್ದರೂ, ಅವರ ಹೆಸರು ಅಜರಾಮರವಾಗಿ ಶರಣಚರಿತ್ರೆಯಲ್ಲಿ ದಾಖಲಾಗುವುದರಲ್ಲಿತ್ತು. ಗದ್ದುಂಬಳ್ಳಿಯಿಂದ ಕಲ್ಯಾಣಕ್ಕೆ, ಇಲ್ಲಿಂದ ಅಲ್ಲಿಗೆ ಅನೇಕ ಬಾರಿ ಅಳ್ಳಯ್ಯ–ಮಧುವಯ್ಯಗಳು ಬಂದು ಹೋಗಿದ್ದರು. ಮದುವೆಗಳಿಗೆ ಏರ್ಪಾಟು ನಡೆಯುತ್ತಿತ್ತು. ಬಸವಣ್ಣನವರ ಮಹಮನೆಯ ಅಂಗಳದಲ್ಲಿಯೇ ಶರಣವಿವಾಹದ ಏರ್ಪಾಟು.

ಇದು ಎರಡು ಕುಟುಂಬಗಳ ನಡುವಣ ಸಂಬಂಧ ಮಾತ್ರವಲ್ಲ, ಇತಿಹಾಸದ ನಡುವಣ ಕಂದರವನ್ನು ಮುಚ್ಚುವ ಐತಿಹಾಸಿಕ ಸನ್ನಿವೇಶ; ಇದು ಇಡೀ ಶರಣಸ್ತೋಮದ ಶಿವಾಚಾರ ತತ್ಪರತೆಯ ದ್ಯೋತಕವಾದ ಘಟನೆ. ಹೀಗಾಗಿ ಶರಣರೆಲ್ಲ ಇಲ್ಲಿ ಪರಸ್ಪರ ಬೀಗರೇ. ಬಸವಣ್ಣನವರ ಹೆಸರಿನಲ್ಲಿಯೇ ಈ ಮದುವೆಗೆ ಆಹ್ವಾನಗಳು ಬೇರೆ ಬೇರೆಡೆಯ ಶರಣರಿಗೆ ಹೋದವು. ಅಳ್ಳಯ್ಯ–ಮಧುವಯ್ಯಗಳ ಮಕ್ಕಳಾಗಿದ್ದ ಕೇತಗ–ಚಂದಲೆಯರೀಗ ಶರಣಸಂದೋಹದ ಕಣ್ಮಣಿಗಳೆನಿಸಿದರು.

ಇಷ್ಟೆಲ್ಲ ಸಂಭ್ರಮವು ಕಾಣುತ್ತಿದ್ದರೂ ಬಸವಣ್ಣನವರಿಗೆ ಪ್ರಭುಗಳನ್ನು ಕಂಡ ಕಾಲದಿಂದ, ಅವರ ಮಾತು ಕೇಳಿದಾಗಿನಿಂದ, ಒಳಗೇ ಎಂಥದೋ ಉದ್ವೇಗ, ಹೇಳಲಾಗದ ಕಾತರ. ಅದಕ್ಕೆ ತಕ್ಕಂತೆ ಅದೊಂದು ಬೆಳಿಗ್ಗೆ ಆಘಾತಕರ ವಾರ್ತೆ ಬಂದಿತು. ಇನ್ನೂ ಪ್ರಾತರ್ವಿಧಿಗಳನ್ನು ಪೂರೈಸಿರಲೇ ಇಲ್ಲ. ಆ ಹೊತ್ತಿಗಾಗಲೇ ಅಳ್ಳಯ್ಯ–ಮಧುವಯ್ಯಗಳು ಬಂದು ತಮಗಾಗಿ ಕಾದಿರುವ ಸುದ್ದಿ ಬಂತು. ಬಹಳ ಜರೂರಾದ ವಿಷಯವೆಂದು ಹೇಳಿದುದಾಗಿ ಪಡಿಹಾರಿ ಉತ್ತಣ್ಣ

ನಿರೂಪಿಸಿದ. ಅವರು ತುಂಬ ಪರಿತಾಪದಿಂದ ಕೂಡಿರುವಂತೆ ಕಂಡದ್ದಾಗಿ ನುಡಿದ. ಅದೇನೋ ಹೊಸ ಕುತ್ತು ಬಂದಂತಿದೆಯಲ್ಲ ಎಂದು ಬಸವಣ್ಣನವರು ಅವರನ್ನು ಕುಳ್ಳಿರಲು, ಅವರಿಗೆ ಉಪಚರಿಸಲು ಹೇಳಿಕಳಿಸಿ ಕಳವಳದಿಂದಲೇ ಆತುರಾತುರವಾಗಿ ತಮ್ಮ ಪ್ರಾತರ್ವಿಧಿಗಳನ್ನು ಮುಗಿಸಿದರು. ಶಿವಪೂಜೆಯ ಕಟ್ಟಳೆ ಕೂಡ ಅಂದು ಸಾಧ್ಯವಾಗಲಿಲ್ಲ. ಶರಣರು ನೊಂದು ಬಂದಿರುವಾಗ ಪೂಜೆ–ಪುನಸ್ಕಾರಗಳಿಗೆ ಅರ್ಥವೇ ಇಲ್ಲ. ನೇರವಾಗಿ ಪಡಸಾಲೆಗೆ ಬಂದರು ಬಸವಣ್ಣನವರು.

ಅವರನ್ನು ಕಂಡ ತಕ್ಷಣ ಅಲ್ಲೇ ಕಾಯುತ್ತಿದ್ದ ಅಳ್ಳಯ್ಯ–ಮಧುವಯ್ಯಗಳು ಎದ್ದು ನಿಂತು ಕೈಮುಗಿಯುತ್ತ ಜೋರಾಗಿ ಅಳಲು ಪ್ರಾರಂಭಿಸಿದರು. ಅಣ್ಣನವರಿಗೆ ದಿಗ್ಭ್ರಮೆ. ಏನೋ ಆಗಬಾರದ್ದು ಆಗಿಹೋಗಿದೆಯೆಂಬ ಸುಳಿವು ಹೊರಬಿದ್ದಂತಾಯಿತು. ಆದರೆ ಎಂಥ ಘಟನೆಯೋ ಅದು. ಈ ಇಬ್ಬರೂ ತುಂಬಿದ ಕೊಡಗಳು ಈ ಬಗೆಯಲ್ಲಿ ಗೋಳಿಡಬೇಕಾದರೆ ದೊಡ್ಡದೊಂದು ಪ್ರಮಾದವೇ ಆಗಿರಬೇಕೆನ್ನಿಸಿತು. ಅವರ ಬಳಿ ಹೋಗಿ ಮೈದಡವಿ, ಕೈಹಿಡಿದು ಪೀಠಗಳ ಮೇಲೆ ಕುಳ್ಳಿರಿಸಿ, ಅವರು ಅಳುವುದನ್ನು ನಿಲ್ಲಿಸುವಂತೆ ಮಾಡಬೇಕಾದರೆ ಬಸವಣ್ಣನವರಿಗೆ ಪ್ರಯಾಸವೇ ಆಯಿತು. ಆವುಟ ಮಾಡುವವರ ಪೈಕಿಯಲ್ಲ ಈ ಶರಣರು. ಅವರ ರೀತಿ ಕಂಡು ತಮ್ಮ ಮನಸ್ಸಿನಲ್ಲಿ ಕಾತರ ಮಡುಗಟ್ಟಿತು.

"ವಿಚಾರ ಏನು ಹೇಳಿ, ಅಳ್ಳಯ್ಯ–ಮಧುವಯ್ಯ, ಸಮಾಧಾನ ತಂದುಕೊಳ್ಳಿ."

"ಎಂಥ ಸಮಾಧಾನ ಅಣ್ಣನವರೇ, ಸರ್ವನಾಶವಾಯಿತು."

"ಯಾಕೆ?" ಅಣ್ಣನವರ ಮುಖದ ಮೇಲೆ ಗಾಬರಿ. "ಕೇತಗ ಚಂದಲೆಯರು ಆರೋಗ್ಯ ತಾನೇ?"

"ಚಂದಲೆ ಮನೆಯಲ್ಲಿದ್ದಾಳೆ, ಅಣ್ಣನವರೇ, ಆದರೆ ಕೇತಗ...." ಎಂದು ಮಧುವಯ್ಯ ಜೋರಾಗಿ ಅಳಲು ಮತ್ತೆ ಆರಂಭಿಸಿದರು.

"ಯಾಕೆ ಏನಾಯಿತು. ಸರಿಯಾಗಿ ವಿವರಿಸಬಾರದೇ?" ಅಣ್ಣನವರ ಮಾತುಗಳು ಒಳಗಿನ ಉದ್ವೇಗದ ಕಾರಣದಿಂದಾಗಿ ಅಸಹನೆಯ ಲೇಪವನ್ನು ಪಡೆದವು.

"ಅವನ ಪಾಡು ಎಂತದೋ ತಿಳೀದಲ್ಲ, ಶಿವನೇ" ಅಳ್ಳಯ್ಯ ಪ್ರಲಾಪಿಸಿದರು. ಆಡಿದ ಮಾತುಗಳಿಗಿಂತಲೂ ಮಾಡಿದ ರೋದನವೇ ಹೆಚ್ಚಾಗಿತ್ತು. ಕೇತಗನಿಗೆ ಏನೋ ಆಗಿದೆ ಎಂಬುದು ಗೊತ್ತಾಯಿತು. ಆದರೆ ಅದೇನು ನಡೆದಿದೆ?

"ಮಧುವಯ್ಯಗಳೇ, ದಯವಿಟ್ಟು ಒಗಟಾಗಿ ಮಾತನಾಡಬೇಡಿ. ಏನಾಯಿತು ಹೇಳಿ."

ಎಷ್ಟೆಂದು ಪ್ರಲಾಪಿಸಿಯಾರು. ಜೊತೆಗೆ ನಡೆಸಬೇಕಾದ ಕಾರ್ಯಗಳಿವೆಯಲ್ಲ. ಹೇಳಲೇಬೇಕು. ತಮ್ಮ ಭಾವನೆಗಳನ್ನು ಹತ್ತಿಕ್ಕಿಕೊಂಡು ಮಧುವಯ್ಯಗಳು ನಿಧಾನವಾಗಿ ನಡೆದಿದ್ದನ್ನು ನಿರೂಪಿಸಿದರು. ಆದರೂ ಮಧ್ಯೆ ಮಧ್ಯೆ

ನಿಲ್ಲಿಸುತ್ತಿದ್ದರು, ಕೈ ಹೊತ್ತು ಕೂರುತ್ತಿದ್ದರು, ಕಣ್ಣೊರೆಸಿಕೊಳ್ಳುತ್ತಿದ್ದರು, ಪಕ್ಕದಲ್ಲಿದ್ದ ಅಳ್ಳಯ್ಯನವರ ಕಡೆ ಕಣ್ಣು ಹಾಯಿಸುತ್ತಿದ್ದರು. ಅವರು ಹೇಳಿದ ವಿಷಯವಿಷ್ಟು: ಸಂಜೆ ಎಂದಿನಂತೆ ಊರು ಚಾವಡಿಯ ಬಳಿ ಶಿವಾನುಭವಗೋಷ್ಠಿ ನಡೆಸಿ ಮನೆಗಳಿಗೆ ಬಂದು ಉಂಡರು. ಎಂದಿಗಿಂತ ಆ ದಿನದ ಅನುಭಾವ ಗೋಷ್ಠಿ ಕಳೆಯಿಂದ ನಡೆಯಿತು. ಶರಣರು ಸೇರಿ ಮಾತಾಡಿದ್ದೇ ಅನುಭಾವಗೋಷ್ಠಿಯಲ್ಲವೇ. ಹಾಗೆ ಎಂದೂ ಮಾಡುವವರೇ. ಆದರೆ ಕೇತಗ–ಚಂದಲೆಯರ ಮದುವೆ ನಿಶ್ಚಯವಾದ ಮೇಲೆ ಆ ಗೋಷ್ಠಿಗಳಿಗೆ ವಿಶೇಷ ಅರ್ಥ ಬಂದಿತ್ತು. ಕಾಂತಿ–ಕಾವುಗಳು ಪ್ರಾಪ್ತವಾಗಿದ್ದವು. ಇಷ್ಟು ದಿನ ಮಾತಾಡಿದ ತತ್ವಕ್ಕೆ ತಕ್ಕ ಹಾಗೆ ನಡೆದುಕೊಂಡು ಶರಣಲೋಕಕ್ಕೆ ಮಾದರಿಯಾಗುವ ಘಳಿಗೆ ಬರಲಿತ್ತು. ಹಾಗಾಗಿ ಗದ್ದುಂಬಳ್ಳಿಯ ಶರಣರಿಗೆ ರೆಕ್ಕೆ ಮೂಡಿದ್ದವು. ತಮ್ಮ ಊರು ಶರಣರ ಇತಿಹಾಸದ ಕೇಂದ್ರಬಿಂದುವಾಗುವ ದಿನ ಬಂದಂತೆ ಅವರಿಗೆ ನವೋಲ್ಲಾಸ.

ಮಲಗುವ ಹೊತ್ತಿಗೆ ಸೂರ್ಯಸ್ತವಾಗಿ ಐದಾರು ಗಳಿಗೆಗಳು ಆಗಿದ್ದವು. ಎಂದಿಗಿಂತೂ ಸ್ವಲ್ಪ ತಡವೇ ಅಂದು ಮಲಗಿದ್ದುದು. ಅಂದು ಮಾತ್ರವಲ್ಲ, ಈಚೆಗೆ ಚಾವಡಿಯ ಗೋಷ್ಠಿಗಳು ಹೆಚ್ಚು ದೀರ್ಘವಾಗಿದ್ದವು. ಆಡುವವರ ಮಾತಿಗೆ ಬಾಲ ಬೆಳೆದಿತ್ತು. ಮಾತಿಗೆ ಮಾತು ಸೇರಿಸಿ ಚರ್ಚಿಸುವ ಪರಿಪಾಠ ಹೆಚ್ಚಾಗಿತ್ತು. ಆದ್ದರಿಂದ ತಡವಾಗಿಯೇ ಮಲಗಿದ್ದರು. ಕೇರಿಯೆಲ್ಲ ಹೀಗೆ ನಿದ್ದೆಯಲ್ಲಿ ಮುಳುಗಿತ್ತು. ಅಳ್ಳಯ್ಯನವರಿಗೆ ಸಿಹಿಯಾದ ಆಳವಾದ ನಿದ್ದೆ, ಇದ್ದಕ್ಕಿದ್ದ ಹಾಗೆ ಯಾರೋ "ಕೇತಗಣ್ಣ" ಎಂದು ಮನೆಯ ಬಾಗಿಲು ಬಡಿದಂತೆ, ಕೂಗಿದಂತೆ ಶಬ್ದವಾಯಿತು. ಪಿಸುಮಾತು, ಸಣ್ಣದನಿ ಎಚ್ಚರವಾಯಿತು. ಆದರೆ ಹರೆಯದ ಹುಡುಗ ಕೇತಗ. ಅವನ ನಿದ್ದೆಯೆಂದರೆ ಗುಂಡು ನೀರಲ್ಲಿ ಬಿದ್ದಂತೆ. ಬಿದ್ದ ಕ್ಷಣದಲ್ಲಿ ತಳ ಕಂಡಿರುತ್ತದೆ. ಅಲ್ಲದೆ ದಿನವೆಲ್ಲ ಹೊಲದಲ್ಲಿ ದುಡಿದು ಮೈ ಹಣ್ಣಾಗಿಸಿಕೊಂಡವನು. ಈಚೆಗಂತೂ ಅವನ ದುಡಿಮೆಗೆ ಅರ್ಥ ಬಂದಿತ್ತು, ಹುರುಪು ಬಂದಿತ್ತು. ತನ್ನ ಜೀವನದಲ್ಲಿ ಹಿಂದೆಂದೂ ಕನಸನ್ನೂ ಕಾಣಲು ಸಾಧ್ಯವಿಲ್ಲದ ಸಾರ್ಥಕ್ಯ ತನ್ನ ಬಾಳಿಗೆ ಒದಗಲಿದೆ ಎಂಬ ಹೆಮ್ಮೆ ಮೂಡಿತ್ತು. ಹಾಗಾಗಿ ಅವನ ರೀತಿ ತೇಲಾಡಿದಂತೆ. ಉಂಡು ನೆಲಕ್ಕೆ ತಲೆಕೊಟ್ಟನೆಂದರೆ ಹೊದಿಕೆ ಮೇಲಕ್ಕೆಳೆದುಕೊಳ್ಳುವುದರೊಳಗಾಗಿ ಆತನ ಮೇಲೆ ನಿದ್ದೆ ಹೊದ್ದಿರುತ್ತಿತ್ತು.

ಎಚ್ಚರವಾದ ಅಳ್ಳಯ್ಯ ಮಗನ ಬಳಿ ಬಂದು "ಲೋ ಕೇತಗ," ಎಂದು ಮೈಯಲುಗಿಸಿ ಎಚ್ಚರಿಸಿದರು. ಎಂದೂ ತಮಗೆ ಮಲಗಿದ ತಕ್ಷಣ ನಿದ್ದೆ ಬಾರದು, ವಯಸ್ಸಾಯಿತಲ್ಲವೇ, ಆದರೆ ಅಂದು ಮಾತ್ರ ಒಂದೆರಡು ಕ್ಷಣದಲ್ಲಿಯೇ ಜೋಂಪು ಹತ್ತಿತ್ತು. ಅದಕ್ಕೇ ಎಚ್ಚರವಾದಾಗ ಬೇಸರವೂ ಆಗಿತ್ತು. ಮೈ ಹಿಡಿದು ಅಲುಗಿಸಿದಾಗ ಎಚ್ಚರಗೊಂಡ ಕೇತಗ ಕಾತರದಿಂದ ದಿಢೀರನೆ ಎದ್ದು ಕುಳಿತು "ಏನಾಯಿತು?" ಎಂದು ಕೇಳಿದ. ಆ ಕತ್ತಲಲ್ಲಿಯೇ "ಯಾರೋ ಬಂದ ಹಂಗಿದೇ. ಹೋಗಿ ಅದೇನೋ ನೋಡು" ತಂದೆ ಎಂದರು.

"ಇದ್ಯಾರಪ್ಪಾ ಈ ಹೊತ್ತಲ್ಲಿ" ಎಂದು ಗೊಣಗಿಕೊಂಡ ಕೇತಗ

ಕತ್ತಲಲ್ಲಿಯೇ ತಡಕುತ್ತ ಗುಡಿಲ ಬಾಗಿಲ ಕಡೆ ಹೋದ. ಬಾಗಿಲು ತೆರೆಯಲು ಪ್ರಯತ್ನಿಸುತ್ತಲೇ "ಯಾರಲ ಅವರು, ಈಟು ಹೊತ್ತಲ್ಲಿ?" ಎಂದ. ಅವನಿಗೂ ಬೇಸರವೇ. ಮಧುರವಾದ ನಿದ್ದೆಯಿಂದ ಏಳುವುದೆಂದರೆ ಯಾರಿಗಿಲ್ಲ ಸಿಟ್ಟು. ಅದೂ ಅವನೇನು ಕನಸು ಕಾಣುತ್ತಿದ್ದನೋ!

"ನಾನು ಕಣ್ಣಣ್ಣ, ದೊಡ್ಡೀರ" ಎಂದಿತು ಹೊರಗಿನ ಧ್ವನಿ ಪಿಸುಮಾತಲ್ಲಿ, ದೊಡ್ಡೀರನೆಂದರೆ ತಮ್ಮ ಮನೆಯ ಹಿಂದಿನ ಸಾಲಿನವನು. ಸುಮಾರು ಹನ್ನೆರಡು ವರುಷದ ಹುಡುಗ.

ಬಾಗಿಲು ತೆರೆದು ಹೊರಗೆ ಬಂದ ಕೇತಗ "ಏನಲೇ ನಿಂಗೇನು ಬೇರೆ ಕೆಲಸ ಇಲ್ಲವಾ? ಸರಿ ಹೊತ್ತಲ್ಲೇನು ನಿನ್ನ ವ್ಯವಹಾರ?"

"ನಾನಲ್ಲಣ್ಣ, ಅದ್ಯಾರೋ ನಿನ್ನ ಹುಡುಕಿಕೊಂಡು ಬಂದವರೆ, ಕಲ್ಯಾಣ ಪಟ್ಟಣದೋರಂತೆ. ನಮ್ಮ ಮನಿಗೆ ಬಂದು ಕೇತಗನ ಮನೆ ಯಾವುದು ಅಂದರು. ಅದಕ್ಕೇ ನಿಮ್ಮ ಮನೆ ತೋರಿಸಾಣ ಅಂತ ಬಂದೆ. ನನ್ನೇ ಕರ್ಕಂಬಾ ಅಂದರು. ಆಗೋ ಅಲ್ಲಿ ನಿಂತವ್ರೆ" ಎಂದು ಎತ್ತಲೋ ತೋರಿಸಿದ. ಏನೂ ಸ್ಪಷ್ಟವಾಗಿ ಕಾಣದು; ನಕ್ಷತ್ರಗಳ ಬೆಳಕು ಮಾತ್ರ. ಎಲ್ಲವೂ ಮಬ್ಬುಮಬ್ಬಾಗಿತ್ತು. ತಿಂಗಳಿರಲಿಲ್ಲ. ಅದೇನು ದಿನವೋ ಯಾರಿಗೆ ಗೊತ್ತು? ಆ ಕಡೆ ನೋಡಿದ ಕೇತಗ, "ಯಾರವರು?" ಎಂದ. ಉತ್ತರವಿಲ್ಲ. "ಏನಲೇ, ಯಾರೂ ಇಲ್ಲವಲ್ಲಲೇ?" ಎಂದು ಕೇತಗ ದೊಡ್ಡೀರನ ಕಡೆ ತಿರುಗಿದ.

"ಅಲ್ಲೇ ನಿಂತವರಣ್ಣ, ಕರ್ಕಂಬಾ, ನಾವಿಲ್ಲೇ ಇರ್ತೀವಿ ಅಂದರು."

"ಯಾರಪ್ಪಾ ಅವರು...." ಎನ್ನುತ್ತ ಕೇತಗ ದೊಡ್ಡೀರ ತೋರಿಸಿದ ಕಡೆ ನಡೆದ. ಅಲ್ಲೇನು ನಾಲ್ಕಾರು ಮರಗಳ ಗುಂಪು. ಅದರ ನೆರಳಲ್ಲಿ ಬಯಲಲ್ಲಿ ಬಿದ್ದಿರುವಷ್ಟು ಬೆಳಕೂ ಇಲ್ಲ. ಎಂಥದೋ ಗುಬುರು ಹಾಕಿಕೊಂಡು ನಿಂತಿರುವಂತೆ ಮರಗಳು ಕಾಣುತ್ತವೆ. ಹಾಗಾಗಿ ಅಷ್ಟು ದೂರ ಹೋದ ಕೇತಗನ ದೇಹದ ಹೊರರೇಖೆ ಕಾಣಿಸಿ ಮಾಯವಾದಂತಾಯಿತು. ಒಂದು ಕ್ಷಣದಲ್ಲಿ ತೆಗೆದ ಬಾಯನ್ನು ಇದ್ದಕ್ಕಿದ್ದಂತೆ ಮುಚ್ಚಿದರೆ ಉಸಿರುಕಟ್ಟುವಂತೆ 'ಹಷ್' ಎಂಬ ಧ್ವನಿ. ಒಟ್ಟಿಗೇ ಹತ್ತಾರು ಕಾಲುಗಳು ನಡೆದಂತೆ ತರಗಿನ ಪರಪರ ಶಬ್ದ.

ಈ ಹೊತ್ತಿಗೆ ಏನಾಗಿದೆಯೋ ಎಂದು ತಿಳಿಯಲು ಅಳ್ಳಯ್ಯನವರೂ ಗುಡಿಲ ಹೊರಗೆ ಬಂದಿದ್ದರು. ದೊಡ್ಡೀರ ಇನ್ನೂ ಅಲ್ಲೇ ಇದ್ದ. ಆದರೆ ವಯಸ್ಸಾದ ಅವರ ಕಣ್ಣಿಗೆ ಯಾವುದು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. "ಏನೋ ಕೇತಗ ಅದು?" ಎಂದು ಕೂಗಿದರು.

"ಕೇತಗಣ್ಣ ಆ ಕಡೆ ಓದನಜ್ಜಾ" ಎಂದು ಅಲ್ಲೇ ನಿಂತಿದ್ದ ದೊಡ್ಡೀರ ಹೇಳಿದ.

"ನೀನ್ಯಾವನಲೇ ಈಟೋತ್ತಲ್ಲಿ?" ತಾನು ಬಂದಿದ್ದ ಕಾರ್ಯ ಏನೆಂದು ಆ ಹುಡುಗ ಹೇಳಿದ. ಅವನು ತೋರಿಸಿದ ಕಡೆ ಕಣ್ಣು ಹಾಯಿಸಿದರೆ ಅಳ್ಳಯ್ಯನವರಿಗೆ ಏನು ಕಂಡೀತು ಅಲ್ಲಿ? "ಇದೇನು ಇವರ ನಡುರಾತ್ರಿ ಲೀಲೆ"

ಎಂದು ಗೊಣಗಿಕೊಂಡರು ಅಜ್ಜ. ಒಂದು ನಾಲ್ಕು ಕ್ಷಣ ತಡೆದು ಮಗ ಬಾರದ್ದನ್ನು ಕಂಡು "ಕೇತಗ, ಲೋ" ಎಂದು ಕೂಗು ಹಾಕಿದರು. ಉತ್ತರವಿಲ್ಲ. "ಎಲ್ಲಿ ಹೋದ ಇವನು" ಎಂದುಕೊಂಡು ಮತ್ತೆರಡು ಬಾರಿ ಕರೆದರು. ಉಹ್ಞೂ. ಪ್ರಯೋಜನವಿಲ್ಲ. ಏನೋ ಭಯ ಪ್ರಾರಂಭವಾಯಿತು. ಹುಡುಗ ತೋರಿಸಿದ ದಿಕ್ಕಿನ ಕಡೆ ಆರೆಂಟು ಹೆಜ್ಜೆ ಹಾಕಿ ಮತ್ತೆ ಕೂಗಿದರು. ಇಲ್ಲ, ಉತ್ತರವಿಲ್ಲ. ಮತ್ತಷ್ಟು ಹೊತ್ತು ನಿಂತರು. ಒಳಗಿನ ಕಾತರದಿಂದಾಗಿ ಕಾಲುನೋಯ ತೊಡಗಿತು. ಏನಾಯಿತಪ್ಪ ಎಂದು ಎದೆ ಡವಗುಟ್ಟಲಾರಂಭಿಸಿತು. ಮತ್ತೆ ತಮ್ಮ ಗುಡಿಸಲ ಕಡೆ ಹೆಜ್ಜೆ ಹಾಕಿದ ಅಳ್ಳಯ್ಯ ದೊಡ್ಡೀರನಿಗೆ "ಒಗಲಾ ಹೈದ ನಿಮ್ಮ ಅಪ್ಪಯ್ಯನ ಕರ್ಕಂಬಾ. ಈ ಕೇತಗ ಕಾಣೆಸ್ತಲೇ ಇಲ್ಲವಲ್ಲ" ಎಂದು ಹೇಳಿಕಳಿಸಿದರು. ಆ ಹುಡುಗನಿಗೂ ಭಯವಾಗತೊಡಗಿತ್ತು. ಅಲ್ಲದೆ ಕೇತಗನನ್ನು ಹೊರಗೆ ಕರೆದು ಬಂದವರೆಡೆಗೆ ಕಳಿಸಿದವನು ತಾನೇ, ತನ್ನಿಂದಲೇ ಹೀಗಾಯಿತೆಂಬ ಅಳುಕು ಆ ಹುಡುಗನೆದೆಯಲ್ಲಿ ಹೊಳೆಯಲಾರಂಭಿಸಿದ್ದರಿಂದ ಡವಗುಟ್ಟುವ ಎದೆಯೊಂದಗೆ ಓಡುತ್ತಾ ಮನೆಯ ಕಡೆ ಹೋದ.

ಅಳ್ಳಯ್ಯ ಅಕ್ಕಪಕ್ಕದ ಗುಡಿಸಲುಗಳಲ್ಲಿ ಮಲಗಿದ್ದವರನ್ನು ಎಬ್ಬಿಸಿ ಕರೆತಂದರು. ನಡೆದಿದ್ದನ್ನು ಅವರಿಗೆ ವಿವರಿಸಿದ. ಈ ಹೊತ್ತಿಗೆ ದೊಡ್ಡೀರನ ಅಪ್ಪನೂ ಬಂದ. ತಮ್ಮ ಗುಡಿಸಲು ಮುಂದೆ ಬಂದು ಯಾರೋ ಕೇತಗನಿಗಾಗಿ ಕೇಳಿದರಂತೆ; ಕಲ್ಯಾಣದೋರು ಅಂದರಂತೆ. ಏನೋ ಲಗ್ನದ ವಿಚಾರ ಬಸವಣ್ಣನವರು ಏನಾದರೂ ಸುದ್ದಿ ಕಳಿಸಿರಬಹುದು ಅಂತ ಕೇತಗನ ಮನೆ ತೋರಿಸಲು ದೊಡ್ಡೀರನನ್ನು ಕಳಿಸಿದ್ದಾಗಿ ಹೇಳಿದ. ಏನು ವಿಚಾರವೆಂದು ತಾನೇ ಕೇಳಬಹುದಾಗಿತ್ತು. ಆದರೆ ಸರಿರಾತ್ರಿ ಬೇರೆ, ಅಲ್ಲದೆ ಅನುಮಾನವೇನೂ ಬರಲಿಲ್ಲ. ಅದಕ್ಕೇ ತಾವು ಗುಡಿಸಲಿಂದ ಹೊರಕ್ಕೇ ಬರಲಿಲ್ಲ ಎಂದು ವಿವರಿಸಿದ.

ಇಷ್ಟೆಲ್ಲ ಕೇಳಿದ ಮೇಲೆ ಏನೋ ಹುನ್ನಾರ ನಡೆದಿದೆ ಎಂದು ಅನ್ನಿಸಿತು. ಸರಸರ ಓಡಾಡಿ, ಈ ಹೊತ್ತಿಗೆ ಅಲ್ಲಿ ಸೇರಿದ್ದ ಹದಿನೈದು ಇಪ್ಪತ್ತು ಮಂದಿ, ಪಂಜುಗಳನ್ನು ಹೊತ್ತಿಸಿಕೊಂಡು ಬಂದರು. ಕೇರಿಯಲ್ಲೆಲ್ಲ ಓಡಾಡಿದರು, ಜೋರಾಗಿ ಕೂಗಿದರು. ಊರ ಕಡೆ ಹೋದರು. ಅಲ್ಲಿನ ಜನಗಳನ್ನೂ ಎಬ್ಬಿಸಿದರು. ಹುಡುಕಿದ್ದೇ ಹುಡುಕಿದ್ದು, ಎಲ್ಲಿಯೂ ಕೇತಗ ಇಲ್ಲ. ಈ ಹೊತ್ತಿಗೆ ಅವನು ಹೊರಗೆ ಹೋಗಿ ಸಾಕಷ್ಟು ಹೊತ್ತೇ ಆಗಿತ್ತಲ್ಲ, ಏನಾದನೋ. ಆ ಬಂದವರು ಅವನನ್ನು ಹೊತ್ತುಕೊಂಡು ಹೋಗಿರಬೇಕು. ಸರಸರ ಹೆಜ್ಜೆ ಹಾಕಿದರೆ ಅರ್ಧ ಹರದಾರಿ ನಡೆದಿರಬಹುದು. ಆದರೆ ಯಾವ ಕಡೆ ಹೋಗಿರಬಹುದು ಅವರು! ಊಹ್ಞೂ, ಎಲ್ಲ ಪ್ರಯತ್ನ ಮಾಡಿಯಾಯಿತು, ಪ್ರಯೋಜನವಿಲ್ಲ. ಯೋಜನೆ ಹಾಕಿಕೊಂಡು, ಅನುಮಾನ ಬಾರದ ರೀತಿಯಲ್ಲಿ ಬಂದು ಕೇತಗನನ್ನು ಅಪಹರಿಸಿದ್ದಂತೆ ಕಾಣುತ್ತದೆ.

ಕೋಳಿ ಕೂಗುವ ಮೊದಲೇ ಚಕ್ಕಡಿ ಕಟ್ಟಿ ಈ ಕಡೆ ಬಂದದ್ದಾಯಿತು ಇಬ್ಬರೂ. "ಆ ನನ್ನ ಮಗನಿಗೆ ಏನಾಗದೋ" ಎಂದು ಎದೆ ಎದೆ

ಬಡಿದುಕೊಳ್ಳುತ್ತ ಅಳ್ಳಯ್ಯ ಗೋಳಾಡಿದರು. ಬಸವಣ್ಣನವರಿಗೆ ದಿಗ್ಭ್ರಮೆಯಾಯಿತು. ಏನಾಗಿ ಹೋಯಿತಲ್ಲ! ಎದೆ ಧಸಕ್ಕೆಂದಿತು. ಆದರೆ ಇಂಥ ಹೊತ್ತಲ್ಲಿ ದಿಕ್ಕುಗೇಡಿಯಾದರೆ ಹೇಗೆ? ಅವರಿಬ್ಬರಂತೂ ವೈಯಕ್ತಿಕ ಜೀವವಾದ ಆಶಾಕಿರಣಗಳಿಗೆ ತೊಂದರೆಯಾಗುವ ಕಾರಣದಿಂದ ತತ್ತರಿಸಿದ್ದಾರೆ. ತಾವು ಹಾಗೆ ಮಾಡುವಂತಿಲ್ಲ, ಮಾಡಬಾರದು. ತಮ್ಮ ಬಳಿಗೆ ಅವರು ಬಂದಿರುವುದೇ ದಾರಿ ತೋರಿಸಿಯಾರೆಂದು. ತುಂಬ ಪ್ರಯಾಸಪಟ್ಟು ಅವರನ್ನು ಸಮಾಧಾನ ಪಡಿಸಿದ್ದಾಯಿತು. ಜಳಕ ಶಿವಪೂಜೆ ಮುಗಿಸಿ ತಾವೇ ಚಕ್ರವರ್ತಿಗಳ ಬಳಿಗೆ ಅವರನ್ನು ಕರೆದೊಯ್ಯುವುದಾಗಿ ಆಶ್ವಾಸನೆಯಿತ್ತರು. "ನೀವೇ ಕಾಪಾಡಬೇಕು" ಎಂದು ಭಾರವಾದ ಹೆಜ್ಜೆಯಿಡುತ್ತ ಅವರು ಮುಖಮಾರ್ಜನೆಗಾಗಿ ನಡೆದರು. "ಸಂಗ ಕಾಪಾಡುತ್ತಾನೆ" ಎಂದು ಹೇಳುತ್ತಲೇ ಏನು ಮಾಡಬೇಕೆಂದು ಯೋಚಿಸಿದರು. ಪಡಿಹಾರಿ ಉತ್ತಣ್ಣನ ಮೂಲಕ ಅಪ್ಪಣ್ಣನನ್ನು ಕರೆಸಿದರು. ಚಕ್ರವರ್ತಿಗಳ ಸಮಯ ತಿಳಿದು ಬರಲು ಹೇಳಿ ಕಳಿಸಿದರು. ತುರ್ತಾದ ವಿಷಯ, ಕಾಣಲೇಬೇಕಂತೆ ಎಂದು ಹೇಳಲು ತಿಳಿಸಿದರು.

ಏನು ಮಾಡಿದರೋ, ಏನು ಬಿಟ್ಟರೋ ಎಲ್ಲರೂ ಅನ್ಯಮನಸ್ಕರಾಗಿ ಕಾರ್ಯದಲ್ಲಿ ತೊಡಗಿದ್ದರು. ಮನೆಯ ಹೆಣ್ಣು ಮಕ್ಕಳಂತೂ ಮರವಟ್ಟು ಹೋದರು ವಿಷಯ ತಿಳಿದು. ತಮ್ಮ ತಂದೆಯನ್ನು ಹೇಗೋ ಹಾಗೆ ಗಂಗೆ–ನೀಲ–ನಾಗಕ್ಕರುಗಳು ಅಳ್ಳಯ್ಯ–ಮಧುವಯ್ಯಗಳನ್ನು ಸಂತೈಸಿದರು, ಉಪಚರಿಸಿದರು. ಬಲವಂತವಾಗಿ ಅವರು ಪ್ರಾತರ್ವಿಧಿಗಳನ್ನು ಮುಗಿಸುವಂತೆ ಮಾಡಿದರು.

ಈ ಹೊತ್ತಿಗೆ ಅಪ್ಪಣ್ಣ ಅರಮನೆಯಿಂದ ಬಂದ. ಪ್ರಭುಗಳು ಮಧ್ಯಾಹ್ನದ ವಿಶ್ರಾಂತಿಯ ನಂತರ ಬಳ್ಳಿಗಾವೆಯ ಸಾಮಂತರ ಜೊತೆ ಚರ್ಚಿಸುವ ಕಾರ್ಯಕ್ರಮವಿದೆಯಂತೆ, ಹೀಗಾಗಿ ಸೂರ್ಯೋದಯಾದಿ ಹತ್ತು ಗಳಿಗೆಯ ಹೊತ್ತಿಗೆ ಬರಲಿ ಎಂದು ಅಪ್ಪಣೆಕೊಡಿಸಿದ್ದಾರಂತೆ. ಕೇಳಿ ಬಸವಣ್ಣನವರಿಗೆ ಕೊಂಚ ಎದೆಯ ಭಾರ ಇಳಿದಂತಾಯಿತು. ಇಷ್ಟು ಬೇಗ ದೊರೆಗಳನ್ನು ಕಾಣಲು ಸಾಧ್ಯವಾಯಿತಲ್ಲ. ಬೇಗ ಎಲ್ಲ ಕಡೆಗಳಿಗೆ ಬೇಹುಗಾರರನ್ನು ಕಳಿಸಿ ಕೇತಗನನ್ನು ಹುಡುಕಿಸುವ ಏರ್ಪಾಟು ಮಾಡಿಸಬಹುದು. ಆದರೆ ಸಂಗನ ದಯದಿಂದ ಕೇತಗನ ಪ್ರಾಣಕ್ಕೆ ಅಪಾಯ ಒದಗದಿದ್ದರೆ ಸಾಕು.

ವೇಳೆಗೆ ಸರಿಯಾಗಿ ಪ್ರಭುಗಳ ದರ್ಶನ ದೊರಕಿತು. ಬಸವಣ್ಣನವರು ಸ್ಥೂಲವಾಗಿ ವಿಷಯವನ್ನು ತಿಳಿಸಿದರು. "ನೀವು ಚಿಂತೆಪಡಬೇಡಿ ಬಸವಣ್ಣನವರೇ, ಖಂಡಿತ ಆ ಹುಡುಗನನ್ನು ಹುಡುಕುವ ಕಾರ್ಯ ಬೇಗನೇ ಮುಗಿಸುತ್ತಾರೆ" ಎಂದು ಪ್ರಭುಗಳು ಆಶ್ವಾಸನೆಯಿತ್ತರು. ಮಿಂಚಿನಂತೆ ಅವರು ಆಜ್ಞೆಗಳನ್ನಿತ್ತರು. ಮುಖ್ಯ ಬೇಹುಗಾರರಿಗೆ ತಕ್ಷಣ ಕರೆಕಳುಹಿಸಿದರು; ಎಲ್ಲ ಕಡೆಗಳಲ್ಲಿ ಹುಡುಕುವ ಏರ್ಪಾಡಿಗಾಗಿ ಆಣತಿಯಿತ್ತರು. ಹುಡುಗನ ವಯಸ್ಸು, ಚಹರೆ ಇತ್ಯಾದಿಗಳ ವಿವರವನ್ನು ಬೇಹುಗಾರ ಮುಖ್ಯರು ಪಡೆಯಲು ಸೂಚಿಸಿ, ಪ್ರಭುಗಳು ಎರಡೇ

ಕ್ಷಣದ ತಮ್ಮ ಸಂದರ್ಶನವನ್ನು ಮುಗಿಸಿ ಹೊರಡಲು ಉದ್ಯುಕ್ತರಾದರು. ಅಳ್ಳಯ್ಯ-ಮಧುವಯ್ಯಗಳು ಅವರ ಪಾದಕ್ಕೆ ಬಿದ್ದು ರೋದಿಸಲು ತೊಡಗಿದರು. ಅವರಿಗೆ ಒಂದೆರಡು ಉಪಚಾರದ ಮಾತುಗಳಾಡಿ ಪ್ರಭುಗಳು ಅಣ್ಣನವರ ಕಡೆಗೆ ತಿರುಗಿ "ಆ ಹುಡುಗನನ್ನು ಅಪಹರಿಸಿದವರ ಪತ್ತೆಯಾದ ಮೇಲೆ ಹೊಸ ಸತ್ಯಗಳು ಕಾಣಬಹುದೇನೋ ಎನ್ನಿಸುತ್ತಿದೆ ನಮಗೆ" ಎಂದು ಒಗಟಾಗಿ ಮಾತನಾಡಿ ಒಳನಡೆದರು.

ಕೇತಗನ ಪತ್ತೆಗೆ ರಾಜಭಟರ ಪಡೆ ಕಾರ್ಯಪ್ರವೃತ್ತವಾಗುತ್ತದೆ, ಸರಿ. ಆದರೆ ಈ ಪ್ರಸಂಗ ಒಟ್ಟು ತಮ್ಮ ಸಮುದಾಯಕ್ಕೆ ಸಂಬಂಧಿಸಿದ ಪ್ರಶ್ನೆ. ಹೀಗಾಗಿ, ಮುಂದೆ ತಮ್ಮ ಕಾರ್ಯವಿಧಾನ ಹೇಗಿರಬೇಕೆಂದು ಪೂರ್ವಯೋಜನೆ ಹಾಕಿಕೊಳ್ಳುವುದು ಒಳಿತು. ಹೊರಗಿನಿಂದ ಬರುವ ಅಪಾಯಗಳನ್ನು ಮುಂಚೆಯೇ ಆಲೋಚಿಸಿ ಅವುಗಳನ್ನು ಎದುರಿಸಲು ಸಜ್ಜಾಗಿರಬೇಕಲ್ಲ. ಹೇಗಿದ್ದರೂ, ಅಳ್ಳಯ್ಯ-ಮಧುವಯ್ಯಗಳು ಇದ್ದಾರೆ. ಅವರ ಸಮ್ಮುಖದಲ್ಲಿಯೇ ಕಲ್ಯಾಣದ ಪ್ರಮುಖ ಶರಣರು ಸಭೆ ಸೇರಿ ಮಾಡಬೇಕಾದುದನ್ನು ನಿರ್ಧರಿಸಿದರೆ ಒಳ್ಳಿತೆಂದು ಅನ್ನಿಸಿ ಸಂಜೆಯ ಸಭೆ ಏರ್ಪಾಟಾಯಿತು. ಕಲ್ಯಾಣದ ಶರಣರ ಮನೆಗಳಿಗೆ ಸುದ್ದಿ ಹೋಯಿತು.

ಸಂಜೆಯ ಸಭೆಗೆ ಸಾಕಷ್ಟು ಮಂದಿ ಶರಣರೇನೋ ಬಂದರು. ಆ ದಿನ ಹಿಂದಿನ ದಿನದ ಸಭೆಗಳಲ್ಲಿದ್ದಂತೆ ಯಾರ ನಡವಳಿಕೆಯಲ್ಲೂ ಉತ್ಸಾಹ ಅಷ್ಟಾಗಿ ಕಂಡುಬರಲಿಲ್ಲ. ಈ ಹೊತ್ತಿಗೆ ಕೇತಗನ ಅಪಹರಣದ ಸುದ್ದಿ ಊರ ಬಾಯ ಎಲಡಿಕೆಯಾಗಿತ್ತು. ಹೀಗಾಗಿ ಬಂದ ಭಕ್ತರ ಮುಖ ಕಳವಳದಿಂದ ಮ್ಲಾನವಾಗಿತ್ತು. ಉಪಚಾರದ ಮಾತು, ಶರಣಾರ್ಥಿಗಳು, ಯೋಗಕ್ಷೇಮ ವಿಚಾರಣೆ – ಎಲ್ಲವೂ ಯಥಾಪ್ರಕಾರವಾಗಿಯೇ ನಡೆಯಿತು. ಆದರೆ ಅದೆಲ್ಲ ವಿಧಿಪೂರ್ವಕವಾಗಿ ನಡೆದಂತಿತ್ತೇ ಹೊತ್ತು ಹೃತ್ಪೂರ್ವಕವಾಗಿ ನಡೆದಂತಿರಲಿಲ್ಲ.

ಸಭೆ ಪ್ರಾರಂಭವಾಯಿತು. ಬಸವಣ್ಣನವರ ಮಾತೇ ಸಭೆಯ ಪ್ರಾರಂಭ. ಗದ್ಗದ ಕಂಠದಿಂದ ನಡೆದದ್ದನ್ನು ಸಭೆಗೆ ಅವರು ವಿವರಿಸಿದರು. ತಾವು ಕೇತಗನ ಪತ್ತೆಗೆ ಏರ್ಪಾಟು ಮಾಡಿರುವ ವಿಷಯವನ್ನು ತಿಳಿಸಿದರು. ಶರಣ ಚಳುವಳಿಗೆ ತಮ್ಮ ನೋವಿನ ಮೂಲಕ ಅಳ್ಳಯ್ಯ-ಮಧುವಯ್ಯಗಳು, ಕೇತಗ-ಚಂದಲೆಯರು ಪುಷ್ಟಿ ನೀಡುತ್ತಿರುವ ಪರಿಯನ್ನು ವಿವರಿಸಿದರು. ಯಾವುದೇ ಚಳುವಳಿ, ದೊಡ್ಡ ಕಾರ್ಯ, ಇಂಥ ನೋವಿನ ಕಾರಣದಿಂದಾಗಿ ಬಲ ಪಡೆಯುತ್ತದೆ. ಏಕೆಂದರೆ ತಿಂದ ನೋವು, ಪಟ್ಟ ಸಂಕಟ ಶರಣನ ನಂಬಿಕೆಯನ್ನು ಬಲಪಡಿಸುತ್ತದೆ, ಅವನ ಛಲವನ್ನು ದೃಢಪಡಿಸುತ್ತದೆ. ಇಂಥ ಕಷ್ಟದ ಸನ್ನಿವೇಶದಲ್ಲಿ ಶರಣರೆಲ್ಲ ತಾಳ್ಮೆಯಿಂದ, ಅವಡುಗಚ್ಚಿ ಕಷ್ಟವನ್ನು ಅನುಭವಿಸಿ, ಗುರಿಸಾಧನೆಗಾಗಿ ಪ್ರಯತ್ನಿಸಬೇಕು ಎಂದರು. ಈ ಜೀವಗಳಿಗೆ ಕೂಡಲ ಸಂಗ ಒಳ್ಳೆಯದನ್ನು ಮಾಡಿಯೇ ಮಾಡುತ್ತಾನೆ ಎಂದರು. ಹಾಗೆ ಮಾಡಲಿ ಎಂಬುದು ಎಲ್ಲರ ಪ್ರಾರ್ಥನೆ ಎಂದು ಹೇಳಿ, ಈ ಮದುವೆಯ ಬಗ್ಗೆ ಈಗಾಗಲೇ ಜನ

ಮಾತಾಡಿಕೊಳ್ಳುತ್ತಿದ್ದಾರೆ. ಹೆಜ್ಜೆ ಇರಿಸಿಯಾಗಿದೆ, ಮುಂದಡಿಯಿಡುವುದೇ ಶ್ರೇಯಸ್ಕರ, ಹಾಗಾಗಿ ಹೇಗೆ ಈ ಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸಬೇಕೆಂಬುದರ ಬಗ್ಗೆ ತಾವೆಲ್ಲ ಆಲೋಚಿಸಿ ಸಲಹೆ ನೀಡಬೇಕೆಂದು ಪ್ರಾರ್ಥಿಸಿದರು.

ಸಭೆಯಲ್ಲಿ ಎಷ್ಟೋ ಹೊತ್ತು ಮೌನ. ಎಲ್ಲ ಮುಂದೆ ಕುಳಿತಿದ್ದ ಹಿರಿಯರ ಕಡೆಗೇ ನೋಡುವವರು. ಅಂಬಿಗರ ಚೌಡಯ್ಯನವರೂ ಮೌನವಾಗಿದ್ದಾರೆ, ಚೆನ್ನಬಸವಣ್ಣನವರೂ ಸುಮ್ಮನಿದ್ದಾರೆ, ಮಡಿವಾಳ ಮಾಚಿದೇವರೂ ಏನೂ ಹೇಳಲಾರದವರಾಗಿದ್ದಾರೆ. ಅವರೆಲ್ಲ ಮನಸ್ಸಿನಲ್ಲಿ ಈ ಬಗ್ಗೆ ಆಳವಾಗಿ ಏನನ್ನಾದರೂ ಯೋಚಿಸುತ್ತಿದ್ದಾರೆಂದೋ ಏನೋ. "ಹಿರಿಯರು ತಾವಿದ್ದೀರಲ್ಲ, ಅವರು ಹೇಳಲಿ. ಆಮೇಲೆ ನಮಗೆ ಮಾತನಾಡಲು ಏನಾದರೂ ಹೊಳೆದೀತೇನೋ" ಎಂದರು ಯಾರೋ ಒಬ್ಬರು. ಹೌದು ಹೌದೆಂದು ಒಂದೆರಡು ದನಿಗಳು ಅದಕ್ಕೆ ಸೇರಿದವು. ಮತ್ತೆ ಸಭೆಯಲ್ಲಿ ಮೌನ. ಹಿರಿಯರ ಮೌನವನ್ನು ಅರ್ಥಮಾಡಿಕೊಂಡ ರೀತಿಯಲ್ಲಿ ಬಸವಣ್ಣನವರು ಹೀಗೆಂದರು: "ತಮ್ಮ ಮಾತು ಪ್ರಾರಂಭವಾಗಲಿ ಅವರೆಲ್ಲ ಆನಂತರ ಮಾತನಾಡುವವರೇ"

ಮತ್ತೆ ಒಂದೆರಡು ಕ್ಷಣದ ಮೌನದನಂತರ ಮೂಲೆಯೊಂದರಿಂದ "ಕೀತಗನ ಪತ್ತೆಯಾಗುವವರೆಗೆ ಈ ಮಾತು ಇಲ್ಲಿಗೇ ನಿಲ್ಲುವುದು ಒಳ್ಳೆಯದಲ್ಲವೇ, ಅಣ್ಣನವರೇ" ಎಂದು ಯಾರೋ ಮೆಲ್ಲಗೆ ನುಡಿದರು. ಎಲ್ಲ ಆ ಮೂಲೆಯ ಕಡೆ ತಿರುಗಿದರು. ಅದೂ ಸರಿ ಎಂದರು ಒಂದಿಬ್ಬರು.

"ಅದು ಹೇಗೆ ಆಗುತ್ತದೆ? ಇವತ್ತಲ್ಲ ನಾಳೆ ಕೀತಗ ನಮ್ಮ ಜೊತೆ ಬರುತ್ತಾನೆ, ಎಲ್ಲ ಏರ್ಪಾಟು ನಡೆದಿದೆ. ನಿಶ್ಚಿತವಾದ ದಿನ ಹತ್ತಿರ ಬರುತ್ತಿದೆ. ಇಂಥ ಕಷ್ಟಬಾರದ ಹಾಗೆ ಮುಂದೇನು ಮಾಡಬೇಕು ಎಂದು ಆಲೋಚಿಸಿ" ಎಂದು ಬಸವಣ್ಣನವರೇ ಕೇಳಿಕೊಂಡರು.

"ಮಾತಾಡ್ರಿ ಅಂದಿರಿ, ಮಾತಾಡಿದರೆ ಆದಾಗದು ಎನ್ನುತ್ತೀರಿ" ಎಂದರು ಇನ್ನಾರೋ. ಗುಜುಗುಜು. ಛೇ ಎಂದುಕೊಂಡರು ಕೆಲವರು.

"ಆ ಹುಡುಗನಿಗೆ ಏನಾದರೂ ಆಗಿದ್ದರೆ ಏನು ಸ್ವಾಮಿ ಮಾಡಾದು?" ಎಂದಿತು ಮತ್ತೊಂದು ಧ್ವನಿ. ಈಗ ಗುಜುಗುಜು ಹೆಚ್ಚಾಯಿತು.

"ಆ ಕೀತಗ ಯಾಕಾರ ಈ ಮದುವೆಗೆ ಒಪ್ಪಿದನೋ. ಆಗ್ತಿದೆಯಲ್ಲ ಮದುವೆ ಸರಿಯಾಗಿ" ಎಂದರು ಮತ್ತಾರೋ.

"ಅವರ ಪಾಡಿಗೆ ಅವರಿದ್ದರು. ಸರಿಯಾಗಿ ಬುದ್ಧಿ ಹೇಳದೆ ವಿಪರೀತಕ್ಕಿಟ್ಟುಕೊಂಡಿದೆ" ತಲೆಗೊಬ್ಬರದು ಮಾತು. ವಾತಾವರಣ ಕದಡಿದ ಹಾಗೆ ಕಂಡಿತು.

ಹೀಗೇ ಬಿಟ್ಟಿದ್ದರೆ ಪರಿಸ್ಥಿತಿ ಮತ್ತಷ್ಟು ಗೊಂದಲಮಯವಾಗುತ್ತಿತ್ತೇನೋ. ಇದನ್ನೆಲ್ಲ ಗಮನಿಸುತ್ತಿದ್ದ ಮಾಚಯ್ಯನವರು ಎದ್ದು ನಿಂತಾಗ, ಗುಜುಗುಜು ಸದ್ದು ಅಡಗಿ, ಎಲ್ಲರೂ ಅವರ ಕಡೆಗೆ ನೋಡುತ್ತ ಕುಳಿತರು. ಗಂಭೀರವಾಗಿ ಮಾತಿಗೆ ಆರಂಭಿಸಿದರು : "ಇಲ್ಲಿ ಆಡೋ ಮಾತುಗಳನ್ನು ಕೇಳಿದರೆ ಈಗ ಬಂದಿರೋ

ಪರಿಸ್ಥಿತಿ ಎಂಥದು ಎಂಬುದು ತಿಳಿಯುತ್ತದೆ" ಎಂದರು. ಅಪಾಯವೆಲ್ಲಿ ಆದೀತೋ ಎಂಬ ಭಯ ಶರಣರನ್ನು ಆವರಿಸಿರುವ ರೀತಿ ಅದು ಎಂದು ವಿಶ್ಲೇಷಿಸಿದರು. "ಕೆಳಗಿನೋರ ಭಯ" ಎಂದು ಯಾರೋ ಕೂಗಿದರು. ಮತ್ತೆ ಗದ್ದಲ ಆರಂಭವಾಯಿತು. "ಹೌದು ಕೆಳಗಿನೋರ ಭಯ. ಅಲ್ಲದೆ, ಅದಕ್ಕಿಂತ ಹೆಚ್ಚಾಗಿ, ಹೊರಗಿನವರಿಂದಾದ ಭಯ" ಎಂದರು ಚೆನ್ನಬಸವಣ್ಣನವರು.

"ಹೊರಗಿನೋರೂ ಇರಬಹುದು. ಆದರೆ ಭಯಕ್ಕೆ ಕಾರಣ ನಮ್ಮಲ್ಲಿರೋ ಕೆಲವರೇ" ಎಂದು ನೇರವಾಗಿ ಯಾರೋ ಆರೋಪಿಸಿದರು.

"ಅಂದರೆ, ನಮ್ಮವರೇ ಕೇತಗನನ್ನು ಎಳಕೊಂಡು ಹೋಗಿದ್ದಾರೆ ಅಂತಲಾ ನಿಮ್ಮರ್ಥ?"

"ಯಾಕಾಗಿರಬಾರದು. ನಮ್ಮನಮ್ಮಲ್ಲಿ ಏನು ನಡೆದಿದೇಂತ ಹೊರಗಿನೋರಿಗೆ ಗೊತ್ತಿರೋದಕ್ಕಿಂತ ನಮ್ಮವರಿಗೇ ತಾನೆ ಜಾಸ್ತಿ ಗೊತ್ತಿರೋದು?"

"ಶರಣರು ಶರಣರಿಗೆ ಹಂಗೆ ಮಾಡುವುದುಂಟಾ!" ಎಂದು ಯಾವುದೋ ಮುಗ್ಧ ಧ್ವನಿಯ ಪ್ರಶ್ನೆ.

"ಅಯ್ಯೋ ಸ್ವಾಮಿ. ಶರಣರಾದರೇನು ಕೆಳಗಿನೋರು ಕೆಳಗಿನವರೇ, ಮೇಲಿನವರು ಮೇಲಿನವರೇ. ನಮ್ಮ ಮನೇಲಿ ತಾವು ಉಣ್ಣಬಾರದು ಅಂತ ಹೇಳಿಕೊಳ್ಳೋ ಅಯ್ನೋರುಗಳಿಲ್ಲವಾ ನಮ್ಮಲ್ಲಿ. ಇದಕ್ಕೆ ಒಪ್ಪಿಯಾರಾ ಅಂಥೋರು?" ನೇರವಾದ ಬಾಣ. ತತ್ತರಿಸುವಂತೆ ಚುಚ್ಚಿದ ಮಾತು.

ಅಂಬಿಗರ ಚೌಡಯ್ಯ ಪರಿಸ್ಥಿತಿಯನ್ನು ತಮ್ಮ ಹಿಡಿತಕ್ಕೆ ತಂದುಕೊಳ್ಳಲು ಎದ್ದು ನಿಂತರು, "ಈ ಮಾತುಗಳಿಗೆ ಆಧಾರವಿಲ್ಲದೆ ಇಲ್ಲ. ಒಂದು ಕಡೆ ಶಿವಾಚಾರದ, ಸಮಾನತೆಯ ಮಾತು. ಇನ್ನೊಂದು ಕಡೆ ದೊಡ್ಡವರೇ ಹೇಳೋ ವ್ಯತ್ಯಾಸದ ಮಾತು." ಎಂದರು ಒಗಟಿನಂತೆ. ಎಲ್ಲರಲ್ಲಿಯೂ ಒಂದು ರೀತಿಯ ಹೊಸ ಆವೇಶ ಮೂಡಿತು ಈ ಮಾತು ಕೇಳಿ, ಚೌಡಯ್ಯನವರು ಹೇಳಿದರು: "ನಮ್ಮಲ್ಲಿ ಪ್ರಾಜ್ಞರಾದವರೇ ಹೇಳಿಬಿಟ್ಟಿದ್ದಾರಲ್ಲ; ಲಿಂಗ ಕಟ್ಟಬೇಕಾದಾಗಲೂ ಜಾತಿ ಯಾವುದು ಅಂತ ನೋಡಿ ಕಟ್ಟಬೇಕು ಅಂತ. ದೊಡ್ಡ ಜಾತಿಯವರನ್ನು ಪರೀಕ್ಷೆ ಮಾಡಿ ಯೋಗ್ಯ ಅಂತ ಖಾತರಿ ಮಾಡಿಕೊಳ್ಳಬೇಕು. ಆದರೆ ಕೆಳಗೆ ಹೋದ ಹಾಗೆಲ್ಲ ಅವರಿಗೆ ಪರೀಕ್ಷೆ ಮಾಡೋ ರೀತಿ ಬೇರೆ, ಅವಧಿ ಬೇರೆ!" ಎಂದರು. ಅವರ ಮಾತಿಗೆ ವಿಶೇಷ ವ್ಯಂಗ್ಯ ಮೂಡಿತ್ತು. ಅವರ ಮಾತು ಕೇಳಿದವರಲ್ಲಿ ಬಹುಮಂದಿಗೆ ಅವರೇನು ಹೇಳುತ್ತಿದ್ದಾರೆಂಬದು ಸ್ಪಷ್ಟವಾಗಲಿಲ್ಲವೆಂಬುದು ಸರಿಯೇ. ಆದರೆ ತಕ್ಕಷ್ಟು ಓದಿಕೊಂಡಿದ್ದವರಿಗೆ ಅರ್ಥವಾಗಿತ್ತು. ಚೆನ್ನಬಸವಣ್ಣನವರ ವಚನವೊಂದರ ಜಾಡು ಹಿಡಿದು ಚೌಡಯ್ಯನವರು ಹೀಗೆ ಮಾತಾಡಿದ್ದು ಎಂದು. "ಶ್ರೀಗುರುವಾದಾತನು ಸಕಲಾಗಮಂಗಳ ಹೃದಯವನರಿದು, ತನ್ನ ತಾನರಿದು ಸರ್ವಾಚಾರ ತನ್ನಲ್ಲಿ ನೆಲೆಗೊಂಡು ಉಪದೇಶವ ಮಾಡುವ ಕ್ರಮವೆಂತೆಂದಡೆ: ಬ್ರಾಹ್ಮಣನ ಮೂರು ವರುಷ ನೋಡಬೇಕು; ಕ್ಷತ್ರಿಯನ

ಆರು ವರುಷ ನೋಡಬೇಕು; ವೈಶ್ಯನ ಒಂಬತ್ತು ವರುಷ ನೋಡಬೇಕು; ಶೂದ್ರನ ಹನ್ನೆರಡು ವರುಷ ನೋಡಬೇಕು. ನೋಡಿದಲ್ಲದೆ ದೀಕ್ಷೆಯ ಕೊಡಲಾಗದು." ಎಂದು ಮೊದಲಾಗುವ ವಚನ ಅದು.

ಚೆನ್ನಬಸವಣ್ಣನವರಿಗೆ ಮಾತು ತಾಗಿತ್ತು. "ಆಗಮಗಳಲ್ಲಿ ಹಾಗಿದೆ. ಅದಕ್ಕೆ ನನ್ನೊಂದು ವಚನದಲ್ಲಿ ಹಾಗೆ ಹೇಳಿದ್ದೇನೆ" ಎಂದರು. ಈಗ ಜನಗಳಿಗೆ ಅರ್ಥವಾಯಿತು. ಚೌಡಯ್ಯನವರು ಆಡಿದ್ದು ಯಾರನ್ನು ಕುರಿತು ಎಂದು. ಕೆಲವರಿಗೆ ಆಶ್ಚರ್ಯ, ಅವರ ನೇರ ಮಾತು ಕೇಳಿ.

"ಆಗಮ ಶಾಸ್ತ್ರ ಅಂತಲೇ ಅಲ್ಲವಾ ಕೆಟ್ಟಿರೋದು. ಶಾಸ್ತ್ರಂಗಳೆಂಬವು ಸರಸ್ವತಿಯ ಗೊಡ್ಡಾಟ, ಆಗಮವೆಂಬವು ಋಷಿಯ ಮರುಳಾಟ ಅಂತ ಪ್ರಭುಗಳು ಹೇಳಿಲ್ಲವಾ? ಅವನ್ನೆಲ್ಲ ಶರಣಧರ್ಮ ತಿಪ್ಪೆಗೆ ಎಸೆದಾಗಲೇ ನಿಜವಾದ ಶಿವಾಚಾರ ಸಾಧ್ಯವಾಗುವುದು" ಎಂದರು ಚೌಡಯ್ಯನವರು.

"ಚೌಡಯ್ಯನವರೇ, ತಾವು ತಿಳಿದವರು. ಶ್ರೇಷ್ಠರನ್ನೇ ನಮ್ಮ ಧರ್ಮಕ್ಕೆ ಸೇರಿಸಿಕೊಂಡರೆ ಧರ್ಮ ಉದ್ಧಾರವಾಗುತ್ತದೆ ಎಂದು ಈ ರೀತಿ ಹೇಳಿರಬಹುದು ಚೆನ್ನಬಸವಣ್ಣ. ತಾವು ಆ ವಿಷಯ ಕೈಬಿಟ್ಟು ಈಗಿನ ಪರಿಸ್ಥಿತಿಯಲ್ಲಿ ಏನು ಮಾಡಬೇಕು ಎಂಬುದನ್ನು ತಿಳಿಸಿ ಉಪಕರಿಸಬೇಕು" ಬಸವಣ್ಣನವರು ಕೈಮುಗಿದು ಎದ್ದು ನಿಂತು ಬೇಡಿಕೊಂಡರು. ಚೆನ್ನಬಸವಣ್ಣನವರು ಮ್ಲಾನವಾಗಿದ್ದರು, ಏನು ಮಾತಾಡಲೂ ಅವರಿಗೆ ತೋಚಲಿಲ್ಲ.

"ನಿಜವಾಗಿಯೂ ಚೆನ್ನಬಸವಣ್ಣನವರನ್ನು ತೆಗಳಲು ಈ ಮಾತಾಡಲಿಲ್ಲ. ಅವರಿಗೆ ನೋವಾಗಿದ್ದರೆ ದಯವಿಟ್ಟು ಕ್ಷಮಿಸಲಿ. ಈಗ ಮಾತ್ರವಲ್ಲ, ಯಾವಾಗಲೂ ಶರಣಧರ್ಮದ ಬಗ್ಗೆ ಕೊಚ್ಚಿಕೊಳ್ಳುವವರು ತಮ್ಮ ಹಿಂದಿನ ಜಾತಿಗೇ ಅಂಟಿಕೊಂಡು ಕೆಳಗಿನ ಜನರನ್ನು ಹೀಗೆಳೆಯುವ, ದೂರಸರಿಸುವ ರೀತಿ ನೋಡಿ ನೋಡಿ ನನ್ನ ಮನಸ್ಸು ರೋಸಿಹೋಗಿತ್ತು. ಈಗದು ಹೊರಕ್ಕೆ ಬಂತು ಅಷ್ಟೆ." ಎಂದರು ಉದ್ವೇಗಭರಿತರಾಗಿ.

"ಶರಣಧರ್ಮಕ್ಕೆ ಮೇಲುಜಾತಿಯೋರನ್ನ ಸೇರಿಸಿಕೊಳ್ಳಲೇಬಾರದಿತ್ತು" ಎಂದರು ಯಾರೋ. ಆದರೆ ಮತ್ತೆ ಮೌನ ಆವರಿಸಿತು. ಬಸವಣ್ಣನವರು ವ್ಯಾಕುಲಗೊಂಡರು. ಆದಷ್ಟು ಬೇಗ ತೀರ್ಮಾನವೊಂದು ಬಂದರೆ ಸಾಕು ಎನ್ನಿಸಿಬಿಟ್ಟಿತ್ತು.

"ಚೌಡಯ್ಯನವರೇ, ಚರ್ಚೆ ಸಾಕು. ಕೊನೆಯ ಮಾತಾಡಿ ತೀರ್ಮಾನ ಹೇಳಿಬಿಡಿ ನೀವೆ" ಎಂದು ಬೇಡಿಕೊಂಡರು.

"ಅಣ್ಣನವರೇ, ತಮ್ಮಂತಹ ಮಹಿಮಾವಂತರ ಮುಂದೆ ಏನೇನಾಡಿಬಿಟ್ಟೆನೋ, ಕ್ಷಮೆಯಿರಲಿ. ಹೆಚ್ಚು ಮಾತು ಯಾರಿಗೂ ಬೇಡ ಈಗ. ಈ ಮದುವೆ ಆಗಬೇಕು, ಜಾತಿಯ ಭೂತ ಶರಣವರ್ಗದಿಂದ ದೂರವಾಗಬೇಕು. ಒಂದು ಕಡೆ ಬೇಹುಗಾರಿಕೆ ನಡೆಯಲಿ, ಕೇತಗ ಕ್ಷೇಮವಾಗಿ ಬರ್ತಾನೆ ಅನ್ನುವ ನಂಬಿಕೆ ನನಗಿದೆ. ಮತ್ತೊಂದು ಕಡೆ ನಾವೆಷ್ಟು ಗಟ್ಟಿ, ಶರಣಧರ್ಮದ ಬುನಾದಿ ಎಂಥದು

ಎಂದು ಸಾಬೀತುಮಾಡಲು ಈ ಮದುವೆ ಒಂದು ಪರೀಕ್ಷೆ. ನಡೆಯಬೇಕು ಅದು. ಯಾವ ಧರ್ಮಕ್ಕೇ ಸೇರಿರಲಿ ಜಾತಿಯಿಂದ ತೊಂದರೆ ಕೆಳಗಿನವರಿಗೆ. ಅದಕ್ಕೇ ಮೇಲು–ಕೀಳು ಅನ್ನೋದು ಹೋಗಬೇಕು," ಎಂದರು. ಅವರ ಅಭಿಪ್ರಾಯವೇ ಸಭೆಯ ತೀರ್ಮಾನ.

## ೧೨

ನಮ್ಮ ನಾಗಕ್ಕನಿಂದಾಗಿ ನನಗೆ ತಾಯಿ ಇಲ್ಲ ಎಂದು ಎಂದೂ ಅನ್ನಿಸಿಯೇ ಇಲ್ಲ. ಅವಳ ಹೊಟ್ಟೆಯಲ್ಲಿ ನಾನು ಹುಟ್ಟ ಬರಲಿಲ್ಲವೇ ಹೊರತು, ಅವಳು ಅಂದಿನಿಂದ ಇಂದಿನವರೆಗೆ ಅಮ್ಮನಂತೆಯೇ ನೋಡಿಕೊಳ್ಳುತ್ತಿದ್ದಾಳೆ. ತಾಯಿಯ ಪ್ರೇಮವನ್ನು ನಾನು ನೇರವಾಗಿ ಕಂಡವನಲ್ಲ. ಆದರೆ ಇದಕ್ಕಿಂತ ತಾಯಿ ಇನ್ನೇನು ನೀಡಬಹುದು; ನಾಗಕ್ಕನಿಗಿಂತ ಅಕ್ಕರೆಯಿಂದ ಯಾವ ತಾಯಿ ತಾನೇ ನೋಡಿಕೊಳ್ಳಬಲ್ಲಳು? ಚನ್ನಬಸವಣ್ಣನಿಗಿಂತ ಮೊದಲೇ ಹುಟ್ಟಿದ್ದರಿಂದ ತಮ್ಮನಾದರೂ ನಾನವಳ ಮೊದಲ ಮಗುವಾಗಿಬಿಟ್ಟೆ. ಅವಳ ಮಮತೆ ಅಂಥದು; ಕಕ್ಕುಲತೆ ಅಂಥದು. ಹೆಚ್ಚು ಮಾತನಾಡುವವಳಲ್ಲ; ಆದರೆ ಮೌನ ಕೆಲಸಗಾತಿ. ಏನೂ ಹೇಳದೆಯೇ ನನ್ನೆಲ್ಲ ಬೇಕು–ಬೇಡಗಳನ್ನು ನನ್ನ ನಾಗಕ್ಕ ಅರ್ಥಮಾಡಿಕೊಳ್ಳುತ್ತಾಳೆ. ನನಗಿಂತ ನನ್ನ ವಿಷಯ ಅವಳಿಗೇ ಗೊತ್ತಿರುವಂತೆ ಕಾಣುತ್ತದೆ. ಯಾವ ಸನ್ನಿವೇಶದಲ್ಲಿ ನಾನು ಹೇಗೆ ವರ್ತಿಸುತ್ತೇನೆ, ಪ್ರತಿಕ್ರಿಯಿಸುತ್ತೇನೆಂದು ಅವಳು ಬಲ್ಲಳು.

ಆದರೆ ಅವಳು ಪಟ್ಟ ಪಾಡೆಷ್ಟು, ಅನುಭವಿಸಿದ ನೋವೆಷ್ಟು, ಎದುರಿಸಿದ ಸಮಸ್ಯೆಗಳೆಷ್ಟು? ಎಂದೂ ಬಾಯಿ ತೆರೆದು ಗೋಳಾಡಲಿಲ್ಲ, ತನ್ನ ಕಷ್ಟಕ್ಕೆ ಇತರರು ಕಾರಣವೆಂದು ದೂರಲಿಲ್ಲ. ತನಗೆ ಯಾರೂ ಸಹಾಯ ಮಾಡಲಿಲ್ಲವೆಂದು ಗೊಣಗಾಡಲಿಲ್ಲ. ನನ್ನ ಮದುವೆಯಾಗುವವರೆಗೂ, ಸರಿ. ಎಲ್ಲ ಜವಾಬ್ದಾರಿಯನ್ನು ಮನೆಯಲ್ಲಿ ಹೊರುತ್ತಿದ್ದವಳು ನಾಗಕ್ಕನೇ. ಮಂಗಳವಾಡವಿರಲಿ, ಕಲ್ಯಾಣವಿರಲಿ ಹೊರಗೆ ನನ್ನ ಕೆಲಸ. ಉಸಾಬರಿ ಹೆಚ್ಚು. ಮನೆಯಲ್ಲಿ ಏನಿದೆಯೋ ಇಲ್ಲವೋ ವಿಚಾರಿಸಿದವನಲ್ಲ. ಇದ್ದಕ್ಕಿದ್ದಂತೆ ಸ್ನೇಹಿತರನ್ನು ಮನೆಗೆ ಕರೆತರುತ್ತಿದ್ದೆ, ಅವರನ್ನು ಊಟಕ್ಕೆಬ್ಬಿಸುತ್ತಿದ್ದೆ. ನಾಗಕ್ಕ ಅಂಥ ಸಮಯದಲ್ಲೆಲ್ಲ, "ಒಂದು ಮಾತು ಮುಂಚೆ ಹೇಳಬಾರದಿತ್ತೇ" ಎಂದುಕೊಳ್ಳುವಳು, ನನಗೆ ಕೇಳಿಸುವಂತೆ ಅಷ್ಟೆ. ನೇರವಾಗಿ ಪ್ರಶ್ನೆ ಮಾಡಿದವಳಲ್ಲ. ನಾನೇ "ಮೊದಲೇ ಹೇಗೆ ತಿಳಿಯಬೇಕಕ್ಕ?" ಎನ್ನುತ್ತಿದ್ದೆ. "ಹೌದಲ್ಲವೇ, ನನ್ನ ಬುದ್ಧಿಗೆ...." ಎಂದುಕೊಂಡು "ಎರಡು ಕ್ಷಣ" ಎಂದು ಮಾಡಬೇಕಾದ್ದನ್ನು ತಯಾರಿಸಿಬಿಡುವಳು. ಬಂದವರಿಗೂ ಉಪಚಾರ ಮಾಡುವಳು. ಅನ್ನಪೂರ್ಣೇಶ್ವರಿಯ ಕಲ್ಪನೆಯ ತಾಯಿ ಇದ್ದಾಳಲ್ಲ, ಅವಳೇ ನಾಗಕ್ಕ. ತುಂಬುಗೈ, ಕೊಡುಗೈ.

ಮದುವೆಯಾಗುವವರೆಗೂ ಸರಿ. ಮದುವೆಯಾದ ಮೇಲೂ ಅವಳು

ನಮ್ಮ ಮನೆಯಲ್ಲಿಯೇ ಇದ್ದಾಳಲ್ಲ. ನೇರವಾಗಿ ನನ್ನ ಬೇಕು–ಬೇಡಗಳನ್ನೇನೂ ಗಮನಿಸಿಬೇಕಾಗಲಿಲ್ಲ ಆಮೇಲೆ. ಆದರೆ ನನ್ನ ಸ್ವಭಾವ ಎಂತಹುದು, ನನ್ನ ಇಷ್ಟ–ಅನಿಷ್ಟಗಳೇನು ಎಲ್ಲವನ್ನೂ ಗಂಗೆ–ನೀಲರಿಗೆ ತಿಳಿಸಿ ನನ್ನ ಬಾಹ್ಯ ಬದುಕನ್ನು ಹಗುರವಾಗಿ ಮಾಡಿದ್ದಾಳೆ, ಮಾಡುತ್ತಿದ್ದಾಳೆ. ನೊಂದ ಜೀವಿಗಳೆಲ್ಲ ಹೆಚ್ಚಾಗಿ ಇಂತಹವರೇ ಎಂದು ಕಾಣುತ್ತದೆ, ಅದರಲ್ಲೂ ಹೆಂಗಸರು. ಯಾವುದೋ ಒಂದು ಹೆಜ್ಜೆ ಇಡುತ್ತಾರೆ, ಅದು ತಪ್ಪಾಗಿಬಿಡುತ್ತದೆ, ಅವರ ಊಹೆ ಮೀರಿ; ಮುಂದೆ ಎಂದೆಂದೂ ಕಾಲಿನ ಮುಳ್ಳಾಗುತ್ತದೆ. ಇಡುವ ಹೆಜ್ಜೆ ಎಂದೂ ಖಚಿತವಾಗುವುದೇ ಇಲ್ಲ. ಹಾಗಾಗಿ ನಡೆಯುವುದನ್ನೇ ಬಿಡುತ್ತಾರೆ. ಅವರ ಬಾಳು ಸ್ಥಗಿತಗೊಳ್ಳುತ್ತದೆ. ಅವರ ಆಸೆ–ಆಕಾಂಕ್ಷೆಗಳು ಕಮರಿಹೋಗುತ್ತವೆ. ಇತರರ ನಡಿಗೆಯನ್ನು ಕಂಡು ಲಾಸ್ಯವನ್ನು ಕಂಡು ಆನಂದಿಸುತ್ತಾರೆ; ಸುತ್ತಲ ವ್ಯಕ್ತಿಗಳ ಸಂತೋಷದಲ್ಲಿ ತಮ್ಮ ಬದುಕಿನ ಕೊರೆ ತುಂಬಿದಂತೆ ಎಂದುಕೊಳ್ಳುತ್ತಾರೆ.

ನನ್ನ ಬಾಳಿನ ಪ್ರತಿ ಹೆಜ್ಜೆಯ ಹಿಂದೆ ಅವಳ ಪ್ರೇರಣೆಯಿದೆ ಎನ್ನಿಸುತ್ತದೆ. ನೇರವಾಗಿ ಏನೂ ಸೂಚಿಸುವವಳಲ್ಲ ನಾಗಕ್ಕ. ನಾನು ನಡೆದುಕೊಳ್ಳುವ ರೀತಿಯೇ ಅವಳು ನನ್ನನ್ನು ಬೆಳೆಸಿದ ರೀತಿಯಿಂದಾಗಿ ರೂಪುಗೊಂಡಿದೆ. ಅಜ್ಜಿ ಕೆಲವು ವರ್ಷ ನೋಡಿಕೊಂಡಿದ್ದಳು, ನಿಜ. ಆದರೆ ಅವಳು ಹೋದ ಮೇಲೆ? ನನ್ನ ನೆನಪು ಉಳಿದಿರುವುದು ನಾಗಕ್ಕ ನನ್ನ ಸಾಕಿದಂತೆ ಮಾತ್ರ. ಅಜ್ಜಿಯ ನೆನಪೂ ಮಸುಕು ಮಸುಕು.

ಬಾಗೇವಾಡಿ ಅಗ್ರಹಾರವೆಂದರೆ ಆ ಕಾಲಕ್ಕೆ ಹೆಸರುವಾಸಿಯಾದದ್ದು. ಎಂಬತ್ತರಿಂದ ನೂರು ಬ್ರಾಹ್ಮಣರ ಮನೆಗಳು. ಅದರಲ್ಲಿ ನಮ್ಮದೂ ಒಂದು, ಮಾದಿರಾಜರದು. ಕಮ್ಮೆ ಕುಲ ನಮ್ಮದು. ಮೊದಲಿನಿಂದ ಯಜ್ಞ–ಯಾಗಾದಿಗಳನ್ನು ನಡೆಸುವುದರಲ್ಲಿ ನಮ್ಮ ವಂಶಜರು ಕೀರ್ತಿವಂತರು. ನಮ್ಮ ತಂದೆ ವಿಶೇಷವಾಗಿ ಋಗ್ವೇದ ಪಂಡಿತರು. ನಾನು ಚಿಕ್ಕವನಾಗಿದ್ದಾಗ ಎದುರು ಸಾಲಿನ ವಿಶ್ವೇಶ್ವರ ಸೋಮಯಾಜಿಗಳ ಮನೆಗೆ ತುಂಬ ಹೋಗುತ್ತಿದ್ದೆ. ಅಲ್ಲಿ ನನ್ನ ಓರಗೆಯ ಹುಡುಗರಿದ್ದ ಕಾರಣದಿಂದ ಎಂದು ಕಾಣುತ್ತದೆ. ಆಗ ಅವರು ನನ್ನನ್ನು ಮಾತನಾಡಿಸುತ್ತಿದ್ದರು, ನಾಗಕ್ಕನೂ ಕೆಲವು ವೇಳೆ ಜೊತೆಗಿರುತ್ತಿದ್ದಳು. ವಿಶ್ವೇಶ್ವರ ಮಾಮನೆಂದೇ ನಾವು ಅವರನ್ನು ಕರೆಯುತ್ತಿದ್ದದ್ದು. ಒಮ್ಮೆ ನಾನೊಬ್ಬನೇ ಸಿಕ್ಕಿದಾಗ ಕೂರಿಸಿಕೊಂಡು ಮಾಮ ಹೇಳುತ್ತಿದ್ದರು "ಬಸವ, ನಿಮ್ಮ ತಂದೆ ಎಂದರೆ ಏನು ಅಂದುಕೊಂಡಿದ್ದೀಯೆ, ಸಾಕ್ಷಾತ್ ವಸಿಷ್ಠ ಮುನಿಗಳ ಹಾಗೆ. ತುಂಬ ಸಾತ್ವಿಕರು, ಹಾಗೆಯೇ ಪ್ರಕಾಂಡ ವಿದ್ವಾಂಸರು. ನೀನೂ ಹಾಗೇ ದೊಡ್ಡ ಪಂಡಿತನಾಗಬೇಕು" ಎನ್ನುವರು. ನನಗೆ ಅಂಥ ಸನ್ನಿವೇಶದಲ್ಲೆಲ್ಲ ಕಣ್ಣೆದುರಿಗಿಲ್ಲದ ಅಪ್ಪನ ಬಗ್ಗೆ ಹೆಮ್ಮೆ ಎನ್ನಿಸುವುದು, ಅವರು ಬದುಕಿಲ್ಲವಲ್ಲ ಎಂದು ಖಿನ್ನತೆಯುಂಟಾಗುವುದು.

ನಮ್ಮ ತಾಯಿ ಮಾದಾಂಬೆಯ ನೆನಪು ನನಗೆ ಉಳಿದಿಲ್ಲ. ನಾಗಕ್ಕನಿಗೆ ಸ್ವಲ್ಪ ನೆನಪಿದೆಯಂತೆ. ಅಷ್ಟು ಎತ್ತರವಲ್ಲದ ತೀರ ಕುಳ್ಳೂ ಅಲ್ಲದ ಹೆಂಗಸು.

ಹಣೆಯ ಮಧ್ಯದಲ್ಲಿ ಇಷ್ಟಗಲ ಕುಂಕುಮ; ಮಧ್ಯಕ್ಕೇ ಬೈತಲೆ ತೆಗೆದು ಬಾಚಿ ಹಾಕಿಕೊಂಡ ಜಡೆ. ಆದರೆ ತಂದೆಯ ನೆನಪು ಅವಳಿಗೆ ಸ್ಪಷ್ಟವಾಗಿ ಉಳಿದಿದೆ. ಮೊದಲು ತಾಯಿ, ಕೆಲವು ವರ್ಷದ ಬಳಿಕ ತಂದೆ ಕಾಲವಾಗಿದ್ದರು. ಆಗಿನಿಂದ, ಅಂದರೆ ತಂದೆತಾಯಿಗಳು ಬೇಗ ಸತ್ತರೆಂದು ಕೇಳಿದ ಕಾಲದಿಂದ, ಸಾವು ಎಂದರೆ ಏನು ಎಂಬ ಕುತೂಹಲ. ಸಿಕ್ಕಿದರೆ ನಮ್ಮಪ್ಪ-ಅಮ್ಮರನ್ನು ಅಷ್ಟು ಬೇಗ ಏಕೆ ಕರೆದೊಯ್ದೆ ಎಂದು ಕೇಳಬೇಕೆಂಬ ಹಂಬಲ ತುಂಬ ದಿನ ಇತ್ತು. ಸಾವೆಂದರೆ ಏನೆಂದು ಕೊಂಚ ಕೊಂಚ ಅರ್ಥವಾದ ಬಳಿಕ ಆ ಹಂಬಲ ಹೋಯಿತು. ಆದರೆ ಈಗಲಾದರೂ ಸಾವು ಏನೆಂದು ತಿಳಿದಿದೆಯೇ! ವಿಚಿತ್ರ; ತಿಳಿಯುವುದು ಸಾಧ್ಯವೇ ಇಲ್ಲ ಎಂಬ ಪರಿಸ್ಥಿತಿ. ಸಾವು ಬರುವವರೆಗೆ ಅದು ಏನು ಎಂದು ತಿಳಿಯುವುದಿಲ್ಲ; ಅದು ಬಂತೆಂದರೆ ತಿಳಿಯುವುದು ಸಾಧ್ಯವಿಲ್ಲ. ಮತ್ತೇನು ತಿಳಿಯುವುದು ಮಣ್ಣು!

ಅಪ್ಪ-ಅಮ್ಮ ಹೋದಮೇಲೆ ಅಜ್ಜಿ ನಮ್ಮನ್ನು ಬೆಳಸಿದರು. ಅಜ್ಜಿ ಎಂದರೆ ತಂದೆಯ ತಾಯಿ; ಅವರ ಹೆಸರು ಲಕ್ಷ್ಮಮ್ಮ. ಅಜ್ಜಿ ಎಂದರೆ ಮೊಮ್ಮಕ್ಕಳಿಗೆ ಎಲ್ಲಿಲ್ಲದ ಸಲಿಗೆಯಲ್ಲವೇ? ಅದೂ ವಂಶೋದ್ಧಾರಕನಾದ ನಾನು ಎಂದರೆ ಅಜ್ಜಿಗೆ ತುಂಬ ಅಕ್ಕರೆ. ನಾಗಕ್ಕ ಎಷ್ಟಾದರೂ ಹೆಣ್ಣು; ಬೇರೆಯ ಮನೆಗೆ ಹೋಗುವವಳು. ಹೀಗಾಗಿ ಅವಳು ಶಾಶ್ವತಳಲ್ಲ ಈ ಮನೆಯಲ್ಲಿ ಎಂದೋ ಏನೋ ಅನೇಕ ವೇಳೆ ಅವಳ ಮೇಲೆ ಕೋಪಕೊಂಡರೂ, ನನ್ನ ಬಗ್ಗೆ ಎಂದೂ ಅಜ್ಜಿ ಬಾಯಿಮಾಡಿದವರಲ್ಲ. ಆದರೆ ತೀರ ಮಸುಕಾಗಿ, ಯಾವುದೋ ಜನ್ಮದ ನೆನಪೋ, ಅಥವಾ ಕನಸೋ, ಇಲ್ಲ ಕಲ್ಪನೆಯೋ ಎಂಬಂತೆ ಆ ನೆನಪು. ಮುಖ ನೆನಪಿಗೆ ಬಾರದು; ಧ್ವನಿ ಕೇಳಿದಂತೆ ಅಷ್ಟೆ. ಆದರೆ ಏನೂ ಖಚಿತವಾಗಿ ಹೇಳಲಾರೆ.

ಇದ್ದಕ್ಕಿದ್ದಂತೆ ಒಂದು ದಿನ ಅಜ್ಜಿಯನ್ನು ಮನೆಯ ಹೊರಗೆ ಮಲಗಿಸಿದಾಗ ನನಗೆ ದಿಗಿಲಾಗಿತ್ತು. ನನಗಾಗ ಆರೋ ಏಳೋ ವರ್ಷವಿರಬೇಕು. ಬ್ರಾಹ್ಮಣರ ಮನೆಯ ಗಂಡಸರು ಹೆಂಗಸರು ಎಲ್ಲ ಬಂದಿದ್ದರು. ನನಗಿನ್ನೂ ಉಪನಯನವಾಗಿರಲಿಲ್ಲ. ಎಂಟು ವರ್ಷಕ್ಕಲ್ಲವೇ ಸಾಮಾನ್ಯವಾಗಿ ಮುಂಜಿ ಮಾಡುವುದು? ಅಜ್ಜಿ ಸತ್ತಳು ಎಂದು ಅಕ್ಕ ಆಮೇಲೆ ಹೇಳಿದ್ದಳು. ಮತ್ತೆ ಸಾವು ನನ್ನ ಎದುರು ಧುತ್ ಎಂದು ನಿಂತಿತ್ತು. ನಿಮ್ಮ ತಂದೆ-ತಾಯಿ ಇದ್ದರು, ಸತ್ತು ಹೋಗಿದ್ದಾರೆ ಎಂಬುದನ್ನು ಕೇಳಿದ್ದೆ. ಆದರೆ ಕಣ್ಣೆದುರಿಗೆ ಇದ್ದ ಅಜ್ಜಿ ಸತ್ತಿದ್ದಾರೆ, ಇನ್ನು ಮುಂದೆ ಇರುವುದಿಲ್ಲ ಎಂಬುದು ಹೊಸ ಸನ್ನಿವೇಶವಾಗಿತ್ತು. ಇರುವುದು-ಇಲ್ಲದಿರುವುದು ಎರಡಕ್ಕೂ ವ್ಯತ್ಯಾಸವೇನೋ ತಿಳಿಯದಾಗಿತ್ತು. ಅಜ್ಜಿಯನ್ನು ಯಾರು ಯಾರೋ ಸೇರಿಕೊಂಡು ಸಂಸ್ಕಾರಮಾಡಿದರು. ಹೇಳಿ ಕೇಳಿ ಅಗ್ರಹಾರವಲ್ಲವೇ ಅದು. ಗಂಡುಮಕ್ಕಳಿಲ್ಲದಿದ್ದರೆ, ಇರುವ ಮೊಮ್ಮಗನಿಗೂ ಮುಂಜಿಯಾಗದಿದ್ದರೆ ಯಾರು ಸಂಸ್ಕಾರ ಮಾಡಬೇಕು ಎಂಬ ವಿಚಾರ ಅವರಿಗೆ ತಿಳಿಯದೇ? ಅಥವಾ ತಮಗೆ ತಿಳಿಯದಂತಹ ಒಂದು ಸನ್ನಿವೇಶ ಒದಗಿ ಬಂತು ಎನ್ನೋಣ, ತೊಂದರೆಯೇನು? ಇರುವವರೆಲ್ಲ ಶಾಸ್ತ್ರವೇತ್ತರೇ. ಈಗಾಗಲೇ ನಿಯಮವಿದ್ದರೆ ಅದರಂತೆ ನಡೆದುಕೊಳ್ಳುವುದು;

ಇಲ್ಲದಿದ್ದರೆ ಸನ್ನಿವೇಶಕ್ಕೆ ತಕ್ಕಂತೆ ಹೊಸ ನಿಯಮವನ್ನು ರೂಪಿಸುವುದು. ನಾನಾಗ ತೀರ ಚಿಕ್ಕವನಾದ್ದರಿಂದ ಏನು ಮಾಡಿದರೋ ತಿಳಿಯದು.

ಆದರೆ ಮುಂದೆ ಮನೆಯ ಯಜಮಾನಿಕೆಯೆಲ್ಲ ನಾಗಕ್ಕನ ಮೇಲೆ ಬಂದು ಬಿತ್ತು. ವಿಶ್ವೇಶ್ವರ ಮಾವ ನಮ್ಮ ಮನೆಯಲ್ಲಿ ಅಡುಗೆ ಪಡುಗೆ ಮಾಡಲೆಂದು ಒಬ್ಬ ಅನಾಥ ಬ್ರಾಹ್ಮಣ ಹೆಂಗಸನ್ನು ತಂದಿರಿಸಿದ್ದರು; ಅವಳೂ ವಿಧವೆ. ನಮ್ಮ ತಂದೆಯ ಆಸ್ತಿ, ಅದರ ಆಯ–ವ್ಯಯ ಎಲ್ಲವನ್ನೂ ವಿಶ್ವೇಶ್ವರ ಸೋಮಯಾಜಿಗಳೇ ನೋಡಿಕೊಳ್ಳುತ್ತಿದ್ದರು. ಅವರಿಗೆ ಮಧ್ಯವಯಸ್ಸು –ನಮ್ಮ ತಂದೆಯವರ ಆಪ್ತ ಗೆಳೆಯರಂತೆ; ಈ ಊರಿಗೆ ಬರುವ ಮುಂಚೆ ಎಲ್ಲೋ ಇದ್ದರಂತೆ. ಬಾಗೇವಾಡಿ ಅಗ್ರಹಾರದ ಹೆಸರು ಕೇಳಿ ಇಲ್ಲಿ ಬಂದು ನೆಲಸಿದರು. ನಮ್ಮ ತಂದೆಯ ಆಪ್ತರಾದರು. ನಮ್ಮ ತಂದೆ ತಾನೇ ಇಲ್ಲೇ ಹುಟ್ಟಿದವರಲ್ಲವಂತೆ. ಯಾವುದೋ ದಕ್ಷಿಣದ ಪ್ರದೇಶವಂತೆ, ಚಿಕ್ಕವಯಸ್ಸಿನಲ್ಲಿ ತಂದೆಯೊಡನೆ ಅವರು ಬಂದಿದ್ದರು. ಆದರೇನು, ನಿಮ್ಮ ಊರು ಯಾವುದೆಂದರೆ ಬಾಗೇವಾಡಿಯೆಂದೇ ನಾವು ಹೇಳುವುದು. ನಮ್ಮ ತಾತನ ಕಾಲಕ್ಕೇ ಅಲ್ಲಿ ಬಂದಿದ್ದರು; ನಾವು ಬೇರೆ ಊರು ಕಂಡವರೇ ಅಲ್ಲ. ಅದೇ ನಮ್ಮೂರಾಗದೇ ಮತ್ತಾವುದಾಗಲು ಸಾಧ್ಯ?

ನಮ್ಮ ಮನೆಯ ಆಗುಹೋಗುಗಳ ಬಗ್ಗೆ ವಿಶ್ವೇಶ್ವರ ಸೋಮಯಾಜಿಗಳು ಅಗ್ರಹಾರದ ಮಹಾಜನರಿಗೆ ಆಗಾಗ ವರದಿ ಒಪ್ಪಿಸುವರು. ಅನಾಥರಾದ ಚಿಕ್ಕಮಕ್ಕಳ ಉಸ್ತುವಾರಿಯನ್ನು ನೋಡಿಕೊಳ್ಳಬೇಕೆಂದು ಅವರಿಗೆ ಆದೇಶವಿತ್ತವರೂ ಮಹಾಜನರೇ. ಮಹಾಜನರೆಂದರೆ ಅಗ್ರಹಾರದ ಬ್ರಾಹ್ಮಣ ಹಿರಿಯರ ಸದಸ್ಸು. ಎಲ್ಲರೂ ತಿಂಗಳು ತಿಂಗಳೂ ಸಭೆ ಸೇರಿ ಊರ ವಿಷಯ ಚರ್ಚೆ ಮಾಡಿ ಆಗಬೇಕಾದುದರ ಬಗ್ಗೆ ತೀರ್ಮಾನ ಕೈಗೊಳ್ಳುತ್ತಿದ್ದರು. ನಮ್ಮ ಊರಿನ ಮಹಾಜನರೆಂದರೆ ಶ್ರೇಷ್ಠ ವಿದ್ವಾಂಸರ ಕೂಟ. ಅವರು ನಮ್ಮ ತಂದೆಯ ಮರಣಾನಂತರ ವಿಶೇಷ ಸಭೆ ನಡೆಸಿ ನಮ್ಮ ಮನೆಯ ಉಸ್ತುವಾರಿಯನ್ನು ವಿಶ್ವೇಶ್ವರ ಸೋಮಯಾಜಿಗಳಿಗೆ ವಹಿಸಿದ್ದರು; ಗೆಳೆಯನ ಋಣ ತೀರಿಸಲು ಅವರೂ ಸ್ವಯಂಪ್ರೇರಿತರಾಗಿ ಆ ಜವಾಬ್ದಾರಿಯನ್ನು ಹೊತ್ತಿದ್ದರು. ಅಂದಿನಿಂದ ಮನೆಗೆ ಬೇಕಾದ ಸಾಮಾನು ಸರಂಜಾಮು ಕಾಲಕ್ಕೆ ತಕ್ಕಂತೆ ಬಂದು ಬೀಳುತ್ತಿತ್ತು. ಮನೆಯಲ್ಲಿ ಅಡುಗೆ ಕೆಲಸ ನಿರ್ವಹಿಸುತ್ತಿದ್ದ ಹೆಂಗಸು, ಅವರ ಹೆಸರೇನೋ ತಿಳಿಯದು, ನಾಗಕ್ಕನಿಗೂ ಗೊತ್ತಿರಲಾರದು, 'ಅತ್ತೆ' ಎನ್ನುತ್ತಿದ್ದೆವು. ಅವರು ಎಲ್ಲ ಕೆಲಸ ಮಾಡುತ್ತಿದ್ದರು. ಅಕ್ಕ ಅವರಿಗೆ ಹೊರಗೆಲಸಕ್ಕೆ ನೆರವಾಗುತ್ತಿದ್ದಳು. ನಾನು ಎಂದಿನಂತೆಯೇ ಇದ್ದೆ.

ನಮ್ಮ ಬಾಗೇವಾಡಿ ಅಗ್ರಹಾರದಲ್ಲಿ ನಾನು ಹುಟ್ಟುವ ಮೊದಲು ಒಂದು ದೊಡ್ಡ ಯಜ್ಞ ನಡೆದಿತ್ತಂತೆ. ತುಂಬ ಹೆಸರುವಾಸಿಯಲ್ಲವೇ ನಮ್ಮೂರು? ನಮ್ಮೂರಿನ ಮಹಾಜನರು ಆದಿಬ್ರಹ್ಮ ಸಮಾನ ವೇದವಿದರಲ್ಲವೇ? ಅದಕ್ಕೇ ತನ್ನ ಪುಣ್ಯಕ್ಕಾಗಿ ಯಾವುದೋ ರಾಣಿ ಮೈಳಲದೇವಿಯವರಂತೆ, ಲಕ್ಷಹೋಮ ಮಾಡಿಸಿದರಂತೆ. ಚಂದ್ರಗ್ರಹಣದ ದಿನ ಈ ಹೋಮ ಮಾಡಿಸಿದರೆ ತುಂಬ

ಪುಣ್ಯ ಬರುವುದೆಂಬ ನಂಬಿಕೆ. ಆಕೆ ಯಜ್ಞಗೈಯಲು ಸಹಾಯ ಮಾಡಿದ ಚಂದ್ರಯ್ಯಭಟ್ಟ ಎಂಬುವ ಉಪಾಧ್ಯಾಯರಿಗೆ ಭೂಮಿಯನ್ನು ದಾನಮಾಡಿದಳಂತೆ. ಯಾರಿಗೋ ಸೇರಿದ ಆ ಭೂಮಿಯನ್ನು ತಾನು ಕೊಂಡುಕೊಂಡು ಉಪಾಧ್ಯಾಯರಿಗೆ ದಾನ ಮಾಡಿದ್ದು. ಆ ಚಂದ್ರಯ್ಯಭಟ್ಟರು ಬಾಗೇವಾಡಿಯವರೇ. ಮುಂದೆ ನಾನು ವಿದ್ಯೆ ಕಲಿಯುವಾಗ ನಮಗೆ ಉಪಾಧ್ಯಾಯರಾಗಿದ್ದ ವಾಸುದೇವಭಟ್ಟರು ಅವರ ಮರಿಮಕ್ಕಳಂತೆ – ಚಂದ್ರಯಭಟ್ಟರ ಮಗನ ಮಗನ ಮಗ! ಯಜ್ಞದ ವಿಷಯ ಚಂದ್ರಯ್ಯ ಭಟ್ಟರ ವಿಷಯ ನಮ್ಮೂರಲ್ಲಿದ್ದ ಒಂದು ಶಿಲಾಶಾಸನದಲ್ಲಿ ಕೆತ್ತಿದ್ದಾರಂತೆ. ನಮ್ಮ ಗರುಗಳೇ ಒಮ್ಮೆ ಈ ವಿಷಯ ವಿವರಿಸಿ, ನಮಗೆಲ್ಲ ಆ ಶಾಸನದಲ್ಲಿ ಬರೆದಿದ್ದುದನ್ನು ಓದಿ ಹೇಳಿದ್ದರು. ಶಾಸನದ ಅಕ್ಷರಗಳೆಲ್ಲ ಓದಲು ಬರುವಂತಿದ್ದರೂ ಓದಿದ ಮೇಲೆ ಅದರ ಅರ್ಥವೇನೆಂದು ಗೊತ್ತಾಗುತ್ತಿರಲಿಲ್ಲ. ಕನ್ನಡದ್ದೇ ಅದು, ಆದರೆ ಹಳಗನ್ನಡವೋ ಯಾತರದೋ, ವಿಷಯ ತಿಳಿಯುತ್ತಿರಲಿಲ್ಲ, ಹೀಗಾಗಿ ಗುರುಗಳು ಹೇಳಿದ್ದೇ ಅದರಲ್ಲಿರಬೇಕೆಂದು ನಾವೆಲ್ಲ ನಂಬಿದ್ದೆವು.

ನಾನು ವಾಸುದೇವಭಟ್ಟರ ಬಳಿಗೆ ವಿದ್ಯೆ ಕಲಿಯಲು ಪ್ರಾರಂಭಿಸಿದ್ದು ನನಗೆ ಮುಂಜಿಯಾದ ಮೇಲೆ. ಆವರೆಗೆ ಮನೆಯ ಮುಂದೆ ಹರಡಿದ್ದ ಮರಳಿನಲ್ಲಿ ನಾಗಕ್ಕ ಕನ್ನಡ ಅಕ್ಷರಗಳನ್ನು ತಿದ್ದುವಾಗ ನಾನು ಜೊತೆಗಿರುತ್ತಿದ್ದೆ. ಅವಳು ತಾನು ಬರೆಯುವುದರ ಜೊತೆಗೆ ನನಗೂ ಬರಹ ಕಲಿಸಿದಳು. ವಿಶ್ವೇಶ್ವರ ಸೋಮಯಾಜಿಗಳು ಅಕ್ಷರ ತಿದ್ದಿಹಾಕಿ ಹೋದರೆ, ಕೆಲಸ ಮುಗಿಸಿ ದಿನಪೂರ್ತಿ ಅದನ್ನು ತಿದ್ದುವುದೇ ಅಕ್ಕನ ಕೆಲಸ. ಹೀಗಾಗಿ ಅವಳೇ ನನ್ನ ಮೊದಲ ಗುರು ಕೂಡ. ಅಂದರೆ ಕನ್ನಡ ಕಲಿಸಿದವಳು. ನನ್ನ ರಕ್ತದಲ್ಲಿ ಸೇರಿಹೋಗಿರುವುದು ಅದೇ ಅಲ್ಲವೇ, ಕನ್ನಡ. ಎಷ್ಟು ಚೆನ್ನಾಗಿ ಕನ್ನಡದಲ್ಲಿ ಬರೆಯುತ್ತೀಯೆ, ಮಾತನಾಡುತ್ತೀಯೆ ಎಂದು ಅಕ್ಕ ನನ್ನನ್ನು ಈಗಲೂ ಹೊಗಳುತ್ತಾಳೆ. ಅವಳೇ ಕಲಿಸಿದ ಕನ್ನಡ, ಅದಕ್ಕೇ ಅದು ನನ್ನ ರಕ್ತಗತವಾಗಿದೆ, ಅಕ್ಕನ ಮೇಲಿರುವಷ್ಟೇ ಪ್ರೀತಿ ಅದರ ಮೇಲೂ ಇದೆ.

ನನಗೆ ಎಂಟು ವರ್ಷವಾದಾಗ ವಿಶ್ವೇಶ್ವರ ಸೋಮಯಾಜಿಗಳು ನನಗೆ ಬ್ರಹ್ಮೋಪದೇಶ ಮಾಡಿದ್ದರು. ತಂದೆಯು ಮಾಡಬೇಕಾದಂತೆ ನನ್ನನ್ನು ತೊಡೆಯ ಮೇಲೆ ಕೂಡಿಸಿಕೊಂಡು ನನ್ನ ಕಿವಿಯಲ್ಲಿ "ಓಂ ಭೂರ್ಭುವಸ್ವಃ ತತ್ಸವಿತೃವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್" ಎಂದು ಮೂರು ಬಾರಿ ಹೇಳಿದ್ದರು. ಅದನ್ನು ನಾನು ಪುನರುಚ್ಚರಿಸಿದ್ದೆ. ಆಮೇಲೆ ಪ್ರತಿನಿತ್ಯ ಮೂರು ಬಾರಿ ತಮ್ಮ ಜೊತೆಗೇ ಕುಳ್ಳಿರಿಸಿಕೊಂಡು ಸಂಧ್ಯಾವಂದನೆ ಮಾಡುವುದನ್ನು ಹೇಳಿ ಕಲಿಸಿದ್ದರು.

ಅಂದು ನನ್ನ ಕೈ ಹಿಡಿದು ನನ್ನ ಬೆರಳಿಂದ ಹರಿವಾಣದಲ್ಲಿ ಹರಡಿದ ಅಕ್ಕಿಕಾಳಿನಲ್ಲಿ ಅವರು ಓಂ ಎಂದು ದೇವನಾಗರಿಯಲ್ಲಿ ಬರೆಸಿದ ಕಾಲದಿಂದ ನನ್ನ ಸಂಸ್ಕೃತದ ಕಲಿಕೆಯೂ ಪ್ರಾರಂಭವಾಯಿತು. ಜೊತೆಗೆ ಕನ್ನಡ ವಿದ್ಯೆಯೂ

ಮುಂದುವರೆಯಿತು. ಅದೇ ವಾಸುದೇವಭಟ್ಟರ ಅಂಕೆಯಲ್ಲಿ, ಮಾರ್ಗದರ್ಶನದಲ್ಲಿ. ನಾವಿನ್ನೂ ಆಗ ಅಕ್ಷರಾಭ್ಯಾಸಿಗಳು ತಾನೇ. ಜೊತೆಗೆ ಕಂಠಪಾಠ. ಎಂಥೆಂಥದೋ ಮಂತ್ರಗಳನ್ನು ಗುರುಗಳು ಹೇಳುವುದು, ನಾವೂ ಉಚ್ಚರಿಸುವುದು. ಈಗಲೂ ಅಂದು ಕಲಿತ ಮಂತ್ರಗಳು ನೆನೆಪಲ್ಲಿ ಉಳಿದಿವೆ; ಆಮೇಲೆ ಕಲಿತದ್ದೆಷ್ಟೋ ಮರೆತು ಹೋಗಿದೆ.

ಪಿಣಿಪಿಣಿ ಎಂದು ಮಂತ್ರಗಳನ್ನು ಹೇಳುವುದಕ್ಕಿಂತ ಓದಿದರೆ ಒಂದಷ್ಟು ಅರ್ಥವಾಗುತ್ತಿದ್ದ ಕನ್ನಡವೇ ನನಗೆ ಪ್ರಿಯವಾಗಿತ್ತು. ತಂದೆ ಮಾದಿರಾಜರು ದೊಡ್ಡ ಸಂಸ್ಕೃತ ವಿದ್ವಾಂಸರು, ಋಗ್ವೇದ ಪಂಡಿತರಾಗಿದ್ದರೂ ಕನ್ನಡದಲ್ಲಿ ಆಶುಕವಿತೆಗಳನ್ನು ಮಾಡುತ್ತಿದ್ದರಂತೆ. ಒಂದೇ ಬಗೆಯಲ್ಲಿ ಕಿವಿಗೆ ಕೇಳಿಸುವ ರೀತಿಯ ಅಕ್ಷರಗಳು ಕೊನೆಗೆ ಬರುವಂತಹ ಪದಗಳನ್ನು ಜೋಡಿಸಿ ಏನಾದರೂ ಹೇಳಿದರೆ ವಿಶ್ವೇಶ್ವರ ಮಾಮ ಹೇಳುತ್ತಿದ್ದರು: "ನಿನ್ನ ಹಾಗೆ ನಿಮ್ಮ ಅಪ್ಪನೂ ಪ್ರಾಸಪ್ರಿಯನಾಗಿದ್ದ ಕಣಯ್ಯ. ಅವನ ಬೀಜ ತಾನೇ ನೀನು, ಅವನಂತೆಯೇ ಎಲ್ಲ, ನೋಡು. ನಿಮ್ಮಪ್ಪನಿಗೂ ಕನ್ನಡವೆಂದರೆ ಅವರ ತಾಯಿಯ ಮೇಲಿನಷ್ಟೇ ಪ್ರೀತಿ. ಸಂಸ್ಕೃತವೆಂದರೆ ತಂದೆಯ ಬಗೆಗಿರುವಂತೆ ಭಕ್ತಿ, ಭಯ. ತಾಯ ತೊಡೆಯ ಮೇಲೆ ಆಡಿದಂತೆ ಲೀಲಾಜಾಲವಾದ ಕನ್ನಡ ಅವನ ಬಾಯಲ್ಲಿ, ತಂದೆಯ ಮುಂದೆ ನಿಂತಾಗ ಶಿಸ್ತಿನಿಂದಿರುವ ಹಾಗೆ ಸಂಸ್ಕೃತ ವಿದ್ಯೆಯ ಬಗ್ಗೆ" ಎಂದು ಹೇಳುತ್ತಿದ್ದರು. ನನ್ನ ಹೆಸರೆಂದರೆ ಅಗ್ರಹಾರದ ಬ್ರಾಹ್ಮಣರಿಗೆ ತಮಾಷೆ. ಎಲ್ಲ ಗಂಡಸರಿಗೂ ಇಷ್ಟುದ್ದ ಸಂಸ್ಕೃತದ ಹೆಸರು, ನನಗೆ ಮಾತ್ರ ಬಸವರಾಜ ಎಂಬ ಹೆಸರು. ಕನ್ನಡದ್ದಂತೆ, ಸಂಸ್ಕೃತದಿಂದ ಬಂದದ್ದಂತೆ. ಎಲ್ಲಿಂದಾದರೂ ಬರಲಿ, ಕನ್ನಡದ್ದು ತಾನೇ ಎಂದು ನನಗೆ ಹೆಮ್ಮೆ. "ನೋಡು, ನಿಮ್ಮಪ್ಪ ಹುಡುಕಿ ಹುಡುಕಿ ಸೀಮೇಲಿಲ್ಲದ ಹೆಸರಿಟ್ಟಿದ್ದಾನೆ ನಿನಗೆ. ಬ್ರಾಹ್ಮಣನು ಇಟ್ಟುಕೊಳ್ಳುವ ಹೆಸರೇ ಅದು? ಬಸವನಂತೆ ಬಸವ, ಕೋಲೇಬಸವ" ಎಂದು ಹಾಸ್ಯಮಾಡುತ್ತಿದ್ದರು. ವಿಶ್ವೇಶ್ವರ ಮಾಮ ತಮಾಷೆ ಮಾಡುತ್ತಿದ್ದರೇ ವಿನಾ, ಎಂದೂ ನಮ್ಮನ್ನು ಅನ್ಯಾಯವಾಗಿ ನಡೆಸಿಕೊಳ್ಳಲಿಲ್ಲ. ಈಗಲೂ ಬಾಗೇವಾಡಿ ಎಂದರೆ ನನ್ನ ಮನಸ್ಸಿನಲ್ಲಿ ಬೆಂಕಿಯೇಳುತ್ತದೆ, ಆದರೆ ಆ ಜ್ವಾಲೆಯ ನಡುವೆಯೂ ಶೀತಲವಾದದ್ದೆಂದರೆ ವಿಶ್ವೇಶ್ವರ ಮಾಮ ಅವರ ನೆನಪು.

ಅಂತೂ ಅವರ ಅಕ್ಕರೆಯಲ್ಲಿ ನಾವು ಬೆಳೆದೆವು. ಅಕ್ಕ ತಾನೇ ಮನೆಗೆಲಸ ನಿರ್ವಹಿಸುವವರೆಗೂ ಮನೆಯಲ್ಲಿದ್ದ ಅತ್ತೆ ಆಮೇಲೆ ಯಾವುದೋ ಊರಿಗೆ ಹೊರಟು ಹೋದರು. ಅಕ್ಕನೇ ಮನೆಯನ್ನು ನಿಭಾಯಿಸಬಲ್ಲಳು ಎಂಬ ಕಾರಣದಿಂದ ವಿಶ್ವೇಶ್ವರ ಮಾಮ ಅವರನ್ನು ಊರಿಗೆ ಕಳಿಸುವ ಏರ್ಪಾಟು ಮಾಡಿದರೋ, ಅಥವಾ ಅವರು ಹೋದರು ಎಂದು ಅನಿವಾರ್ಯವಾಗಿ ಮನೆಗೆಲಸದ ಹೊಣೆಯನ್ನು ನಾಗಕ್ಕ ಹೊತ್ತಳೋ ನನಗೆ ನೆನಪಿಲ್ಲ. ಅಂತೂ ಮನೆಯಲ್ಲಿ ನಾವಿಬ್ಬರೇ. ಅಡಿಗೆ ಇತ್ಯಾದಿಗಳನ್ನು ಅಕ್ಕ ಮಾಡಿದರೆ ಮನೆಯ ಕಸ ಗುಡಿಸುವ, ಕೊಟ್ಟಿಗೆಯ ದನಗಳನ್ನು ನೋಡಿಕೊಳ್ಳುವ ಸಲುವಾಗಿ ಆಳು

ಇದ್ದ; ಶೂದ್ರ. ಮನೆಯ ಜಗಲಿಯವರೆಗೆ ಅವನಿಗೆ ಪ್ರವೇಶ, ಒಳಗೆ ಅಲ್ಲ. ಇದೆಲ್ಲ ನಮಗೆ ಒಗ್ಗಿ ಹೋಗಿದ್ದ ಸಂಪ್ರದಾಯವೇ. ಹಾಗಾಗಿ ನಮ್ಮ ಜೀವನ ಯಥಾವತ್ತಾಗಿಯೇ ನಡೆಯಿತು.

ನಾನು ಬೆಳಿಗ್ಗೆಯೇ ಉಪಾಧ್ಯಾಯರ ಮನೆಗೆ ಹೋಗುತ್ತಿದ್ದೆ. ಅಲ್ಲಿ ವೇದದ ಉಚ್ಚಾರವನ್ನು ಹೇಳಿಕೊಡುತ್ತಿದ್ದರು. ಹೇಳಿದ್ದನ್ನೇ ತಿರುಗ ಮುರುಗ ಹೇಳುವುದು, ತಪ್ಪಿಲ್ಲದೆ ಉಚ್ಚಾರಮಾಡುವುದು. ವೇದ ಎಂದರೆ ಬ್ರಹ್ಮ ಹೇಳಿದ್ದಂತೆ. ಅದನ್ನು ತಪ್ಪಾಗಿ ಉಚ್ಚರಿಸಿದರೆ ಪಾಪ ಬರುತ್ತದಂತೆ. ಅದಕ್ಕೇ ಕಿಂಚಿತ್ತಾದರೂ ತಪ್ಪು ಬಾರದಂತೆ ಉಚ್ಚಾರಮಾಡುವುದಕ್ಕೇ ಗುರುಗಳು ಪ್ರಾಶಸ್ತ್ಯವಿತ್ತಿದ್ದರು. ಅಲ್ಲದೆ ಅನೇಕ ವೇಳೆ ಪುರಾಣದ ಭಾಗಗಳನ್ನು ಓದಿ ಅರ್ಥ ಹೇಳುತ್ತಿದ್ದರು. ಮೋಕ್ಷ, ದೇವರು ಎಂದು ಪದೇ ಪದೇ ಹೇಳುತ್ತ, ಸಂಸ್ಕೃತದ ಮಾತುಗಳನ್ನು ಉಲ್ಲೇಖಿಸುತ್ತ ವಿಷಯಗಳನ್ನು ವಿವರಿಸುತ್ತಿದ್ದರು. ಕಾವ್ಯವನ್ನು ಓದಿ ಹೇಳುವಾಗ ಹುಡುಗರಿಗೆ ಸಂತೋಷವಾಗುತ್ತಿತ್ತು. ಬರಬರುತ್ತ, ದೊಡ್ಡವರಾದಂತೆ ವ್ಯಾಕರಣ, ಜ್ಯೋತಿಷ ಎಂದು ಏನೇನೋ ಶಾಸ್ತ್ರಗಳ ಪಾಠ ಬೇರೆ. ಕನ್ನಡದ ಕಾವ್ಯಗಳನ್ನು ಓದಿ ಹೇಳುತ್ತಿದ್ದರು. ಕನ್ನಡದ ಪದ್ಯ ಬರೆಯುವುದು ಹೇಗೆ, ಪ್ರಾಸ ಎಂದರೆ ಏನು, ಗಣ ಎಂದರೆ ಎಂಥದು, ವೃತ್ತಗಳೆಂದರೆ ಹೇಗಿರುತ್ತದೆ ಎಂದೆಲ್ಲ ವಿವರಿಸುತ್ತಿದ್ದರು.

ನನಗೆ ವಿದ್ಯೆಯೆಂದರೆ ಬೇಸರವೇನೂ ಇರಲಿಲ್ಲ. ಏನಾದರೂ ಹೊಸತನ್ನು ಕುರಿತು ಯೋಚಿಸುವುದು, ಮಾಡುವುದು ಎಂದರೆ ನನಗೆ ಆಸಕ್ತಿ, ಹೇಳಿದ್ದನ್ನೇ ಹೇಳೋದರಲ್ಲಲ್ಲ. ಹೀಗಾಗಿ ಬರೀ ಉಚ್ಚಾರ, ಪುನರುಚ್ಚಾರ ಬೇಸರ ತರಿಸುತ್ತಿದ್ದವು. ಅದೇ ಕತೆ, ವಿಷಯ ಎಂದರೆ ಕುತೂಹಲ. ಎಷ್ಟೋ ವೇಳೆ ನಾನು ಪ್ರಶ್ನೆಗಳನ್ನೂ ಕೇಳುತ್ತಿದ್ದೆ. ಹಾಗಂದರೇನು, ಹೀಗಂದರೇನು, ಸಾವೆಂದರೇನು, ಪುಣ್ಯ ಎಂದರೇನು, ಚಾತುರ್ವರ್ಣ ಎಂದರೇನು, ಕರ್ಮ ಎಂದರೇನು? ಹಲವು ವೇಳೆ ವಾಸುದೇವ ಗುರುಗಳು ನಿಧಾನವಾಗಿ ಏನಾದರೂ ಉತ್ತರ ಹೇಳುವರು, ಕೆಲವೇಳೆ "ತೀರ ಆತುರ ಬೇಡವಯ್ಯ, ಕೆಲವು ವಿಷಯಗಳು ತಾನಾಗಿ ತಿಳಿಯುತ್ತವೆ. ತಡೆದುಕೋ ನಿನ್ನ ಕುತೂಹಲವನ್ನು" ಎಂದು ಉತ್ತರ ಹೇಳದೆ ತಪ್ಪಿಸುತ್ತಿದ್ದರು.

ಅವರು ಒಮ್ಮೆ ಹೇಳಿದ ಸತ್ಯಕಾಮನ ಕತೆ ನನಗೆ ತುಂಬ ಹಿಡಿಸಿತು. ನನಗೆ ಎಂದೇನು ಎಲ್ಲ ಮಕ್ಕಳನ್ನೂ ಮುಗ್ಧಗೊಳಿಸುವ ಕತೆ ಅದು. ಯಾವುದೋ ಉಪನಿಷತ್ತಿನಲ್ಲಿ ಬರುವುದಂತೆ. ಜಬಾಲಾ ಎಂಬೊಬ್ಬಳು ಪತಿತೆಯಂತೆ, ಹಾಗಂದರೇನೆಂದು ತಿಳಿಯಬೇಕು ನಮ್ಮಂಥ ಮಕ್ಕಳಿಗೆ? ಸುಮ್ಮನೆ ಹೂಂಗುಟ್ಟುವುದಷ್ಟೇ. ಅವನಿಗೊಬ್ಬ ಮಗ, ಪುಟ್ಟ ಹುಡುಗ. ಅವನಿಗೆ ತಾಯಿಯೇ ಎಲ್ಲ. ಹಲವಾರು ಹುಡುಗರು ವಿದ್ಯೆ ಕಲಿಯುತ್ತೇವೆಂದು ಗುರುಗಳ ಬಳಿಗೆ ಹೋಗಿ ಏನೇನೋ ಕಲಿಯುತ್ತಿದ್ದರು. ತಾನೂ ವಿದ್ಯೆ ಕಲಿಯಬೇಕೆಂಬ ಹಂಬಲ ಆ ಹುಡುಗನಿಗೆ. ತಾಯಿಯನ್ನು ಕೇಳಿದ; ಬೇಡಿದ; ತಾನೂ ವಿದ್ಯೆ ಕಲಿಯುವುದಾಗಿ ಹಟಹಿಡಿದ.

ತಾಯಿ ಹೇಳಿದಳು: "ಮಗನೇ ನೀನು ಗುರುಗಳ ಬಳಿ ಬೇಡಿಕೋ. ನನಗೂ ವಿದ್ಯೆ ಕಲಿಸಿ ಎಂದು ಕೇಳಿಕೋ" ಎಂದಳು. ಮಗ ಹಾಗೇ ಮಾಡಿದ; ಗುರುಗಳ ಬಳಿ ಬಂದು ತನಗೆ ವಿದ್ಯೆ ಕಲಿಸಿ ಎಂದ ಅಂಗಲಾಚಿ ಬೇಡಿದ. ಸಂಸ್ಕಾರವಂತನಿಗೆ ಮಾತ್ರ ವಿದ್ಯೆ ಕಲಿಸುವವರು ತಾವು ಎಂದು ಹೇಳಿದ ಗುರುಗಳು "ನಿಮ್ಮ ತಂದೆ ಯಾರೆಂದು ಕೇಳಿದರು. ಹುಡುಗನಿಗೆ ಗೊತ್ತಿರಲಿಲ್ಲ. ನಿಮ್ಮ ತಾಯಿಯನ್ನು ಕೇಳಿಕೊಂಡು ನಾಳೆ ಬಾ" ಎಂದು ಹೇಳಿಕಳಿಸಿದರು. ಮಗ ಜೋಲು ಮೋರೆ ಹಾಕಿಕೊಂಡು ಮನೆಗೆ ಬಂದ. ತಾಯಿ ಏನಾಯಿತೆಂದು ವಿಚಾರಿಸಿದಳು. ನಡೆದ ವಿಷಯವನ್ನೆಲ್ಲ ಹೇಳಿದ. "ನನ್ನ ತಂದೆ ಯಾರಮ್ಮ?" ಎಂದು ಕೇಳಿದ. ತಾಯಿ ಜಬಾಲಾ ಗೊಳೋ ಎಂದು ಅಳಲುತೊಡಗಿದಳು. ಮಗನಿಗೆ ಕಸಿವಿಸಿಯಾಯಿತು. ತನ್ನ ತಂದೆ ಯಾರೆಂದು ಕೇಳಿದ್ದು ಅಪರಾಧವಾಯಿತೇ ಎಂಬ ಗೊಂದಲವಾಯಿತು ಅವನಿಗೆ. ತಾಯ ಮುಖವನ್ನು ತಿರುಗಿಸಿಕೊಂಡು ತಾನೂ ಅಳಲು ಪ್ರಾರಂಭಿಸಿದ. ತಾಯಿ ಕೊಂಚ ಕಾಲದ ಬಳಿಕ ಸಮಾಧಾನ ತಂದುಕೊಂಡಳು. ಮಗನಿಗೆ ಹೇಳಿದಳು : "ಮಗು, ನಾನು ಯಾರಾರ ಜೊತೆಯಲ್ಲಿಯೋ ಇದ್ದವಳು. ನಿಮ್ಮ ತಂದೆ ಇಂಥವನೇ ಎಂದು ಹೇಗೆ ಹೇಳಲಿ?" ಮಗ ತಾಯಿ ಹೇಳಿದ್ದನ್ನು ಕೇಳಿಸಿಕೊಂಡ. ಆಗ ಸುಮ್ಮನಾದ. ಮಾರನೆಯ ದಿನ ಮತ್ತೆ ಗುರುಗಳ ಬಳಿಗೆ ಓಡಿದ. ಸಾಷ್ಟಾಂಗ ನಮಸ್ಕಾರ ಮಾಡಿ ಗುರುಗಳೆದುರು ಕೈಜೋಡಿಸಿ ನಿಂತ. "ಯಾರಪ್ಪಾ ನಿಮ್ಮ ತಂದೆ, ತಾಯಿಯನ್ನು ಕೇಳಿದೆಯ?" ಎಂದರು. ಆ ಹುಡುಗನ ಬಗ್ಗೆ ಗುರುಗಳಿಗೆ ಮಮತೆಯುಂಟಾಗುತ್ತಿತ್ತು, ಏಕೋ. ಮಗ ತಾಯಿ ಹೇಳಿದ್ದನ್ನೇ ಚಾಚೂ ತಪ್ಪದೇ ಹೇಳಿದ. ತಮ್ಮ ತಂದೆ ಯಾರೆಂಬುದು ತನಗೆ ತಿಳಿಯದು ಎಂದ. ಗುರುಗಳಿಗೆ ಆಶ್ಚರ್ಯ. ಸತ್ಯವನ್ನು ಮುಚ್ಚುಮರೆಯಿಲ್ಲದೆ ಹೀಗೆ ಹೇಳುವ ಹುಡುಗನಿಗಲ್ಲದೆ ವಿದ್ಯೆ ಕಲಿಯುವ ಅರ್ಹತೆ, ಹಕ್ಕು ಬೇರಾರಿಗಿದೆ? ವಿದ್ಯೆ ಎಂದರೆ ಸತ್ಯಾನ್ವೇಷಣೆಯ ಮಾರ್ಗವಲ್ಲವೇ? ಸತ್ಯವನ್ನು ತಿಳಿಯುವ ಬಯಕೆಯಿರುವವನೇ ನಿಜವಾದ ವಿದ್ಯಾರ್ಥಿ. ಆ ಸತ್ಯದ ಕೆಚ್ಚು ನಿನ್ನಲ್ಲಿದೆ. ನೀನು 'ಸತ್ಯಕಾಮ' ಎಂದರು. ಪ್ರೀತಿಯಿಂದ ವಿದ್ಯೆಯನ್ನು ಧಾರೆಯೆರೆದರು.

ಈ ಸತ್ಯನಿಷ್ಠುರತೆ ಆಗಿನಿಂದಲೂ ನನ್ನನ್ನು ಸೇರಿತ್ತು. ಅಳುಕದೆ ಇದ್ದುದನ್ನು ಇದ್ದಹಾಗೆ ಹೇಳುವ, ರಾಜಿಮಾಡಿಕೊಳ್ಳದೆ ಸರಿಯೆನಿಸಿದ್ದಕ್ಕೆ ಬದ್ಧನಾಗುವ ಗುಣ. ಅದೇ ಕಾರಣದಿಂದಲೇ ಅಲ್ಲವೇ ತಾವು ಬಾಗೇವಾಡಿ ಅಗ್ರಹಾರವನ್ನು ಬಿಡಬೇಕಾಗಿ ಬಂದದ್ದು, ಇನ್ನೆಂದೆಂದೂ ಅಲ್ಲಿಗೆ ಕಾಲಿಡಬಾರದೆಂಬ ಛಲದಿಂದ ಹೊರಬಂದದ್ದು. ಅದರಿಂದಾಗಿಯೇ ಅಲ್ಲವೇ ನಾಗಕ್ಕ ಕಷ್ಟಪಡಬೇಕಾದದ್ದು!

ನಾಗಕ್ಕನೇ ಮನೆಗೆಲಸದ ಹೊಣೆ ಹೊತ್ತಳಲ್ಲವೇ. ತಿಂಗಳ ಮೂರು ದಿನಗಳ ಹೊರತು ಒಕ್ಕಂದು ಅವಳದೇ ಅಡುಗೆ ಮನೆಯ ಹೊಣೆ. ಆ ಮೂರು ದಿನಗಳು ನಾನು ವಿಶ್ವೇಶ್ವರ ಮಾಮನ ಮನೆಯಲ್ಲಿ ಊಟಮಾಡುತ್ತಿದ್ದೆ. ಅಕ್ಕನಿಗೆ ಆ ಮನೆಯ ಹೆಣ್ಣುಮಕ್ಕಳು ಯಾರಾದರೂ ಬಂದು ಉಣಬಡಿಸಿ ಹೋಗುತ್ತಿದ್ದರು.

ಹೀಗೆ ಸಾಗಿತು. ಒಮ್ಮೆ ಎಷ್ಟು ದಿನವಾದರೂ ತಿಂಗಳ ಮೂರು ದಿವಸ ಬರಲೇ ಇಲ್ಲ. ಬಹಳ ದಿನವಾಯಿತು. ಇವೆಲ್ಲ ನನಗೇನು ತಿಳಿಯಬೇಕು. ಮಾಮನ ಮನೆಯಲ್ಲಿ ವಿಚಾರಿಸಿದರು. ನನಗೆ ತಿಳಿಯದೆಂದೆ. ವಿಶ್ವೇಶ್ವರ ಮಾಮನ ಮಡದಿ ತಾವೇ ನಮ್ಮ ಮನೆಗೆ ಆವತ್ತು ಬಂದರು. ನನ್ನನ್ನು ಹೊರಗೆ ಹೋಗು ಎಂದರು ನಾನು ಹಾಗೇ ಮಾಡಿದೆ. ಎಲ್ಲಿಗೆ ಹೋಗಲಿ ಅವರ ಮನೆಗೇ ಹೋಗಿ ಮಕ್ಕಳ ಜೊತೆಯಲ್ಲಿ ಮಾತನಾಡುತ್ತಿದ್ದೆ.

ಆಗ ನನಗೆ ಸುಮಾರು ಹದಿನೈದು ಹದಿನಾರು ವರ್ಷ. ಕೆಲವು ವಿಷಯಗಳು ತಿಳಿದಂತೆಯೂ ಇತ್ತು, ಏನೂ ತಿಳಿಯದಂತೆಯೂ ಇತ್ತು. ಅಕ್ಕನ ತಿಂಗಳ ಮೂರುದಿನದ ಬಗ್ಗೆ ನನಗೆ ಅಸ್ಪಷ್ಟವಾದ ಕಲ್ಪನೆ, ಆದರೆ ಖಚಿತವಾಗಿ ಏನೂ ತಿಳಿಯದು. ಸ್ವಲ್ಪ ಹೊತ್ತಿಗೇ ಅತ್ತೆ ಏದುಸುರು ಬಿಡುತ್ತ ಮನೆಗೆ ವೇಗವಾಗಿ ಬಂದರು. ಯಜಮಾನರಿಗೆ ಏನೇನೋ ಹೇಳಿದರು. "ಏನೋ ಎಡವಟ್ಟಾಗಿರುವ ಹಾಗೆ ಕಾಣುತ್ತದೆ" ಎಂದು ಮಾತನ್ನು ಪರಿಸಮಾಪ್ತ ಮಾಡಿದರು. ಅವರು ಆಡಿಕೊಂಡ ಮಾತುಗಳಿಂದ ನನಗೇನೂ ಪೂರ್ತಿ ಅರ್ಥವಾಗದಿದ್ದರೂ ಅನಾಹುತವಾಗಿರಬೇಕೆಂಬ ಭಾವನೆ ಬಂತು. ಮನೆಗೆ ಓಡಿದೆ. ಸಂಜೆಯಾದರೂ ಮನೆಯಲ್ಲಿ ದೀಪ ಹಚ್ಚಿದ ಹಾಗೆ ಕಾಣಲಿಲ್ಲ.

ಮನೆಯ ಒಳಗೆ ಬಂದಾಗ ಕತ್ತಲಲ್ಲಿಯೇ ಕೂತು ಬಿಕ್ಕುತ್ತಿರುವ ಧ್ವನಿ ಕೇಳಿಸಿತು. ನಾನು ಧ್ವನಿ ಬಂದ ಕಡೆ ಓಡಿದೆ. ಅಕ್ಕ ಕೂತಿದ್ದಳು. "ಏನಾಯಿತಕ್ಕ?" ಎಂದೆ. ಅಳು ಜೋರಾಯಿತು. ನಾನು ಗಾಬರಿಯಿಂದ ಮನೆಯ ದೀಪ ಹೊತ್ತಿಸಿದೆ. ಅಕ್ಕ ಮೂಲೆಯಲ್ಲಿ ಮುದುರಿಕೊಂಡು ಕೂತಿದ್ದಳು. ಅವಳ ಬಳಿ ಹೋಗಿ ಮೈಯಲುಗಿಸಿದೆ. ಹಿಂದೆಯೇ ಹಾಗೆ ಇತ್ತೋ, ಅಥವಾ ನನ್ನ ಗಮನಕ್ಕೆ ಬಂದಿರಲಿಲ್ಲವೋ, ಅಂತೂ ಈಗ ಅವಳ ಮೈ ಕೆಂಡವಾಗಿತ್ತು. ಮೈ ಬೆವರಿತ್ತು. ಮುಖವೋ ಹಗಲಿನಲ್ಲಿ ತೇಲುವ ಹುಣ್ಣಿಮೆ ಚಂದ್ರನ ಹಾಗೆ, ಕಮರಿಹೋಗಿತ್ತು. ನಾನು ಏನೇನೋ ಕೇಳಿದೆ, ಬಲವಂತ ಮಾಡಿದೆ, ನಾನೂ ಅತ್ತೆ, ಅವಳು ಒಂದು ಮಾತಾಡಿದ್ದರೆ ಸರಿ! ಮರವಟ್ಟವಳಂತೆ ಎತ್ತಲೋ ದೃಷ್ಟಿ ನೆಟ್ಟು ಕೂತಿದ್ದಳು. ಅತ್ತೆ ಆಡಿದ ಮಾತುಗಳು, ತಿಂಗಳ ಮೂರು ದಿನ, ಎಡವಟ್ಟು – ಇತ್ಯಾದಿ ನನ್ನಲ್ಲಿ ಅಸ್ಪಷ್ಟ ಕಲ್ಪನೆಗಳನ್ನು ಉಂಟುಮಾಡುತ್ತಿತ್ತು. ಆದರೆ ನಾಗಕ್ಕನ ಬಗ್ಗೆ ನನಗೆಂದೂ ಕೋಪಬರುವುದು ಸಾಧ್ಯವೇ ಇಲ್ಲ. ಬಂದರೂ ಹುಸಿಕೋಪ, ನಿಜವಾದದ್ದಲ್ಲ. ಅವಳು ಏನು ಮಾಡಿದ್ದರೂ ತಪ್ಪು ಮಾಡಿರಲಾರಳು ಎಂದೇ ನನ್ನ ದೃಢವಾದ ನಿಶ್ಚಯ. ಅವಳು ಬಾಯಿಬಿಡುತ್ತಾಳೆಂದು ಮಾಡಿದ ಪ್ರಯತ್ನವೆಲ್ಲ ವಿಫಲವಾದ ಮೇಲೆ ಸುಮ್ಮನಾದೆ. ಮನೆಯಲ್ಲಿ ಇಬ್ಬರೇ. ಗವ್ವೆಂದು ಕತ್ತಲೆ ಹೊರಗೆ. ಒಳಗಿನ್ನೇನು? ಅವಳ ತಪ್ಪು ಎಂಥದೋ ಎಂಬುದಕ್ಕಿಂತ ಇವರೆಲ್ಲ ಏನು ಮಾಡುವರೋ ಎಂಬ ಭಯ ನನ್ನನ್ನಾವರಿಸಲು ತೊಡಗಿತ್ತು. ಊಟವಿಲ್ಲ, ನಿದ್ದೆಯಿಲ್ಲ. ರಾತ್ರಿಯೆಂಬುದು ರಾಕ್ಷಸನ ಬಾಯಿಯಂತಿತ್ತು.

ಹೇಗೋ ರಾತ್ರಿ ಕಳೆಯಿತು. ಮಾರನೆಯ ಬೆಳಿಗ್ಗೆಯೇ ವಿಶ್ವೇಶ್ವರ ಮಾವ

ಏಂದರು. ವಿಧವಿಧವಾಗಿ ಪ್ರಶ್ನೆ ಮಾಡಿದರೂ ನಾಗಕ್ಕ ಏನೂ ಉತ್ತರ ನೀಡಲಿಲ್ಲ. ಮಾತೇ ನಿಂತು ಹೋಗಿದೆಯೇನೋ ಎಂದೂ ನನಗೆ ಅನ್ನಿಸಿತ್ತು. ತಮ್ಮ ಪ್ರಯತ್ನ ಸಫಲವಾಗದಿದ್ದಾಗ "ಏನಪ್ಪಾ?" ಎಂದು ಮೆಲ್ಲಗೆ ನನ್ನ ಕಡೆ ತಿರುಗಿದರು. ನನಗೆ ಅಳು ಬಂದಿತೇ ಹೊರತು ಮಾತು ಬಾರದಾಯಿತು. ಗೊತ್ತಿಲ್ಲ ಎಂಬಂತೆ ತಲೆಯಾಡಿಸುತ್ತಾ ಗೊಳೋ ಎಂದು ಅತ್ತೆ. ಕೊನೆಗೆ ಅವರು "ನಾನೇನು ಮಾಡಲಪ್ಪ. ಮಹಾಜನಗಳನ್ನು ಉದಯಾದಿ ಹತ್ತು ಗಳಿಗೆಗೆ ಸೇರುವ ಏರ್ಪಾಟು ಮಾಡುತ್ತೇನೆ. ಅವರೇನು ತೀರ್ಮಾನ ಮಾಡಿದರೆ ಹಾಗೆ" ಎಂದು ಹೊರ ಹೊರಟರು. ಹೋಗುವಾಗ "ಹೇಳಿಕಳಿಸಿದಾಗ, ನಿಮ್ಮಕ್ಕನನ್ನೂ ಕರೆದುಕೊಂಡು ಬಾ" ಎಂದರು. ಆ ಮಾತು ಹೇಳುವಾಗ ಅವರ ಧ್ವನಿ ಗಡುಸಾದಂತಿತ್ತು.

ರಾತ್ರೆ ಹೇಗೆ ಕಳೆಯಿತೋ ಈಗಲೂ ಹಾಗೆಯೇ. ಏನು ಮಾಡುವುದೂ ತೋಚದು. ಅಕ್ಕಪಕ್ಕದ ಮನೆಯವರಿಗೆ ವಿಷಯ ತಿಳಿಯಿತೇನೋ. ಚಿಕ್ಕವರು ಕೆಲವರು ಕುತೂಹಲದಿಂದ ಹೊರಗೇ ನಿಂತು ಒಳಗೆ ಇಣುಕಿ ಹಾಕುವ ಪ್ರಯತ್ನ ಮಾಡಿದರೆ, ದೊಡ್ಡವರು ಕೆಲವರು ಒಳಗೆ ಬಂದು ನಾಗಕ್ಕನ ಮುಂದೆ "ಏನಾಯಿತೇ?" ಎಂಬ ಪ್ರಶ್ನೆಯನ್ನೇ ರಾಶಿ ಹಾಕಿದರು. ಉಹ್ಞು ಅವಳಂತೂ ಬಾಯಿಬಿಟ್ಟದ್ದರೆ! ಮಾತು ಹೊರಡುತ್ತಿರಲೇ ಇಲ್ಲವೋ, ಏನಾದರೂ ಮಾತು ಆಡಬಾರದೆಂಬ ಹಟವೋ ಅಂತೂ ಮೂಕಿಯಾದಳು. ಬಂದವರು ನಿಧಾನವಾಗಿ, ಬೈದು, ದುಡುಕಿ ಕೇಳಿದರೂ ಮೌನವೇ ಉತ್ತರ. ಅವಳ ನಿರುತ್ತರದಿಂದ ಬೇಸತ್ತು ಕೆಲವರು "ಎಲ್ಲಾದರೂ ಹಾಳಾಗು" ಎಂದು ಶಪಿಸಿ ಹೋದರು. "ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಅನುಭವಿಸುತ್ತಾಳೆ" ಎಂದುಕೊಂಡರು. ನಾನು ಏನೂ ಮಾಡಲಾರದವನಾಗಿದ್ದೆ. ಬಂದು ಹೋದವರ ಬಗ್ಗೆ ಬೇಸರ ಕೋಪ ಉಕ್ಕುತ್ತಿದ್ದರೂ ತೋರ್ಪಡಿಸಿಕೊಳ್ಳಲಾರದೆ ಒಳಗೇ ಕುದಿಯುತ್ತಿದ್ದೆ. ನನಗೆ ಹಾಗೆ ಆಗಿರಬೇಕಾದರೆ ಅವಳ ಗತಿಯೇನು!

ಹೀಗೆ ಕಾಲ ಸಾಗಿತು. ವಿಶ್ವೇಶ್ವರ ಸೋಮಯಾಜಿಗಳು ಹೇಳಿಕಳಿಸಿದರು. ಅಕ್ಕನನ್ನು ಬಲವಂತವಾಗಿ ಎಬ್ಬಿಸಿ, ನಾನೇ ಆಸರೆಯಿತ್ತು ನಡೆಸಿಕೊಂಡು ಹೋದೆ. ಮಹಾಜನ ಸಭೆಗೆ ಎಲ್ಲರೂ ಸೇರಿದ್ದಾರೆ, ಅಲ್ಲಿ ನಮ್ಮನ್ನು ಒಂದು ಮೂಲೆಯಲ್ಲಿ ನಿಲ್ಲಿಸಿದರು. ಸ್ವಲ್ಪಕಾಲದ ನಂತರ, ಮುಖ್ಯರಾದವರೆಲ್ಲ ಬಂದ ಮೇಲೆ, ಅಕ್ಕನ ಮುಂದೆ ಮತ್ತೆ ಪ್ರಶ್ನೆಗಳ ಸುರಿಮಳೆ "ಏನಾಯಿತು"; ಅಕ್ಕ ಮತ್ತೆ ಮೌನ. ಅವಳಲ್ಲಿ ಉಸಿರೇ ಅಡಗಿಹೋಗಿತ್ತೇನೋ. "ನಾಲ್ಕು ಬಾರಿಸಿ, ಮಾತು ಬರತ್ತೆ" ಎಂದರು ಯಾರೋ. "ಛೆ, ಛೆ ಹುಡುಗಿಯ ಮೇಲೆ ಕೈಮಾಡುವುದುಂಟೆ?" ಎಂದರು ಮತ್ತಾರೋ. "ಇಂಥ ನಡೆತೆಗೆಟ್ಟರೆ ಮತ್ತೇನು ಮಾಡುವುದು?" "ನಮಗೇಕೆ ದೇಹದಂಡಿಸುವ ವಿಚಾರ. ಹೆತ್ತವರಾದರೆ ಹಾಗೆ ಶಿಕ್ಷಿಸುವ ಹಕ್ಕು. ಮಹಾಸಭೆ ಶಾಸ್ತ್ರಕ್ಕೆ ಅನುಗುಣವಾಗಿ ನಡೆಯಲಿ" ಎಂದು ಮತ್ತಾರೋ ಸೂಚಿಸಿದರು.

ಇಷ್ಟೆಲ್ಲ ಬೇಗನೇ ಆ ವಿಚಾರಣೆ ನಡೆದಿರುವುದು ಸಾಧ್ಯವೇ? ಸಾಕಷ್ಟು

ದೀರ್ಘಕಾಲವೇ ಆಯಿತು. ಆದರೆ ಅದರ ವಿವರಗಳು ನನಗೆ ನೆನಪಿಗೆ ಬರುವುದಿಲ್ಲ ಅಷ್ಟೇ ಅಲ್ಲ, ಅದನ್ನೆಲ್ಲ ನೆನಪಿಸಿಕೊಂಡು ಕುದಿಯಲೇಕೆ? ಹೀಗಾಗಿ ಕೊನೆಯ ವಿಚಾರಕ್ಕೆ ಬರುತ್ತೇನೆ. ತಮ್ಮ ತಮ್ಮಲ್ಲೇ ಏನೇನೋ ಮಾತನಾಡಿಕೊಂಡರು ಮಹಾಜನರು. ಕೊನೆಗೊಮ್ಮೆ ನನ್ನಡೆ ತಿರುಗಿ ಒಬ್ಬರು ಕೇಳಿದರು. "ಏನಯ್ಯ ಬಸವರಾಜ, ನಿನ್ನ ಅಕ್ಕ ಮದುವೆಯಾಗದೆ ಗರ್ಭವತಿಯಾದಂತಿದೆ ಅಥವಾ ಅದು ನಮಗೆ ತಿಳಿಯದು. ಅದರೆ ಆಕೆ ಹೊರಗಾಗಿಲ್ಲ, ಕೇಳಿದರೆ ಏನೂ ಹೇಳುವುದಿಲ್ಲ ಆಕೆಯಿಂದ ತಪ್ಪಾಗಿದೆಯೆಂದೇ ಭಾವಿಸಿ ನಾವು ತೀರ್ಮಾನಕ್ಕೆ ಬರಬೇಕಾಗುತ್ತದೆ" ಎಂದು ಪೀಠಿಕೆ ಹಾಕಿದರು. ನಾನೇನೂ ಹೇಳುವ ಸ್ಥಿತಿಯಲ್ಲಿರಲಿಲ್ಲ, ಹೇಳಲು ಏನೂ ಗೊತ್ತಿರಲಿಲ್ಲವೆಂಬುದೂ ನಿಜ. ಆಮೇಲೆ ಅವರೇ ಮುಂದುವರಿದರು : "ನೋಡಪ್ಪ, ಇದಕ್ಕೆ ಎರಡು ಮಾರ್ಗಗಳಿವೆ: ಅವಳು ಘಟಶ್ರಾದ್ಧಕ್ಕೆ ಒಳಗಾಗಲಿ. ಅವಳ ಸಂಬಂಧವನ್ನೆಲ್ಲ ನೀನು ತೊರೆದುಬಿಡಬೇಕು. ಅವಳು ಎಲ್ಲಿಯಾದರೂ ಹಾಳಾಗಿ ಹೋಗಲಿ. ನೀನು ಮಾತ್ರ ಅಗ್ರಹಾರದಲ್ಲಿರಬಹುದು. ನೀನೇನು ಮಾಡೀಯೆ, ಮುಗ್ಧ. ಅವಳಿಗೆ ಶಿಕ್ಷೆಯಾಗಬೇಕು." ನನ್ನ ಉಸಿರಾಟ ವೇಗವಾಯಿತು. ನಾಗಕ್ಕ ಎಲ್ಲಾದರೂ ಹೊರಟುಹೋಗುವುದೇ? ನಾನು ಇಲ್ಲಿರುವುದೇ. ಕಣ್ಣಲ್ಲಿ ಗಳಗಳ ನೀರು ಸುರಿಯಿತು. ಅಕ್ಕನ ಕಡೆ ಆ ಕಣ್ಣೀರಿನಲ್ಲಿಯೇ ದೃಷ್ಟಿ ಹಾಯಿಸಿದೆ. ಅವಳಾಗಲೇ ಶವವಾದಂತಿದ್ದಳು. ಆದರೆ ಎಂದಿನಂತೆ ಮರವಾಗಿದ್ದಳು. ಅವರು ಮುಂದುವರಿಸಿದರು : "ಎರಡನೆಯದೆಂದರೆ, ನೀನು ಅಕ್ಕನನ್ನು ಬಿಟ್ಟುಕೊಡಲಿಲ್ಲವಾದರೆ, ನಿಮ್ಮಿಬ್ಬರಿಗೂ ಬಹಿಷ್ಕಾರ ಹಾಕಲಾಗುತ್ತದೆ. ಅಗ್ರಹಾರದಿಂದ ಇಂದಿನ ಸಾಯಂಕಾಲದೊಳಗಾಗಿ ನೀವಿಬ್ಬರೂ ಶಾಶ್ವತವಾಗಿ ತೊಲಗಬೇಕು." ಸರಿ, ಸರಿ ಎಂದಿತು ಸಭೆ. ಅಗ್ರಹಾರದಲ್ಲಿ ಇಬ್ಬರು ಕಡಿಮೆಯಾದರೇನಂತೆ, ಅವರ ಜೀವನ ಎಂದಿನಂತೆಯೇ ನಡೆಯುವುದಲ್ಲ!

ಅಕ್ಕ ಏನಾದರೂ ಆಗಲಿ ಎಂಬಂತೆ ರಾತ್ರಿಯಿಂದ ಇದ್ದ ಹಾಗೆ ಇದ್ದಳು; ನನ್ನ ಕಡೆ ಕೂಡ ತಿರುಗಲಿಲ್ಲ. ಅಳಲೂ ಇಲ್ಲ. ಕಣ್ಣಲ್ಲಿ ನೀರೂ ಇಲ್ಲ. "ನಾನು ಅಕ್ಕನನ್ನು ಬಿಟ್ಟಿರಲಾರೆ" ಎಂದು ಗದ್ಗದ ಧ್ವನಿಯಿಂದ ಅಳುತ್ತ ನಿಧಾನವಾಗಿ ಹೇಳಿದೆ. ಅಲ್ಲಿಗೆ ತೀರ್ಮಾನವಾದಂತಿತ್ತು. ನಾವು ಎಂದೆಂದಿಗೂ ಹುಟ್ಟಿದೂರಿನ ಋಣಹರಿಸಿಕೊಂಡಿದ್ದೆವು.

ಮತ್ತೆ ಅಕ್ಕನನ್ನು ನಡೆಸಿಕೊಂಡು ಮನೆಗೆ ಬಂದೆ. ಒಂದೆರಡು ಬಟ್ಟೆಗಳನ್ನು ಗಂಟುಕಟ್ಟಿದೆ. "ಎಲ್ಲಾದರೂ ಹಾಳಾಗಿ ಹೋಗೋಣ. ಈ ರಾಕ್ಷಸರ ಸಹವಾಸಬೇಡ" ಎಂದುಕೊಳ್ಳುತ್ತ ಸಿದ್ಧನಾದೆ. ಅಕ್ಕನನ್ನು ದೂಡಿಕೊಂಡು ಮನೆಯಿಂದ ಹೊರಟೆ. ಧೂರ್ತರೆಲ್ಲ ಸೇರಿ ನಮ್ಮತ್ತ ದೃಷ್ಟಿಹಾಯಿಸುತ್ತಿದ್ದರೆಂಬುದು ತಲೆ ತಗ್ಗಿಸಿ ನಡೆಯುತ್ತಿದ್ದರೂ ತಿಳಿಯುತ್ತಿತ್ತು. ನಿಧಾನವಾಗಿ ನಮ್ಮ ಬೀದಿಯಿಂದ ತಿರುಗಿ ಊರ ಹೊರಗಿನ ರಸ್ತೆಗೆ ಕಾಲಿಟ್ಟೆವು. ಆರು ಮುನಿದು ನಮ್ಮನೇನ ಮಾಡುವರು? ಊರು ಮುನಿದು ನಮ್ಮನೆಂತು ಮಾಡುವರು? ಎಂದುಕೊಂಡೆ. ಊರ ಹೊರಗೆ ಕಾಲಿಟ್ಟಾಗ ಕೊನೆಗೊಮ್ಮೆ ಹಿಂತಿರುಗಿ 'ಥೂ' ಎಂದು ಜೋರಾಗಿ ಉಗುಳಿ ಮುಂದಡಿಯಿಟ್ಟೆ.

## ೧೩

ಕಲ್ಯಾಣದಲ್ಲೀಗ ದಿನನಿತ್ಯ ಏನಾದರೊಂದು ಮುಜುಗರವುಂಟುಮಾಡುವ ಪ್ರಸಂಗಗಳು ನಡೆಯುತ್ತಿದ್ದವು. ಕೆಲವರು ಅರಮನೆಗೆ ಮೆರವಣಿಗೆಯಲ್ಲಿ ಹೋಗಿ ಚಕ್ರವರ್ತಿಗಳಿಗೆ ಮನವಿ ಸಲ್ಲಿಸಿದರಂತೆ. ಪ್ರಭುಗಳನ್ನು ನೇರವಾಗಿ ಭೇಟಿಯಾಗಲು ಸಾಧ್ಯವಾಗಲಿಲ್ಲ. ಏಕೆಂದರೆ ಹೋಗಿದ್ದವರು ರಾಜಕೀಯವಾಗಿ ಬಲಿಷ್ಠರೇನಲ್ಲ. ಅರಮನೆಗಳಲ್ಲಿ ಸಾಮಾನ್ಯರಿಗೆ ಪ್ರವೇಶವು ದೊರೆಕೀತೇ? ತುಂಬ ಪ್ರಮುಖವಾದ ವಿಷಯವಾದರೆ ಪ್ರಭುಗಳೇ ಬಂದಾರು. ಅಂಥ ಮುಖ್ಯವಾದದ್ದೆಂದು ನಿರ್ಧರಿಸುವವರಾರು? ಅಧಿಕಾರಿಗಳೇ ಅಲ್ಲವೇ? ಅಂದರೆ ಅವರಿಗೆ ಯಾವುದು ಮುಖ್ಯವೆನ್ನಿಸುತ್ತದೆಯೋ ಅಂಥದ್ದಕ್ಕೆ ಹೆಚ್ಚು ಗಮನ.

ಈ ಜನ ಅರಮನೆಯವರೆಗೂ ಹೋಗಲು ಸಾಧ್ಯವೂ ಆಗಲಿಲ್ಲ. ದೂರದಲ್ಲಿಯೇ ರಾಜಭಟರು ತಡೆದರು. ಅಲ್ಲದೆ, ಮೊದಲೇ ಪ್ರಭುಗಳ ಸಮಯವರಿತು ಬರಬೇಕಾದದ್ದು ವಾಡಿಕೆ. ಸಾಮಾನ್ಯರಿಗೆ ಅಂಥ ಅವಕಾಶ ಎಲ್ಲಿ ಸಿಕ್ಕೀತು? ಹೀಗಾಗಿ ತಮ್ಮ ಮನವಿಯನ್ನು ಗೃಹಮಹತ್ತರರಿಗೆ ನೀಡಿದರು. ಮನವಿಯೆಂದರೆ ಈಚೆಗೆ ನಡೆಯುತ್ತಿರುವ ಜಾತಿಸಂಕರ ಪ್ರಯತ್ನಗಳನ್ನು ನಿಲ್ಲಿಸುವ ಪ್ರಯತ್ನವನ್ನು ಪ್ರಭುಗಳು ಕೈಗೊಳ್ಳಬೇಕೆಂಬ ಪ್ರಾರ್ಥನೆಯಷ್ಟೆ.

ಇಂಥದು ಭಾರಿ ಸುದ್ದಿಯಾಗದಿದ್ದರೂ ಕಲ್ಯಾಣದಲ್ಲಿ ನಡೆಯುತ್ತಿದ್ದ ಸಂಗತಿಗಳ ಸ್ವರೂಪವನ್ನು ತಿಳಿಸುವಂತಹವು. ವಾತಾವರಣ ಪ್ರಕ್ಷುಬ್ಧವಾಗಿತ್ತು. ಹಲವಾರು ದೇವಸ್ಥಾನಗಳಲ್ಲಿ ಸಭೆಗಳು ನಡೆದುವಂತೆ. ಹೊಲೆಯ–ಬ್ರಾಹ್ಮಣರ ನಡುವೆ ಮದುವೆ ಎಲ್ಲಾದರೂ ಉಂಟೆ? ಆದರೆ ಅದು ಶರಣಸಮೂಹದಲ್ಲಿ ನಡೆಯುತ್ತಿತ್ತೆಂಬುದು ನಿಜ. ಶರಣರೇನೂ ವರ್ಣವ್ಯಾಪ್ತಿಗೆ ಬರುವವರಲ್ಲ; ಅವರಲ್ಲಿ ಜಾತಿಭೇದಗಳಿಲ್ಲ, ಒಮ್ಮೆ ಶರಣವ್ಯಾಪ್ತಿಗೆ ಬಂದರೆ, ಅವರೆಲ್ಲ ಒಂದೇ. ಹಾಗೆಂದು ಸಮಾನರಾಗಿದ್ದಾರೆಂದು ಅರ್ಥವಲ್ಲ. ಎಲ್ಲ ಸಮಾನರಂತೆ ವರ್ತಿಸಬೇಕೆಂಬುದು ಆದರ್ಶ.

ತಿಳಿವಳಿಕೆಯಿರುವಂಥ ಜನರಿಗೆ ವಿಚಿತ್ರವೆನ್ನಿಸುವ ವಿಚಾರ ಇದು. ಒಂದು ಮತವನ್ನು ಬಿಟ್ಟು ಮತ್ತೊಂದು ಮತಕ್ಕೆ ಬಂದರೂ ಹಳೆಯ ಜಾತಿಯ ವಾಸನೆ ಹೋಗದಲ್ಲ ಯಾಕೆ? ಅದಕ್ಕೇ ಜಾತಿಬುದ್ಧಿ ಅನ್ನುವುದು ಎಂಬುದು ಕೆಲವರ ವ್ಯಾಖ್ಯಾನ. ಅದು ಅಷ್ಟು ಮೂಲಭೂತವಾದದ್ದು. ಆದರೆ ಹೊರಗೆ ಶರಣರೆಲ್ಲ ಸಮಾನರಂತೆ ವರ್ತಿಸುತ್ತಾರೆ! ಕೆಲವರು ಶರಣರಾದವರು ಇಂಥ ದೇವಸ್ಥಾನದ

ಸಭೆಗಳಿಗೆ ಹಾಜರಾಗುತ್ತಿದ್ದರಂತೆ. ಇದು ಬಸವಣ್ಣನವರ ಕಿವಿಗೂ ಬಿತ್ತು. ವಿಶೇಷವಾಗಿ ಕಲ್ಲಿನಾಥ ಶರಣನೆಂಬೊಬ್ಬ ಗುರು ಇದರಲ್ಲೆಲ್ಲ ತುಂಬ ಮತುವರ್ಜಿ ವಹಿಸುತ್ತಿದ್ದಾನಂತೆ. ಎತ್ತರದ ಆಳು; ಹರದಾರಿ ದೂರಕ್ಕೆ ಕಾಣುವಂತೆ ಹಾಕಿಕೊಂಡ ವಿಭೂತಿ. ಇಷ್ಟಿಷ್ಟು ದಪ್ಪ ರುದ್ರಾಕ್ಷಿಗಳಿರುವ ಸರ ಕೊರಳ ಸುತ್ತ. ಇವನು ಈಗಾಗಲೇ ಸಾವಿರಾರು ಜನರನ್ನು ಲಿಂಗವಂತರನ್ನಾಗಿ ಮಾಡಿದ್ದಾನಂತೆ. ಈಗ ಶರಣಧರ್ಮಕ್ಕೆ ಸೇರಿಬಿಟ್ಟಾಕ್ಷಣ ಪೂರ್ತಿ ವ್ಯತ್ಯಾಸವಾಗಿ ಬಿಡಲು ಸಾಧ್ಯವೇ ಎಂದವನ ವಾದ. ಮುಂದಿನ ಪೀಳಿಗೆಗಳು ಸ್ವಲ್ಪ ಸುಧಾರಿಸಬಹುದು. ಹಾಗಾಗಿ ಹುಟ್ಟುಗುಣ ಕಳೆದುಕೊಳ್ಳುವುದು ಸುಲಭವಲ್ಲ. ತಂದೆಯ ಹಾಗೆ ಮಗ ಏಕಿರುತ್ತಾನೆ? ಅಂದರೆ ಹುಟ್ಟಿನಿಂದ ಕೆಲವು ಗುಣಗಳು ಬರುತ್ತವೆ. ಅದನ್ನೇ ಜಾತಿ ಎನ್ನುವುದು; ಹುಟ್ಟಿನಿಂದ ಪಡೆದ ಗುಣಗಳ ಗುಂಪು.

ಶರಣಧರ್ಮ ಸಮಾನತೆಯನ್ನು ಬೋಧಿಸುತ್ತದೆಂದರೆ ಇಲ್ಲೇ ಎಲ್ಲರೂ ಸಮಾನರು ಎಂದಲ್ಲ. ಎಲ್ಲರೂ ಒಂದಲ್ಲ ಒಂದು ಕಾಲಕ್ಕೆ, ಇನ್ನು ಕೋಟಿಜನ್ಮಗಳ ನಂತರ ಇರಬಹುದು, ಶಿವನಲ್ಲಿ ಸೇರುವವರೇ. ಅದನ್ನು ಸಾಧಿಸುವುದೇ ಜನ್ಮದ ಗುರಿ. ಹಿಂದಿನ ಜನ್ಮಗಳಲ್ಲಿ ಪಾಪಕ್ಷಯ ಮಾಡಿಕೊಂಡವನೂ ಒಂದೇ, ಈ ಜನ್ಮದಲ್ಲಿ ಅನಾಚಾರಿಯಾಗಿರುವವನೂ ಒಂದೆಯೇ ಏನು ಎಂದು ಅವನ ವಾದ. ಕೇತಗ ಈ ಜನ್ಮದಲ್ಲಿ ಶರಣಧರ್ಮಕ್ಕೆ ಸೇರಿದ್ದಾನೆ. ಇದರಲ್ಲಿ ಮನಸ್ಸಿಟ್ಟು ನಡೆದರೆ ಮುಂದಿನ ಜನ್ಮಗಳಲ್ಲಿ ಅವನ ದಾರಿ ಸುಗಮ. ಹಾಗೆಂದು ಇದೇ ಜನ್ಮದಲ್ಲಿ ಅವನು ಇತರ ಎಲ್ಲರಿಗೂ ಸಮಾನ ಹೇಗಾದಾನು? ಅದೇಕೆ ಹಾಗಾದರೆ ಅವನು ಬಸವಣ್ಣನವರಾಗಲಿಲ್ಲ?

ಬಸವಣ್ಣನವರಂಥ ಶರಣರು ಈ ನೀತಿ ಹೇಳುವವರಲ್ಲವಲ್ಲ ಎಂದರೆ, "ಅವರಿಗೆ ಅವರದೇ ಆದ ಮಿತಿಗಳಿರುತ್ತವೆ. ಅಲ್ಲದೆ, ಶರಣಧರ್ಮ ಎಂದರೆ ಅವರೊಬ್ಬರೇ ಏನು?" ಎನ್ನುತ್ತಾನೆ. ಅವನೇ ಧಾರಾಳವಾಗಿ ಕೆಳಜಾತಿಯವರಿಗೆ ಲಿಂಗಧಾರಣೆ ಮಾಡಿದ್ದರೂ, ಅವರಿಂದ ದ್ರವ್ಯರೂಪದಲ್ಲಿ ಕಾಣಿಕೆ ಪಡೆಯುವವನೇ ಹೊರತು, ಅವರ ಮನೆಗಳಲ್ಲಿ ಊಟಮಾಡಲಾರ. 'ಊಟ ತನ್ನಿಚ್ಛೆ, ನೋಟ ಪರರಿಚ್ಛೆ' ಎಂದು ಹೇಳುತ್ತಾನೆ.

ಬಸವಣ್ಣನಂತಹವರು ಯಜ್ಞಯಾಗಾದಿಗಳನ್ನು ಅಲ್ಲಗೆಳೆಯುತ್ತಾರೆ, ನಿಜ. ಅವುಗಳ ಬಗ್ಗೆ ವೇದಗಳಲ್ಲಿ ವಿವರಣೆಯಿವೆ. ವೇದಗಳಲ್ಲಿ ಶಿವನನ್ನು ಕುರಿತೂ ಮಂತ್ರಗಳಿವೆ. ಅಂದರೆ ನಮ್ಮ ಧರ್ಮ ವೇದಗಳ ಕಾಲದಷ್ಟೇ ಹಳೆಯದು. ಯಜ್ಞ ಕಾರ್ಯವನ್ನು ನಮ್ಮಲ್ಲಿ ಸಾವಿರಾರು ಭಕ್ತರ ಪರವಾಗಿ ಗುರು ಮಾಡುತ್ತಾನೆ. ನಮ್ಮ ಯಜ್ಞ ಜ್ಞಾನಯಜ್ಞ ಎಂದು ಅವನು ವಿವರಣೆ ನೀಡುತ್ತಾನೆ.

ಕಲ್ಲಿನಾಥ ಇಂಥ ಹಲವಾರು ದೇವಸ್ಥಾನದ ಸಭೆಗಳಿಗೆ ಹೋಗಿದ್ದುದು ಮಾತ್ರವಲ್ಲ, ಅಂಥ ಎಷ್ಟೋ ಸಭೆಗಳನ್ನು ತಾನೇ ಏರ್ಪಾಟು ಮಾಡಿದ್ದ. ಎಲ್ಲರೂ ಒಂದೇ ಸಮನಾಗಿರಲು ಸಾಧ್ಯವಿಲ್ಲ, ವೀರಶೈವ ಎಂದರೆ ಮೋಕ್ಷ ಸಂಪಾದನೆ ಮಾಡಬಹುದಾದ ಸಾಧನೆಗೆ ಸಮಾನ ಅವಕಾಶ ನೀಡುವಂತಹುದು ಎಂದು

ಆತನ ವಿವರಣೆ. ಲಿಂಗಧಾರಣೆ ಮಾಡಿಕೊಂಡವರೆಲ್ಲ ಒಂದೇ ರೀತಿ ಇದ್ದಾರೇನು? ಹೆಂಡ ಕುಡಿವವರು ಹೆಂಡ ಕುಡಿಯುತ್ತಲೇ ಇಲ್ಲವೇ; ಮಾಂಸಾಹಾರಿ ಮಾಂಸಾಹಾರಿಯೇ ಆಗಿ ಮುಂದುವರಿದಿದ್ದಾನೆ. ಇವರ ಮನೆಗೆ ಹೋದರೆ ನಮ್ಮಂತಹವರು ಆಹಾರ ಸೇವಿಸಲು ಹೇಗೆ ಸಾಧ್ಯ? ದೊಡ್ಡವರು ಬಂದರೆಂದು ಅವರು ಭಕ್ತಿ ತೋರಿಸಬಹುದು. ಆದರೆ ಅವರ ಮೂಲಭೂತಗುಣಗಳಲ್ಲಿ ವ್ಯತ್ಯಾಸ ಏನೂ ಆಗಿರುವುದಿಲ್ಲವಲ್ಲ. ಪೂಜೆ–ಪುನಸ್ಕಾರ ಸಮಯದಲ್ಲಿ ಅವರು ಇದನ್ನೆಲ್ಲ ಬಿಡಬಹುದು; ಆದರೆ ಎಲ್ಲ ಮುಗಿದ ಮೇಲೆ ಮತ್ತೆ ಅದನ್ನು ಮಾಡುತ್ತಾರೆ. ಕೆಲವರು ಛಲದಿಂದ ಇವನ್ನು ಬಿಟ್ಟಿರಬಹುದು. ಆದರೆ ಅವರು ಈಗಲೂ ತೇಗಿದರೆ ಹಿಂದೆ ತಿಂದದ್ದರ ವಾಸನೆ ಬರುತ್ತದೆ! ಇದನ್ನೇ ಜಾತಿ ಎನ್ನುವುದು. ತಾವು ಇರುವಂತೆ ಇಂಥವರು ಇರಬಲ್ಲರೇ? ನಾವು ನಮ್ಮ ಆಹಾರವನ್ನು ನಾವೇ ತಂದ ನೀರಲ್ಲಿ ಬೇಯಿಸಿಕೊಳ್ಳುವವರು. ಉಳ್ಳಿಯಂತಹವನ್ನು ತಿನ್ನುವುದಿಲ್ಲ, ಎಷ್ಟೋ ಜನ ಕಾರ, ಉಪ್ಪುಗಳನ್ನೂ ತಿನ್ನುವುದಿಲ್ಲ. ಹೀಗೆ ಬಾಳುವವರೂ ಒಂದೇ, ನಿನ್ನೆ ಲಿಂಗಧಾರಣೆ ಮಾಡಿಸಿಕೊಂಡ ಕೇತಗನೂ ಒಂದೇ ಎಂದರೆ ಹೇಗೆ ಎಂಬುದು ಕಲ್ಲಿನಾಥನ ವಾದ. ಹಾಗಾಗಿ ಎಲ್ಲ ಮತಗಳಲ್ಲೂ ಉತ್ತಮರಿದ್ದಾರೆ; ಕನಿಷ್ಠರಿದ್ದಾರೆ. ಇಂಥ ಸನ್ನಿವೇಶಗಳಲ್ಲಿ ಉತ್ತಮರು ಒಂದಾಗದಿದ್ದರೆ ಯಾವ ಮತದ ಶ್ರೇಷ್ಠತೆಯೂ ಉಳಿಯಲಾರದು. ಆದ್ದರಿಂದ ಲಿಂಗವಂತರಲ್ಲಿ ಜಾತಿ ಬೆರೆತರೆ ಬೇರೆಯವರಲ್ಲಿ ಬೆರತ ಹಾಗೆಯೇ. ಜಾತಿ ಜಾತಿಯೇ. ಅವರು ಅನುಸರಿಸುವ ಮಾರ್ಗ ಬೇರೆ, ನಮ್ಮ ಮಾರ್ಗ ಬೇರೆ. ಆದರೆ ಭೂಮಿ ಒಂದೇ ಅಲ್ಲವೇ?

ಇಂತಹ ಕೆಲವರು ಸೇರಿ ಒಳತಂತ್ರಗಳನ್ನು ಮಾಡಿದ್ದರಿಂದಾಗಿ ಕೆಲವು ದುರ್ಬಲರ ಮನೆಗಳ ಮೇಲೆ ದಾಳಿಗಳಾದುವೆಂಬ ವರದಿ ಬರುತ್ತಿತ್ತು. ಎಲ್ಲೋ ಹೋಗುತ್ತಿದ್ದರೆ ಕೆಲವರು ಕಾದುಕೊಂಡಿದ್ದು ಹಲ್ಲೆ ಮಾಡುತ್ತಿದ್ದರಂತೆ. ಇಂಥದ್ದು ಈ ಕಡೆಯಿಂದಲೂ ನಡೆಯಿತು. ಕೆಲವು ಉತ್ತಮ ವರ್ಗದವರೆನಿಸಿಕೊಂಡ ಶರಣರ ಮನೆಗಳ ಮುಂದೆ ಇದ್ದಕ್ಕಿದ್ದಂತೆ ಬೆಳಿಗ್ಗೆ ಏಳುವ ಹೊತ್ತಿಗೆ ಹೆಂಡದ ಮಡಕೆಗಳು ಜೋಲಾಡುತ್ತಿದ್ದವಂತೆ. ಹಾಗೆಯೇ ಮನೆಗಳ ಅಂಗಳದಲ್ಲಿ ಮಾಂಸದ ತುಂಡುಗಳು ಕಾಣಿಸಿಕೊಳ್ಳುತ್ತಿದ್ದುವಂತೆ.

ಇದರ ಪರಿಣಾಮಗಳು ಬೇರೆ ರೀತಿಯಲ್ಲಿಯೂ ಆಗಲು ತೊಡಗಿದವು. ಸಾಲ ಕೊಟ್ಟವರು ತಗಾದೆ ಮಾಡಲು ಶುರುಮಾಡುವರು. ಬಡ್ಡಿ ವ್ಯವಹಾರ ಮಾಡಬಾರದೆಂದು ಹಿರಿಯರು ಹೇಳುತ್ತಿದ್ದರು, ನಿಜ. ಕೆಲವರಿಗೆ ಅದೇ ವೃತ್ತಿಯಲ್ಲವೇ? ಧರ್ಮದ ಬಡ್ಡಿ ಹಾಕಿ ಹಣ ಕಡಕೊಟ್ಟು ಬಾಳುತ್ತಿದ್ದವರು ಬೇಕಾದಷ್ಟು ಜನ. ಅಲ್ಲದೆ ಸಾಲ–ಸೋಲ ಇಲ್ಲದೆ ಬಾಳುವೆ ಮಾಡುವುದು ಅಷ್ಟು ಸುಲಭವೇ? ಹೀಗಾಗಿ ಯಾವುದೋ ಕಾರಣಕ್ಕಾಗಿ ಸಾಲಪಡೆದವರು ಆ ತಗಾದೆಗೆ ಒಳಗಾಗಿ ಇದ್ದುಬದ್ದುದನ್ನು ಮಾರಿ ಸಾಲ ತೀರಿಸಬೇಕಾಗುತ್ತಿತ್ತು. ಯಾವಾಗ ಜರೂರು ಇದೆಯೆಂದು ತಿಳಿಯುವುದೋ ಆಗ ಈ ವಸ್ತುಗಳಿಗೆ ಹತ್ತಿದ್ದರೆ ಐದು

ಬೆಲೆಯಾಗುವುದು. ಅಂತೆಯೇ ಸಹಾಯ ಪಹಾಯಕ್ಕಾಗಿ ಇತರರ ಬಳಿಗೆ ಹೋದರೆ ಶರಣರಲ್ಲೂ ಸಿಕ್ಕುವುದು ಕಷ್ಟವೇ ಆದ ಪರಿಸ್ಥಿತಿಯುಂಟಾಯಿತು.

ಬಸವಣ್ಣನವರಿಗೆ ಇಂಥ ಹತ್ತಾರು ದೂರುಗಳು ಪ್ರತಿನಿತ್ಯ ಬರತೊಡಗಿದವು. ಅವರಾದರೂ ಏನು ಮಾಡಲು ಸಾಧ್ಯ? ತಮ್ಮಿಂದ ಆಗಬಹುದಾದ ಸಹಾಯವನ್ನು ಅವರಾಗಲೇ ನೀಡುತ್ತಿದ್ದರು. ಇನ್ನು ನೀಡುವುದೆಂದರೆ ಆಗುವ ಮಾತೇ? ಎಲ್ಲರನ್ನೂ ಕಾಪಾಡಲು ಅವರೇನು ಶಿವನೇ ಆಗಿಹೋದರೇನು?

ಕೆಲವರು ಮೇಲುವರ್ಗಗಳವರಿಗೆ ಮಾಡುತ್ತಿದ್ದ ಸೇವೆಗಳನ್ನು ಮಾಡುವುದನ್ನು ನಿಲ್ಲಿಸಿದರು. ಬಟ್ಟೆ ತೊಳೆಯುವವನು ಬಾರದೇ ತಾವೇ ಕೆರೆಗೋ ಕೊಳಕ್ಕೋ ಹೋಗಿ ಬಟ್ಟೆ ಒಗೆಯುವ ಕೆಲಸ ಮಾಡಬೇಕಾಯಿತು. ಚಪ್ಪಲಿ ಮಾಡುವವನು ಹಾಗೆ ಮಾಡಲು ನಿರಾಕರಿಸಿದರೆ ಬರಿಗಾಲಲ್ಲಿ ನಡೆಯಬೇಕಾಗುವುದು. ಇದುರೆಗೂ ಯಾವುದೋ ಒಂದು ನಿಯಮಕ್ಕೆ ಒಳಗಾದಂತೆ ಇವೆಲ್ಲ ನಡೆಯುತ್ತಿದ್ದವು. ಈಗ ಶರಣ ಸಂಕುಲದಲ್ಲಿನ ಸಮತೋಲ ಏರುಪೇರಾಯಿತು. ನೂರಾರು ಹಕ್ಕಿಗಳು ಒಂದು ಮರದ ಮೇಲೆ ವಾಸಮಾಡುತ್ತಿರುವಾಗ ಹಾವು ಕಾಣಿಸಿಕೊಂಡರೆ ಎಲ್ಲ ಚೆಲ್ಲಾಪಿಲ್ಲಿ; ಕಾತರ, ಕಳವಳ.

ಬರುಬರುತ್ತ ಕಲ್ಯಾಣದ ಬೀದಿಗಳಲ್ಲಿ ರಾಜಭಟರೇ ಹೆಚ್ಚಾಗಿ ಸುಳಿಯುವಂತಾಯಿತು. ಎಲ್ಲಿ ಯಾವಾಗ ಏನು ಗಲಭೆಯಾದೀತೋ ಎಂಬ ಸಂದೇಹದಿಂದ ಮೈಯೆಲ್ಲ ಕಣ್ಣಾಗಿ ಸುಳಿದಾಡುತ್ತಿದ್ದರು. ಪುಟ್ಟ ಕಾರಣದಿಂದ ಆರಂಭವಾದ ವ್ಯಾಜ್ಯ ದೊಡ್ಡದಾಗಿ ಬೆಳೆದುಬಿಡುವುದು. ಇದಕ್ಕಾಗಿ ಅವರು ಮೈಯೆಲ್ಲ ಕಣ್ಣಾಗಿರುತ್ತಿದ್ದರು. ವಿವಿಧ ಮಾರುವೇಷಗಳಲ್ಲಿದ್ದ ಬೇಹುಗಾರರೂ ನಗರದ ಎಲ್ಲೆಡೆ ಸುಳಿಯುತ್ತಿದ್ದರು, ಅವರಾರೆಂದು ಸಾಮಾನ್ಯ ಜನಕ್ಕೆ ತಿಳಿಯದು. ಆದರೆ ಜನ ಸೇರಿದಾಗ ಏನು ಮಾತನಾಡಿಕೊಳ್ಳುತ್ತಾರೆ, ಅವರ ಮಾತಿನ ಧಾಟಿಯೇನು ಎಂಬುದನ್ನೆಲ್ಲ ಅವರು ಗಮನಿಸುತ್ತಿದ್ದರು. ಹೀಗೆ ಕಲ್ಯಾಣ ದಿನೇ ದಿನೇ ವ್ಯಾಕುಲಗೊಳ್ಳತೊಡಗಿತು. ಹೊರನೋಟಕ್ಕೆ ಅಷ್ಟೇನೂ ವ್ಯತ್ಯಾಸ ಕಾಣದಿದ್ದರೂ ಊರು ಉಬ್ಬಸಪಡುತ್ತಿರುವುದು ಸ್ಪಷ್ಟವಾಗಿತ್ತು.

## ೧೪

ನಾಗಕ್ಕನೊಡನೆ ಬಾಗೇವಾಡಿ ಬಿಟ್ಟವನು ದೂರ ಹೋಗಬೇಕೆಂದು ನಿರ್ಧರಿಸಿದ್ದೆ. ಸಾಕು, ಈ ವೇದಭಾರಭರಾಕ್ರಾಂತರ ಸಹವಾಸ. ದೊಡ್ಡ ತತ್ವದ ಮಾತುಗಳನ್ನಾಡುತ್ತಾರೆ, ಆದರೆ ನಿಜ ಜೀವನದಲ್ಲಿ ಉದಾತ್ತತೆಯನ್ನು ತೋರಿಸುವ ಹಿರಿಯ ಮನಸ್ಸಿಲ್ಲ. ಎಲ್ಲದಕ್ಕೂ ಶಾಸ್ತ್ರ–ಸಂಪ್ರದಾಯ–ನಿಯಮಗಳೇ. ಜೀವನದಲ್ಲಿ ಬೇಕಾದದ್ದು ಯಾವುದು: ಇವೋ, ಸಹಾನುಭೂತಿ–ಅನುಕಂಪಗಳಂತಹ ಮಾನವೀಯ ಗುಣಗಳೋ? ಯಾರಾದರೂ ಒಂದು ತಪ್ಪು ಮಾಡಿದರೆ ಆಳಿಗೊಂದು ಕಲ್ಲು ಎಂಬಂತೆ ಆಡುತ್ತಾರಲ್ಲ. ವಿಶ್ವೇಶ್ವರ ಮಾಮ ನಮ್ಮ ಸಹಾಯಕ್ಕೆ ಬಂದಾರೆಂದು ನಿರೀಕ್ಷಿಸಿದ್ದೆ. ಆದರೆ ಅದು ಸುಳ್ಳಾಯಿತು. ಅವರೂ ಆ ಅಗ್ರಹಾರವೆಂಬ ವ್ಯವಸ್ಥೆಯ ಒಂದು ಭಾಗವೇ ತಾನೇ, ಅಲ್ಲದೆ, ಅವರು ಹೇಳಿದ್ದರೆ ಕೇಳುತ್ತಿದ್ದರೇ ಇತರ ಕಿರಾತರು?

ದೊಡ್ಡವರಾರಾದರೂ ಏನಾದರೂ ಮಾಡಿದರೆ ಕತೆ ಕಟ್ಟುತ್ತಾರೆ, ಪುರಾಣ ಹೆಣೆಯುತ್ತಾರೆ, ಅವರು ಮಾಡಿದುದೇ ಲೋಕೋತ್ತರವಾದ ಶ್ರೇಯಸ್ಕರ ಕಾರ್ಯವೆಂದು ಹೊಗಳುತ್ತಾರೆ. ಒಂದು ಕಡೆ ಸತ್ಯಕಾಮನ ಕತೆ ಹೇಳುವುದು, ಇನ್ನೊಂದು ಕಡೆ ತಾವೇ ಸತ್ಯದೂರರಾಗುವುದು. ನಮ್ಮ ಪುರಾಣ ಪುಣ್ಯಕತೆಗಳಲ್ಲಿನ ಋಷಿಮುನಿಗಳ ಕತೆಗಳೇ ಇವೆಯಲ್ಲ. ಅದಕ್ಕೇ ಋಷಿ ಮೂಲ ನೋಡಬಾರದು ಎನ್ನುತ್ತಾರೆ. ಪ್ರಾಯಶಃ ಯಾರ ಮೂಲವನ್ನೂ ನೋಡಬಾರದೇನೋ. ಏಕೆಂದರೆ ಎಲ್ಲರ ಮೂಲವಿರುವುದೆ ಒಂದೇ ಕಡೆ, ಕರ್ಣದಲ್ಲಿ ಜನಿಸಿದವರುಂಟೆ? ಆದರೆ ಅಯೋನಿಜೆ, ದ್ರೋಣಜ, ಕುಂಭಜ – ಇತ್ಯಾದಿ ಏನೇನೋ ಹೆಸರುಗಳನ್ನಿಟ್ಟು ಸತ್ಯ ಮರೆಮಾಚುವುದು; ಸತ್ಯಂವದ ಧರ್ಮಂಚರ ಎಂದು ಒದರಿಕೊಳ್ಳುವುದು.

ಎಲ್ಲಿಗೆಂದು ಹೋಗುವುದು? ಗೊತ್ತಿಲ್ಲ, ಗುರಿಯಿಲ್ಲ. ಹೊಟ್ಟೆಗೆ ಏನು ಮಾಡುವುದು ? ಏನೋ ಅಕ್ಕನ ಬಳಿಯಿದ್ದ ಬಳೆಗಳು ಬೆಂಡೋಲೆಗಳು ನಮ್ಮ ಸಹಾಯಕ್ಕೆ ಬಂದವು. ಮನೆಯಲ್ಲಿ ಇನ್ನಷ್ಟು ಒಡವೆಗಳಿದ್ದವೇನೋ, ಅವನ್ನು ತಂದಿದ್ದರೆ ಒಂದಷ್ಟು ಹೊಟ್ಟೆ ಹೊರೆಯಲು ಸಾಕಾಗುತ್ತಿತ್ತು. ಅವನ್ನು ತರಲು ಅಗ್ರಹಾರ ಗೃಧ್ರಗಳು ಅವಕಾಶ ಕೊಡುತ್ತಿದ್ದರೆಂಬುದಕ್ಕೆ ಖಾತರಿಯೇನು? ಇಷ್ಟನ್ನೂ ಯಾರೂ ಗಮನಿಸಲಿಲ್ಲವೇನೋ ಅಥವಾ ಆ ಕ್ಷಣಕ್ಕೆ ಅವರಿಗೆ ಹೊಳೆಯಲಿಲ್ಲವೆಂದು ಕಾಣುತ್ತದೆ. ಮನೆ, ಹೊಲಗಳು ಏನು ಗತಿಯಾಗುತ್ತವೋ.

ಅಪುತ್ರಕನ ಆಸ್ತಿ ರಾಜನಿಗೆ ಸೇರಬೇಕೆಂದು ಶಾಸ್ತ್ರಗಳು ಹೇಳುತ್ತವಂತೆ. ಅಗ್ರಹಾರದಲ್ಲಿನ ಆಸ್ತಿಯೆಲ್ಲದರ ಉತ್ಪತ್ತಿ ಅಲ್ಲಿನ ಮಹಾಜನರದೇ ತಾನೇ. ಹೀಗಾಗಿ ನಮ್ಮ ಆಸ್ತಿಯನ್ನು ಊರಿನ ಆಸ್ತಿಯೆಂದು ಭಾವಿಸುತ್ತಾರೇನೋ.

ಛೇ, ಅವೆಲ್ಲ ಯೋಚನೆಗಳು ಈಗೇಕೆ. ಹಂಗುದೊರೆದುಕೊಂಡು ಬಂದಮೇಲೆ ಅಲ್ಲಿ ಏನಾದರೂ ಹಾಳಾಗಲಿ ನಮಗೇನು? ಆದರೆ ನಮ್ಮ ಮುಂದಿನ ಬದುಕಿನ ಸಮಸ್ಯೆಯೊಂದಿದೆಯಲ್ಲ! ಯಾರು ನೋಡಿದರೂ "ಯಾವ ಊರಿನವರು?" ಎಂದು ಕೇಳುವವರೇ. ಬಾಗೇವಾಡಿಯವರೆಂದರೆ ಯಾಕೆ ಬಂದಿರಿ ಎನ್ನುತ್ತಾರೆ. ಯಾರೂ ದಿಕ್ಕಿಲ್ಲವೇ ಎನ್ನುತ್ತಾರೆ. ಆ ಊರಲ್ಲಿ ಎರಡು ತುತ್ತು ಕೂಳು ಸಿಕ್ಕಲಿಲ್ಲವೇ, ಅಲ್ಲೇ ಇರಬಹುದಾಗಿತ್ತು ಎನ್ನುತ್ತಾರೆ. ನೀನು ವಿದ್ಯೆ ಕಲಿತವನಂತೆ ಕಾಣುತ್ತೀಯೇ, ಈಯಮ್ಮ ಕೆಲಸ ಮಾಡಲಾರಳೇ, ಹೀಗೆ ಊರೂರು ಅಲೆಯುತ್ತಿದ್ದೀರಿ ಎಂದು ಕೇಳುತ್ತಾರೆ. ಅದಕ್ಕೇ ಯಾವ ಪ್ರಶ್ನೆಗೂ ನೇರ ಉತ್ತರವನ್ನು ಕೊಡುವುದನ್ನೇ ಬಿಟ್ಟುಬಿಟ್ಟೆ. ಜೊತೆಯ ಜನರು ಮಾತಾಡಿಕೊಳ್ಳುತ್ತಿರುವಾಗ ಕಿವಿಗೆ ಬಿದ್ದ ಊರ ಹೆಸರುಗಳನ್ನು ನೆನಪಿನಲ್ಲಿಟ್ಟುಕೊಂಡು, ಮುಂದೆ ಯಾರಾದರೂ ಸಿಕ್ಕಿದರೆ ಆ ಊರಿಗೆ ಎನ್ನುತ್ತಿದ್ದೆ. ಆದರೆ ಅದರಿಂದ ಎಷ್ಟೋ ಸಲ ಪೆಚ್ಚಾಗುವ ಪ್ರಸಂಗಗಳೂ ಬಂದವು. ಊರ ಹೆಸರು ಕೇಳಿದರೆ ಯಾರ ಮನೆಗೆ ಎನ್ನುತ್ತಿದ್ದರು, ಹೇಳಲು ಉತ್ತರವೆಲ್ಲಿದೆ? ಕಕ್ಕಾವಿಕ್ಕಿಯಾಗಬೇಕಷ್ಟೆ.

ಸಾಕು, ಈ ದಿಕ್ಕಿಲ್ಲದ ಸಂಚಾರ ಎನ್ನಿಸಿತ್ತು. ನಾಗಕ್ಕ ಇನ್ನೂ ಮೌನಿಯೇ. ನೇರವಾದ ಮಾತುಗಳಿಗೆ ಒಂದೆರಡು ಪದಗಳ ಉತ್ತರ. ಅಗ್ರಹಾರದ ಮಾತು ಬಂದರೆ ಎಲ್ಲೋ ನೋಡುವಳು, ಮಹಾಜನಗಳ ಹೆಸರೆತ್ತಿದರೆ ಬಿಕ್ಕುವಳು. ಏನೂ ಮಾತನಾಡದ ಅಕ್ಕನ ಬಗ್ಗೆ ಕೆಲವೇಳೆ ಕೋಪಬರುತ್ತಿತ್ತು. ಆದರೆ ಅವಳು ನನ್ನ ಬಗ್ಗೆ ತೋರಿಸುತ್ತಿದ್ದ ಅಕರಾಸ್ತೆಯನ್ನು ನೆನೆದರೆ ನನಗೂ ಅಯ್ಯೋ ಎನ್ನಿಸುವುದು.

ಹೋದೆಡೆಯಲ್ಲೆಲ್ಲ ಎಲ್ಲೋ ಒಂದಷ್ಟು ಆಹಾರ. ವ್ರತಗಳು, ಸಂತರ್ಪಣೆಗಳಿದ್ದ ಕಡೆ ಹೇಗೋ ನಡೆಯುತ್ತಿತ್ತು. ಇಲ್ಲದೆಡೆ ಅಕ್ಕನ ಬಳೆಗಳನ್ನು ಮಾರಿದ್ದರಿಂದ ಬಂದ ದ್ರವ್ಯದಲ್ಲಿ ಏನಾದರೂ ಕೊಂಡುಕೊಳ್ಳುತ್ತಿದ್ದೆವು. ಒಂದೇ ಕಡೆ ಹೆಚ್ಚು ಕಾಲ ನಿಲ್ಲಲು ಸಾಧ್ಯವಾಗುತ್ತಿರಲಿಲ್ಲ. ಪ್ರಶ್ನೆಗಳ ಸುರಿಮಳೆಯಾಗುತ್ತಿತ್ತು. ಮುಜುಗರವುಂಟುಮಾಡುವ ನೋಟಗಳು. ಅಲ್ಲದೆ ಆದಷ್ಟೂ ದೂರ ಹೋಗಿಬಿಡಬೇಕೆಂಬುದರಿಂದಾಗಿ ಮುಂದು ಮುಂದಕ್ಕೆ ಪ್ರಯಾಣ.

ಹೀಗೆ ಮುಂದುವರೆಯುತ್ತಿರಬೇಕಾದರೆ ಸಂಗಮೇಶ್ವರ ದೇವರ ಜಾತ್ರೆ ನಡೆಯುತ್ತಿದೆಯೆಂಬ ವಿಷಯ ತಿಳಿಯಿತು. ದೂರದ ಬಾಗೇವಾಡಿಯವರೆಗೂ ಕಪ್ಪಡಿ ಸಂಗಮದ ಹೆಸರು ಹರಡಿತ್ತು. ನೂರಾರು ಹರದಾರಿಗಳಿಂದ ಅಲ್ಲಿಗೆ ಹೋಗಿ ಸಂಗಮದಲ್ಲಿ ಮಿಂದು ಪುನೀತರಾಗುವ ಜನರೆಷ್ಟೋ. ಸಾವಿರಾರು ವರ್ಷಗಳಷ್ಟು ಹಳೆಯದಾದ ದೇವಸ್ಥಾನವಂತೆ ಅದು. ಕೃಷ್ಣೆ–ಮಲಪ್ರಹರಿಗಳು ಸೇರುವ ಕಡೆ ಮಂಟಪವಿದೆಯಂತೆ. ಅದರ ಬಳಿ ನಿಂತು ಸಾಧನೆ ಮಾಡಲು ನೂರಾರು ಮಂದಿ ಸಾಧುಸನ್ಯಾಸಿಗಳು ಅಲ್ಲಿಗೆ ಹೋಗುತ್ತಾರಂತೆ.

ಆ ದೇವಸ್ಥಾನಕ್ಕೆ ಅಂಟಿಕೊಂಡಂತೆ ಮಠವೊಂದು ಇದೆಯೆಂದು ಕೇಳಿದ್ದೆ. ಎಷ್ಟೋ ವೇಳೆ ಬಾಗೇವಾಡಿ ಅಗ್ರಹಾರದಲ್ಲಿ ವಾಕ್ಯಾರ್ಥ ಸಮ್ಮೇಳನಗಳು ನಡೆಯುತ್ತಿದ್ದವು. ಬೇರೆ ಬೇರೆ ಕಡೆಗಳಿಂದ ಬಂದ ವಿದ್ವಾಂಸರು ಒಂದು ಹೇಳಿಕೆಯ ಮೇಲೆ ವ್ಯಾಖ್ಯಾನ ಮಾಡುತ್ತಿದ್ದರು. ಆಗ ಕೆಲವೊಮ್ಮೆ ಈ ಭಾಗದಿಂದ ಬಂದ ವಿದ್ವಾಂಸರು ಭಾಗವಹಿಸುತ್ತಿದ್ದ ನೆನಪಿದೆ.

ಕೂಡಲ ಸಂಗಮಕ್ಕೆ ಯಾಕೆ ಹೋಗಿರಬಾರದು ಎನ್ನಿಸಿತು. ಬಾಗೇವಾಡಿಗೆ ದೂರದ ಊರು. ಯಾವ ಉಸಾಬರಿಯಿರುವುದಿಲ್ಲ, ಅಲ್ಲಿರುವುದು ಶೈವಮಠವಂತೆ. ಈ ಅಗ್ರಹಾರಗಳಂತೆ ಅವು ನೈಷ್ಠುರ್ಯದ ಕೂಪಗಳಲ್ಲವೆಂಬುದು ಎಲ್ಲರಿಗೂ ಗೊತ್ತಿದೆ. ಜಾತಿಗೆ ಹೆಚ್ಚು ಪ್ರಾಮುಖ್ಯವಿರದುದರಿಂದ ನಿಮ್ಮ ಜಾತಿ ಏನು, ಏಕೆ ಬಂದಿರಿ ಎಂಬ ಕೆದಕುವ ಪ್ರಶ್ನೆಗಳನ್ನು ಅಲ್ಲಿ ಕೇಳಲಾರರೇನೋ. ಏನಾದರಾಗಲಿ ಅಲ್ಲಿಗೆ ಹೋಗಿ ನೋಡುವುದು. ಬದುಕಲು ಒಂದು ನೆಲೆ ಸಿಕ್ಕಿದರೂ ಸಿಕ್ಕಬಹುದು ಎಂಬ ಆಸೆ ಮೂಡಿತು. ಜೊತೆಗೆ ಎಲ್ಲಿಗೆ ಹೊರಟಿರಿ ಎಂದರೆ ಇಂಥ ಕಡೆಗೆ ಎಂದು ಹೇಳಲು ಒಂದು ಖಚಿತವಾದ ಉತ್ತರ ಸಿಕ್ಕಿದಂತಾಯಿತು. ಹೀಗಾಗಿ ಕೂಡಲ ಸಂಗಮದ ದಾರಿ ಹಿಡಿದೆವು. ಅಕ್ಕನಿಗಂತೂ ಯಾವದೂ ಗುರಿಯಿಲ್ಲ. ಅವಳ ಮನಸ್ಸಿನಲ್ಲಿ ಏನಿದೆಯೆಂಬುದೇ ಅರ್ಥವಾಗದು. ಎಲ್ಲವನ್ನೂ ಹೊಟ್ಟೆಯಲ್ಲಿಟ್ಟುಕೊಂಡು ಅನುಭವಿಸುತ್ತಿದ್ದಾಳೆ. ಹೊರಚೆಲ್ಲಿದರೆ ಅವಳ ನೋವು ಕಡಿಮೆಯಾದೀತು. ಏನಾದರೂ ಹೇಳಿದರೆ ಅಳುತ್ತಾಳೆ, ನಿಟ್ಟುಸಿರು ಬಿಡುತ್ತಾಳೆ, ಉತ್ತರಿಸುವುದಿಲ್ಲ. ಮತ್ತೂ ಏನಾದರೂ ಪ್ರಶ್ನಿಸಿದರೆ, 'ಬಸವರಾಜ, ನನ್ನಿಂದ ನಿನಗೆ ತೊಂದರೆ, ನಾನೆಲ್ಲಿಯಾದರೂ ಹೋಗಿ ಸಾಯುತ್ತೇನೆ. ನೀನು ಬಾಗೇವಾಡಿಗೆ ಹೋಗು ಅಕ್ಕನನ್ನು ತೊರೆದು ಬಂದೆ ಎಂದರೆ ನಿನಗೆ ಅಲ್ಲಿ ಪ್ರವೇಶ ಸಿಕ್ಕಬಹುದು' ಎಂದು ಬಿಕ್ಕುತ್ತಾಳೆ. ಅವಳನ್ನು ಬಿಟ್ಟು ಹೋಗಲು ಸಾಧ್ಯವೇ. ಅಗ್ರಹಾರದ ಕಟುಕತನ ನನ್ನಲ್ಲೂ ಇದೆಯೇ? ಇಲ್ಲ ಇಲ್ಲ ಇನ್ನೆಂದೂ ನಾಗಕ್ಕನನ್ನು ಪ್ರಶ್ನಿಸಬಾರದು.

ದಾರಿಯಗುಂಟ ನಡೆಯುತ್ತ, ಸಿಕ್ಕಿದರೆ ಯಾವುದಾದರೂ ಚಕ್ಕಡಿ ಹತ್ತಿ ಕುಳಿತು, ಅಂತೂ ಕಪ್ಪಡಿ ಸಂಗಮಕ್ಕೆ ಬಂದು ಮುಟ್ಟಿದೆವು. ನಾವು ಅಲ್ಲಿಗೆ ಬಂದಾಗ ಆಗಲೇ ಸಂಜೆ, ಸೂರ್ಯ ಮುಳುಗಲು ಇನ್ನೂ ಒಂದಷ್ಟು ಹೊತ್ತು ಇತ್ತು. ಜನಗಳೆಲ್ಲ ಬಹುಮಂದಿ ಸೇರಿದಂತಿತ್ತು. ಜಾತ್ರೆ ಇನ್ನು ಒಂದೆರಡು ದಿನ. ಅಲ್ಲಿಯವರೆಗೂ ಹೇಗೋ ಕಾಲಹಾಕಿದರಾಯಿತು. ಆನಂತರ ಹೋಗಿ ಮಠದ ಸ್ಥಾನಪತಿಗಳ ಬಳಿ ಹೋಗಿ ಅರಿಕೆ ಮಾಡಿಕೊಳ್ಳಬೇಕೆಂದು ನಿಶ್ಚಿಯಿಸಿದೆ.

ಜಾತ್ರೆಯ ಜಂಗುಳಿ ಹರಿದು ಒಂದೆರಡು ದಿನಗಳಾದವು. ವಾತಾವರಣ ಪ್ರಸನ್ನವಾಯಿತು. ಗಿಜಿಬಿಜಿ ಇಲ್ಲ. ಆದರೂ ಅಲ್ಲಿ ಸಾಧುಗಳ ತಂಡವನ್ನೇ ಕಾಣಬಹುದು. ಕಪ್ಪಡಿ ಸಂಗಮ ಎಂದೂ ಅದಕ್ಕೆ ಹೆಸರಂತೆ. ಕಪ್ಪಡಿ ಎಂದರೆ ಕರ್ಪಟಿ. ಚಿಂದಿ ಬಟ್ಟೆಯುಟ್ಟ ಸಾಧು, ಸಾಧಕ, ಅಂಥವರು ಅಲ್ಲಿಗೆ ಬಂದು ಸಾಧನೆ ಮಾಡುತ್ತಿದ್ದುದರಿಂದಲೇ ಸಂಗಮಕ್ಕೆ ಆ ಹೆಸರೂ ಬಂದಿದೆಯಂತೆ.

ಮಠದ ಅಧಿಕಾರಿಗಳ ಬಳಿ ಹೋಗಿ ನಾವು ಪರದೇಸಿಗಳು ಆಶ್ರಯ ನೀಡಿ ಎಂದು ಕೇಳಿಕೊಂಡಿದ್ದೆವು. ಹೀಗಾಗಿ ಇರಲು ಮಠದಲ್ಲಿ ಒಂದೆಡೆ ಜಾಗ ದೊರಕಿತ್ತು. ಊಟವೂ ಅಲ್ಲೇ ದೊರೆಯುತ್ತಿತ್ತಲ್ಲ. ಆದರೆ ಎಷ್ಟು ದಿನಗಳೆಂದು ನಮಗೆ ಅಲ್ಲಿ ಅವಕಾಶ ನೀಡುತ್ತಾರೆ. ಆಯಿತು, ನೀವಿನ್ನು ಹೋಗಿ ಎಂಬ ಮಾತು ಬರುವ ಮುಂಚೆಯೇ ಏನಾದರೂ ಏರ್ಪಾಟು ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ.

ಒಂದು ಗುರುವಾರ ಬೆಳಿಗ್ಗೆಯೇ ಎದ್ದು ಸಂಗಮಕ್ಕೆ ಹೋಗಿ ಜಳಕ ಮಾಡಿದೆ. ಅಲ್ಲಿರುವವರೆಲ್ಲ ಅಲ್ಲೇ ಜಳಕಕ್ಕೆ ಬರುವವರು. ನಾವು ಹೋದದ್ದು ಭಾದ್ರಪದ ಮಾಸದ ಕಾಲ. ಮಳೆ ನಿಂತಿತ್ತು, ಬಿಸಿಲೂ ಹೆಚ್ಚಾಗಿರಲಿಲ್ಲ. ನದಿಯಲ್ಲಿ ಯಥೇಚ್ಛವಾಗಿ ನೀರು. ಕಣ್ಣು ಹಾಯಿಸಿದಷ್ಟೂ ಕಾಣುವ ನೀರಿನ ಹಾಳೆ. ಹೊರಗೆ ಚಳಿಯಿದ್ದರೆ ನೀರಿಗಿಳಿದರೆ ಬೆಚ್ಚಗಿರುವುದು; ಹೊರಗೆ ಶೆಕೆಯಿದ್ದರೆ ನೀರು ತಣ್ಣಗೆ ಆಹ್ಲಾದಕರವಾಗಿರುವುದು. ಎಷ್ಟು ಹೊತ್ತು ಇದ್ದರೂ ಬೇಸರವೆನಿಸದ ನೀರು. ತಾಯಿಯ ಮಡಿಲಲ್ಲಿ ಆಟವಾಡುವ ಮಕ್ಕಳಂತೆ ನೂರಾರು ಮಂದಿ ಅಲ್ಲಿ ನಾನಾ ಕಾರ್ಯಗಳಲ್ಲಿ ತೊಡಗಿರುವುದನ್ನು ಕಾಣಬಹುದು. ಎಲ್ಲರನ್ನೂ ತನ್ನ ಮಡಿಲಿಗೆ ಹಾಕಿಕೊಳ್ಳುವ ತಾಯಿ ಕೃಷ್ಣೆ. ಎಷ್ಟೋ ಸಲ ಜೀವನದಲ್ಲಿ ದಾರಿತಪ್ಪಿದವರು, ದುಃಖಕ್ಕೆ ಈಡಾದವರು ಬೇರೆ ದಿಕ್ಕು ತೋಚದಾದಾಗ ಕೃಷ್ಣೆಯ ಒಡಲಿಗೆ ಹಾರಿಕೊಳ್ಳುತ್ತಾರಂತೆ. ಇಲ್ಲಿಗೆ ಬಂದ ಈ ಕೆಲವು ದಿನಗಳಲ್ಲಿಯೇ ನದಿಯಲ್ಲಿ ಕೊಚ್ಚಿ ಬಂದ ಹೆಣಗಳು ಎಷ್ಟೋ ಕಣ್ಣಿಗೆ ಬಿದ್ದಿವೆ. ಹೀಗನ್ನಿಸಿದಾಗ ಎದೆ ಧಸಕ್ಕೆನ್ನುವುದು. ಮಾಡುವ ಕೆಲಸವನ್ನು ಬಿಟ್ಟು, ಈಜೋ ಬಟ್ಟೆ ಒಗೆಯುವುದೋ ಸಂಧ್ಯಾವಂದನೆಯೋ, ಮಠಕ್ಕೇ ಹೋಗಿ ಅಕ್ಕನನ್ನು ಕಾಣುವ ಮನಸ್ಸಾಗುತ್ತಿತ್ತು. ಅವಳು ಎಂದಿನಂತೆ ಇರುವುದನ್ನು ಕಂಡು ಮನಸ್ಸಿಗೆ ಎಷ್ಟೋ ನೆಮ್ಮದಿ. ಆದರೂ ಅವಳನ್ನು ಸದಾ ಎಚ್ಚರದಿಂದ ಕಾಯುತ್ತಿದ್ದೆ. ಅವಳಲ್ಲಿ ಆಗುತ್ತಿದ್ದ ಸೂಕ್ಷ್ಮ ವ್ಯತ್ಯಾಸವನ್ನು ಗಮನಿಸುತ್ತಿದ್ದೆ.

ಅಂದು ಬೆಳಿಗ್ಗೆ ಜಳಕ ಇತ್ಯಾದಿ ಕಾರ್ಯಗಳನ್ನು ಬೇಗ ಮುಗಿಸಿದೆ. ಮುಂಜಿಯಾದ ಕಾಲದಿಂದ ಅಂಟಿಕೊಂಡು ಬಂದ ಸಂಧ್ಯಾವಂದನೆಯನ್ನೂ ಆಗ ಮಾಡುತ್ತಿದ್ದೆ. ಎಳೆಯ ವಯಸ್ಸಲ್ಲವೇ? ಹಿರಿಯರು ಹೇಳುತ್ತಿದ್ದ ಮಾತಿನಲ್ಲಿನ್ನೂ ನಂಬಿಕೆಯಿತ್ತು. ಗಾಯತ್ರಿಯ ಮಹಿಮೆಯನ್ನು ಎಷ್ಟು ಜನ ಎಷ್ಟು ರೀತಿಯಲ್ಲಿ ವಿವರಿಸಿದ್ದರು. ತಾನು ಅಗ್ರಹಾರದಲ್ಲಿದ್ದಾಗ ವಿಶ್ವಾಮಿತ್ರ ಋಷಿ ಗಾಯತ್ರಿಯನ್ನು ಒಲಿಸಿಕೊಂಡ ಕತೆ ಕೇಳಿದ್ದೆ. ಆ ಮಂತ್ರ ಅವನೇ ಅಲ್ಲವೇ ರಚಿಸಿದುದು. ಕ್ಷತ್ರಿಯನಾಗಿ ಹುಟ್ಟಿದ್ದರೂ ಬ್ರಾಹ್ಮಣ್ಯವನ್ನು ಸಂಪಾದಿಸಿಕೊಂಡ ಕತೆಯನ್ನು ಎಷ್ಟೋ ಕಡೆ ಕೇಳಿದ್ದೆ. ಆದರೂ ಈ ಅಗ್ರಹಾರದ ಜನ ತಾವೇ ಬ್ರಾಹ್ಮಣರೆಂದು ಕರೆದುಕೊಳ್ಳುವರಲ್ಲ. ಬ್ರಾಹ್ಮಣ್ಯದ ಜ್ಞಾನಶಕ್ತಿಯ ಅಧಿಷ್ಠಾತ್ರದೇವತೆ ಗಾಯತ್ರಿ; ಅವಳನ್ನು ಒಲಿಸಿಕೊಂಡದ್ದು ಒಬ್ಬ ಕ್ಷತ್ರಿಯ. ಈ ಕತೆಗಳಿಗೇನು ತರ್ಕವಿಲ್ಲವೇ? ಎಲ್ಲಕ್ಕೂ ಎಲ್ಲೋ ಹೋಗಿ ಸೇರಿಬಿಡುವ ಪರಿಪಾಠದ ಕತೆಗಳು! ಈಗ

ಹಾಗನ್ನಿಸಿದರೇನು, ಆಗ ತುಂಬ ಶ್ರದ್ಧೆಯಿಂದಲೇ ಗಾಯತ್ರಿ ಜಪವನ್ನು ಮಾಡುತ್ತಿದ್ದೆ. ಸಂಧ್ಯಾವಂದನೆಯ ಕಾಲದಲ್ಲಿ ಎಷ್ಟೆಷ್ಟು ಹೆಚ್ಚು ಗಾಯತ್ರೀಜಪವನ್ನು ಮಾಡಿದರೆ ಅಷ್ಟು ಪುಣ್ಯವೆಂದು ಹೇಳಿದ್ದರು ಹಿರಿಯರು, ನಾನು ನಂಬಿದ್ದೆ. ವಿಶ್ವೇಶ್ವರ ಸೋಮಯಾಜಿಗಳು ನನಗೆ ಮಂತ್ರವನ್ನು ಉಪದೇಶಿಸಿದ್ದರಲ್ಲವೇ? ಆಮೇಲೆ ಎಷ್ಟೋ ಕಾಲ ಅವರ ಮನೆಯಲ್ಲಿ ಅವರ ಜೊತೆಯಲ್ಲಿ ಕುಳಿತು ಸಂಧ್ಯಾವಂದನೆ ಮಾಡುತ್ತಿದ್ದೆ. ಹೇಳುವ ಮಂತ್ರಕ್ಕೆ ಅನುಗುಣವಾದ ತಂತ್ರಗಳನ್ನು ಕರನ್ಯಾಸದ ಮೂಲಕ ಮಾಡುವುದನ್ನು ಕಲಿಸಿದ್ದರು. ತರ್ಜನಿ ನಡುಬೆರಳು ಹೆಬ್ಬೆಟ್ಟುಗಳನ್ನು ಮೂಗಿನ ತುದಿಗೆ ಮುಟ್ಟಿಸಿ ಕಣ್ಮುಚ್ಚಿ ಗಾಯತ್ರಿ ಮಂತ್ರವನ್ನು ಪಠಿಸಬೇಕಂತೆ. ನಾನೂ ದೊಡ್ಡದನ್ನು ಸಾಧಿಸಬೇಕೆಂಬ ಹುಮ್ಮಸ್ಸು ಆಗ. ಹಾಗಾಗಿ ನಿಷ್ಠೆಯಿಂದಲೇ ಜಪವನ್ನು ಮಾಡುತ್ತಿದ್ದೆ, ಜಪಮಾಡುವಾಗೆಲ್ಲ ಮನಸ್ಸನ್ನು ಒಂದೆಡೆ ನಿಲ್ಲಿಸಬೇಕು. ಅದಕ್ಕೆ ಪ್ರಯತ್ನಿಸುತ್ತಲೂ ಇದ್ದೆ; ಆದರೆ ಯಾವ ಮಾಯದಲ್ಲಿಯೋ ಮನಸ್ಸು ಇನ್ನೇನನ್ನೋ ಯೋಚಿಸುತ್ತಿತ್ತು, ಬಾಯಲ್ಲಿ ಮಾತ್ರ ತತ್ಸವಿತುರ್ವರೇಣ್ಯಂ.... ಉಚ್ಚಾರವಾಗುತ್ತಲೇ ಇತ್ತು, ಕೆಲವು ವೇಳೆ ತುಂಬ ದೀರ್ಘಕಾಲ ಮಂತ್ರೋಚ್ಚಾರಣೆ ಮಾಡುತ್ತಿದ್ದೆ. ಅಭ್ಯಾಸಬಿಟ್ಟಿರಲಿಲ್ಲ. ಅಗ್ರಹಾರದ ಜನರ ಮೇಲೆ ಕ್ರೋಧವಿದ್ದರೂ, ಗಾಯತ್ರಿಯ ಮೇಲೇಕೆ ಕ್ರೋಧವುಂಟಾಗಬೇಕು! ಇದು ನನ್ನ ದಾರಿಯಲ್ಲ ಎಂದು ಆಗಿನ್ನೂ ನನಗೆ ಅನ್ನಿಸಿರಲಿಲ್ಲ, ನನ್ನ ದಾರಿ ಯಾವುದೆಂದು ನನಗೆ ಇನ್ನೂ ತಿಳಿದಿರಲಿಲ್ಲ. ಅದೆಷ್ಟೋ ಕಾಲವಾದ ಮೇಲಲ್ಲವೇ ನಾನು ನನ್ನದೇ ಒಂದು ಸಾಧನೆಯ ಮಾರ್ಗವನ್ನು ಕಂಡುಕೊಂಡದ್ದು?

ಸಂಧ್ಯಾವಂದನೆ ಮುಗಿಸಿ ಸಂಗಮೇಶ್ವರನ ಸುತ್ತ ಪ್ರದಕ್ಷಿಣೆಗಳನ್ನು ಹಾಕಿ ಮಠದ ಕಡೆ ಹೊರಟೆ. ನಾನವತ್ತು ಸ್ಥಾನಪತಿಗಳನ್ನು ಕಂಡು ಬದುಕುವ ಒಂದು ಮಾರ್ಗಕ್ಕಾಗಿ ಬೇಡಿಕೊಳ್ಳುತ್ತೇನೆಂದು ನಾಗಕ್ಕನಿಗೆ ಹೇಳಿಯೇ ಬಂದಿದ್ದೆ. ಅವಳಿಗೂ ಈ ಊರು ಈ ಪರಿಸರ ಇಷ್ಟವಾಗಿತ್ತು. ಜನರಾರೂ ಬೇಡವೆನಿಸಿದರೆ ನದಿದಂಡೆಯ ಮೇಲೆ ಕುಳಿತರೆ ಸಾಕು, ನೀರಿನೊಡನೆ ಮನಸ್ಸು ಸಂಭಾಷಣೆಯಲ್ಲಿ ತೊಡಗುತ್ತದೆ ಎನ್ನಿಸುತ್ತದೆ. ಯಾವುದೋ ಒಂದು ಜಾಗದಲ್ಲಿ ಕಣ್ಣು ನೆಟ್ಟರೆ ಸಾಕು ವಿವಿಧ ವಿನ್ಯಾಸದಿಂದ ಹರಿಯುವ ನೀರು ಮನಸ್ಸಿಗೆ ಮುದ ನೀಡುತ್ತದೆ. ಯಾವ ಹೊತ್ತಾದರೇನು, ಮನಸ್ಸು ಬಂದರೆ ನೀರಿಗೆ ದುಮುಕಿದರಾಯಿತು. ಅಕ್ಕನ ಜೊತೆಗೂ ನದಿಯೆಡೆಗೆ ಅನೇಕ ಸಾರಿ ಬಂದಿದ್ದೆ. ಒಂದೊಂದು ಬಾರಿ ಒಂದೊಂದು ಜಾಗದಲ್ಲಿ ನಿಂತು, ಕೂತು, ಕೃಷ್ಣೆ–ಮಲಪ್ರಹರಿಯರ ಜುಳುಜುಳು ಸಂಗೀತಕ್ಕೆ ಕಿವಿಗೊಟ್ಟು ತನ್ಮಯರಾಗಿದ್ದೆವು. ಹೆಚ್ಚು ಜನರಿಲ್ಲದ, ಇರುವ ಜನರೂ ತಮ್ಮ ಪಾಡಿಗೆ ತಾವು ನಂಬಿದ ಧ್ಯಾನ–ಸಾಧನೆಗಳಲ್ಲಿ ತೊಡಗಿರುವ, ಈ ಜಾಗ ಹಿಂದಿನ ಬದುಕನ್ನು ನೆನಪಿಸಿಕೊಳ್ಳಬಾರದೆಂದು ಬಯಸುವ ನಮ್ಮಂಥವರಿಗೆ ಅನುಕೂಲವಾದ ಜಾಗವಾಗಿತ್ತು. ಇಲ್ಲೇ ಇದ್ದುಬಿಡೋಣ ಎಂದಾಗ ಅಕ್ಕ ಮೌನಸಮ್ಮತಿಯಿತ್ತಿದ್ದಳು.

ಸ್ಥಾನಪತಿಗಳ ಜಡಾರದ ಕಡೆ ಹೋದೆ. ನಾನು ಅವರನ್ನು ಕಾಣಬೇಕೆಂದು

ಬಂದಿರುವುದಾಗಿ ಬಳಿಯಿದ್ದವರೊಡನೆ ಹೇಳಿದಾಗ ಸ್ಥಾನಪತಿಗಳು ಬಿಡಾರದಲ್ಲಿಲ್ಲವೆಂದರು. ಮಠದ ಹೂದೋಟದಲ್ಲಿ ಏನೋ ಮಾಡುತ್ತಿರಬೇಕೆಂದರು. "ಎಷ್ಟು ಹೊತ್ತಿಗೆ ಮರಳುತ್ತಾರೆ?" ಎಂದೆ, "ನೋಡಬೇಕಾದರೆ ಅಲ್ಲಿಯೇ ಹೋಗಬಹುದು. ಅವರನ್ನು ಕಾಣುವುದಕ್ಕೆ ಅಂತಹ ಕಟ್ಟಳೆಗಳೇನಿಲ್ಲ" ಎಂದು ಅವರು ಹೂದೋಟವಿದ್ದ ಕಡೆಗೆ ಕೈತೋರಿಸಿದರು.

ಸ್ಥಾನಪತಿಗಳ ಹೆಸರು ಈಶಾನ್ಯಗುರುಗಳು. ಆ ಸುತ್ತಿಗೆ ಪ್ರಖ್ಯಾತರಾದ ಸಾಧಕರು. ವಿದ್ವಾಂಸರಾಗಿ ಚರ್ಚೆ–ವ್ಯಾಖ್ಯಾನ–ವಿದ್ಯದ್ಗೋಷ್ಠಿಗಳಿಗಿಂತ ಹೆಚ್ಚಾಗಿ ವಿದ್ಯಾರ್ಥಿಗಳಿಗೆ ಪಾಠ ಹೇಳುವುದು, ತಾವೂ ಕೆಲವು ಕೈಕೆಲಸಗಳಲ್ಲಿ ನಿರತರಾಗುವುದು, ಹಲವೊಮ್ಮೆ ಧ್ಯಾನದಲ್ಲಿ ತಲ್ಲೀನರಾಗುವುದು. ಎಷ್ಟೋ ವೇಳೆ ಗುರುಗಳು ಈ ದಡದಿಂದ ಆ ದಡದವರೆಗೂ ನದಿಯಲ್ಲಿ ಈಜಿಕೊಂಡು ಹೋಗಿ ಅಲ್ಲಿನ ಏಕಾಂತ ಸ್ಥಳದಲ್ಲಿ ತಪಸ್ಸಿಗೆ ಕೂರುತ್ತಿದ್ದರಂತೆ. ಅವರ ಪೂರ್ವದ ಹೆಸರೇನೋ ತಿಳಿಯದು. ಶಿವನ ಈಶಾನಮುಖದ ಉಪಾಸಕರಾಗಿದ್ದುಕೊಂಡು ತಪಸ್ಸಿನಲ್ಲಿ ತೊಡಗಿರುವುದರಿಂದ ಅವರನ್ನು ಈಶಾನ್ಯಗುರುಗಳೆಂದೇ ಎಲ್ಲರೂ ಕರೆಯುತ್ತಾರೆ. ತೋಟದಲ್ಲಿ ಅವರನ್ನು ಕಂಡಾಗ ಇವರೇ ಗುರುಗಳಿರಬೇಕು ಎನ್ನಿಸಿತು. ಅರ್ಧ ಬಿಳಿ–ಕರಿ ಕೂದಲು, ಪೂರ್ತಿ ಗಡ್ಡದಿಂದ ತುಂಬಿದ ಅವರು ಮಂಡಿಯವರೆಗಿನ ಪಂಚೆಯುಟ್ಟಿದ್ದರು. ಮೇಲೆ ಹೊದಿವ ಉತ್ತರೀಯವನ್ನು ಸೊಂಟಕ್ಕೆ ಬಿಗಿದಿದ್ದರು. ಹಣೆ ಮೈಗಳ ಮೇಲೆ ವಿಭೂತಿಯ ಪಟ್ಟೆಗಳು. ಬಿಸಿಲೇರುತ್ತಿದ್ದುದರಿಂದಾಗಿ ಬೆವರಿನಿಂದಲೋ ಏನೋ ಅಲ್ಲಲ್ಲಿ ಅಳಿಸಿದ ವಿಭೂತಿಯ ಗೆರೆಗಳು.

ಅವರೇ ಈಶಾನ್ಯಗುರುಗಳೆಂದು ಭಾವಿಸಿ ಅವರ ಮುಂದೆ ಹೋಗಿ ದೀರ್ಘದಂಡ ಪ್ರಣಾಮ ಮಾಡಿದೆ. ಎಷ್ಟೋ ಜನರನ್ನು ಕಂಡ ಕ್ಷಣವೇ ಅವರ ಬಗ್ಗೆ ಮನಸ್ಸಿನಲ್ಲಿ ಗೌರವಾದರಗಳು ಮೂಡುತ್ತವೆ. ಏಕೆ ಹಾಗೋ ತಿಳಿಯದು. ಈಶಾನ್ಯಗುರುಗಳನ್ನು ಕಂಡಾಗ ಒಮ್ಮೆಗೇ ನನ್ನ ಮನಸ್ಸಿನಲ್ಲಿ ನಾನು ಕಂಡಿರದಿದ್ದ ಅಪ್ಪಯ್ಯ, ವಿಶ್ವೇಶ್ವರ ಮಾಮ, ವಾಸುದೇವಭಟ್ಟರು– ಈ ಮೂವರೂ ಸುಳಿದಾಡಿದರು. ಭುಜ ಹಿಡಿದು ಮೇಲೆತ್ತಿದರು "ನೀನು ಯಾರು ಮಗು?" ಎಂದರು ಮೃದುವಾಗಿ. ಅವರ ಮಾತು ಕೇಳಿದ ಕೂಡಲೇ ನನ್ನಿಂದ ಮಾತೇ ಹೊರಡದಾಯಿತು. ಬದಲು ಉಕ್ಕಿ ಉಕ್ಕಿ ಅಳು ಬಂತು. ನಾನು ಅಳುತ್ತಿದ್ದಂತೆ ಅವರು ನನ್ನ ಬೆನ್ನ ಮೇಲೆ ಕೈಯಾಡಿಸುತ್ತಿದ್ದರು: ಪ್ರಸನ್ನವದನರಾಗಿ ನನ್ನ ಕಡೆಗೇ ನೋಡುತ್ತಿದ್ದರು. ಅವರ ಸ್ಪರ್ಶ, ಮಂದಹಾಸ ನನ್ನಲ್ಲಿ ಮತ್ತಷ್ಟು ಅಳುವನ್ನೇ ಉಕ್ಕಿಸಿತು. ದುಃಖದಿಂದ ಅತ್ತದ್ದು ಅದು ಎಂದು ಹೇಳಲುಬರುವುದಿಲ್ಲ. ಅವರ ಸಾನ್ನಿಧ್ಯವೆಂದರೆ ನಾನು ಮನಸ್ಸನ್ನು ಹಗುರುಮಾಡಿಕೊಂಡುಬಿಡಬಹುದಾದ ತಾಣವೆಂಬ ನಂಬಿಕೆ ನನ್ನಲ್ಲುಂಟಾದಂತಿತ್ತು. ಅತ್ತೂ ಅತ್ತೂ ಅವರ ಪಾದಗಳಿಗೆ ನನ್ನ ಎದೆಯ ಭಾವನೆಗಳನ್ನೇ ಸುರಿದು ಬರಿದುಮಾಡಿಕೊಂಡೆ.

ನಾನು ಅಳುತ್ತಿದ್ದವರೆಗೂ ಏನೂ ಮಾತಾಡದೆ ಸುಮ್ಮನೆ ಮೈದಡವುತ್ತಿದ್ದ

ಅವರು, ನಾನು ಸಮಾಧಾನಗೊಂಡ ಮೇಲೆ "ಆಯಿತೇ ಮಗು" ಎಂದರು. "ಈ ವಯಸ್ಸಿಗೇ ನಿನಗೆ ದುಃಖ ಬಂದಂತಿದೆಯಲ್ಲ. ಆ ಶಿವನ ಲೀಲೆಯನ್ನು ಏನೆಂದು ಹೇಳುವುದು, ಸಂಗ, ಸಂಗ!" ಎಂದುಕೊಂಡರು. ನಾನು ಮುಂದೆ ಕೂತರೆ, ನಿಂತರೆ, ಬೇಸರಾದರೆ, ಮೈಮುರಿದರೆ, ಆಕಳಿಸಿದರೆ, ಆಶ್ಚರ್ಯಗೊಂಡರೆ ಉಚ್ಚರಿಸುತ್ತಿದ್ದ "ಸಂಗ, ಸಂಗ" ಎಂಬ ಮಾತು ಅವರ ಪ್ರಭಾವದಿಂದಲೇ ಉಂಟಾದದ್ದು. "ಬಾ" ಎಂದು ತೋಟದ ಒಂದು ಮರದ ಕೆಳಗೆ ಹಾಕಿದ್ದ ಕಲ್ಲುಚಪ್ಪಡಿಯ ಮೇಲೆ ಕುಳಿತರು; ನಾನು ನಿಂತೇ ಇದ್ದೆ. "ಕೂತುಕೋ ಮಗು" ಎಂದರು ನಾನು ಅವರ ಪಾದಮೂಲದಲ್ಲಿ ಕುಳಿತೆ.

"ನಿನ್ನ ಹೆಸರು?"

"ಬಸವರಾಜ"

"ಓ, ನಮ್ಮ ನಂದಿನಾಥನ ಹೆಸರೋ. ಏನಾಗಬೇಕಪ್ಪ ನನ್ನಿಂದ?"

"ನನಗೊಂದು ಮಾರ್ಗ ತೋರಿಸಿ, ಗುರುವೇ" ಎಂದು ಅವರ ಪಾದಗಳನ್ನು ಹಿಡಿದುಕೊಂಡೆ. ಮತ್ತೆ ಅಳು ಉಕ್ಕಿ ಬಂತು. ಪುನಃ ನಾನೇ ಸಮಾಧಾನಗೊಳ್ಳುವವರೆಗೆ ಸುಮ್ಮನಿದ್ದರು. ನಾನು ನಿಲ್ಲಿಸಿದಾಗ ಮುಗುಳ್ನಕ್ಕರು.

"ನಾನು ನಮ್ಮ ಅಕ್ಕ ದಿಕ್ಕಿಲ್ಲದ ಪರದೇಸಿಗಳು. ನಮಗೆ ಒಂದು ಆಸರೆ ನೀಡಿ. ಕರುಣಿಸಬೇಕು. ನನ್ನ ಸೇವೆ ತಮ್ಮ ಪಾದಕ್ಕೆ ಸಮರ್ಪಿಸುತ್ತೇನೆ."

"ಸಂಗ ಎಲ್ಲರನ್ನೂ ಕಾಪಾಡುತ್ತಾನೆ, ಬಸವರಾಜ" ಎಂದರು. "ಇಲ್ಲೇ ಇರಬೇಕೆಂದು ಬಯಸುತ್ತೀಯಾ" ಎಂದು ತಾವೇ ಹೇಳಿಕೊಳ್ಳುತ್ತ ಏನೋ ಯೋಚಿಸಿದರು. "ಯಾವ ಕಡೆಯವರು ನೀವು? ಇಲ್ಲಿಯವರೆಗೆ ಏಕೆ ಬಂದಿರಿ?" ಎಂದು ಕೇಳಿದರು. ನನಗೆ ಏನು ಉತ್ತರ ಕೊಡಬೇಕೆಂದು ತಕ್ಷಣ ಹೊಳೆಯಲಿಲ್ಲ. ಬಾಗೇವಾಡಿ ಎಂದರೆ ಮತ್ತೇನು ಪ್ರಶ್ನೆಗಳು ಬಂದಾವೋ, ಏಕೆ ಬಂದಿರಿ ಎಂದು ಮತ್ತೆ ಕೆದಕುತ್ತಾರೆಯೋ ಏನೋ ಎಂದು ಅಳುಕುಂಟಾಯಿತು. ಅವರೇ ಒಂದು ಕ್ಷಣ ನನ್ನ ಮುಖ ನೋಡಿ ತಿಳಿದುಕೊಂಡವರಂತೆ, "ಹಿಂದಿನದನ್ನು ನೆನಪಿಸಿಕೊಳ್ಳಲು ನಿನಗೆ ಕಷ್ಟವಾಗುತ್ತಿದೆ ಎಂದು ಅನ್ನಿಸುತ್ತದೆ. ಆಯಿತು ಮುಂದೆ ಎಂದಾದರೂ ಹೇಳುವಿಯಂತೆ. ಹೋಗಲಿ ನಿನಗೆ ಏನೇನು ಬರುತ್ತದೆ ಹೇಳುವೆಯೋ?" ಎಂದರು. ಮಾತು ಮಾತಿಗೆ ಮುಗುಳ್ನಗೆ. ಪ್ರಶ್ನೆ ಕೇಳಿ ಗಾಬರಿಯುಂಟುಮಾಡುವ ರೀತಿಯಲ್ಲ ಅದು, ತಾನಾಗಿ ಉತ್ತರ ಹೇಳಬೇಕೆಂಬ ಮನಸ್ಸು ಬರುವಂತೆ ಆತ್ಮವಿಶ್ವಾಸ ಹುಟ್ಟಿಸುವ ರೀತಿ. ನಾನು ಅವರೆಗೆ ಕಲಿತ ವಿದ್ಯೆ ಹೇಳಿದೆ. ಕನ್ನಡದಲ್ಲಿ ಕವಿತೆಗಳನ್ನೂ ಹಾಡಬಲ್ಲೆ ಎಂದೆ. "ಓಹೋ!" ಎಂದರು ಆಶ್ಚರ್ಯಬೆರೆತ ಕಕ್ಕುಲತೆಯಿಂದ. "ಹಾಗಾದರೆ ಒಂದು ಕೆಲಸ ಮಾಡು. ನಿನ್ನ ದಿನಚರಿ ಇದು. ಬೆಳಿಗ್ಗೆ ಎದ್ದವನೇ ಕೃಷ್ಣೆಯ ಮಡಿಲಲ್ಲಿ ಪುನೀತವಾಗಿ ಬಾ, ಬರುವಾಗ ನನ್ನ ಪೂಜಾದಿಗಳಿಗೆ ಬೇಕಾದ ಅಗ್ಗವಣಿಯನ್ನು ನದಿಯಿಂದ ತಾ. ಅದನ್ನು ಮಠದಲ್ಲಿರಿಸಿ ಈ ಹೂದೋಟದಿಂದ ಪೂಜೆಗಾಗಿ ಹೂಗಳನ್ನು ಬಿಡಿಸಿಕೊಂಡು ಬಾ. ಅಮೇಲೆ ನಮ್ಮ ಚಿಕ್ಕ ಮಾಣಿಯರಿಗೆ ಕನ್ನಡ ಕಲಿಸು.

ನಮ್ಮ ಕನ್ನಡೊವಜ ಕೇಶವ್ವೋಜರು ಸಂಗನನ್ನು ಸೇರಿ ಆರು ತಿಂಗಳಾಯಿತು. ಮಕ್ಕಳಿಗೆ ಸರಿಯಾಗಿ ಕನ್ನಡ ಕಲಿಸುವವರಿಲ್ಲ, ಆಗಬಹುದೇ?" ಎಂದರು.

"ತಮ್ಮ ಕೃಪೆ ಗುರುದೇವ" ಎಂದೆ.

"ತುಂಬ ಕೆಲಸ ಮಾಡಬೇಕೆಂದು ಬೇಸರವೇ?" ಎಂದರು

"ಖಂಡಿತ ಇಲ್ಲ. ಅನಾಥನಿಗೆ ದಾರಿದೀಪವಾದಿರಿ. ಹಾಗೆಯೇ ನನಗೊಂದು ಕರುಣೆ ತೋರಿಸಬೇಕು."

"ಏನು, ಮಗು?"

"ಮಧ್ಯಾಹ್ನದ ಹೊತ್ತು, ಇತರರ ಜೊತೆಯಲ್ಲಿ ನಾನೂ ತಮ್ಮ ಪಾದದಡಿ ಕುಳಿತು ಶಾಸ್ತ್ರಗಳನ್ನು ಕಲಿಯುವ ಆಸೆ. ಕೃಪೆಯಾಗಬೇಕು."

"ಧಾರಾಳವಾಗಿ ಆಗಲಿ. ನಿನ್ನನ್ನು ನೋಡಿದರೆ ನಿನ್ನಿಂದ ತುಂಬ ದೊಡ್ಡ ಕೆಲಸವಾಗುವುದಿದೆಯೆಂದು ಸಂಗ ಹೇಳುತ್ತಿದ್ದಾನೆ. ಶ್ರದ್ಧೆಯಿಂದ ಓದು, ಒಳಿತಾಗುತ್ತದೆ" ಎಷ್ಟು ಹೇಳಿ ಎದ್ದರು. ನನ್ನ ಹೃದಯ ತುಂಬಿ ಬಂದಿತ್ತು. ಬಾಯಾರಿ ನೀರನ್ನು ಅರಸಿಹೋದರೆ ಅಮೃತವೇ ಸಿಕ್ಕಂತಾಗಿತ್ತು.

ಮಾರನೆಯ ದಿನದಿಂದ ನನ್ನ ದಿನಚರಿ ಪ್ರಾರಂಭವಾಯಿತು. ಮಿಕ್ಕ ಮಾಣಿಗಳು, ಕೆಲಸಗಾರರು, ಬ್ರಹ್ಮಚಾರಿಗಳು, ಸಾಧಕರು ತಮಗೆ ನಿಗದಿತವಾದ ಸ್ಥಳಗಳಲ್ಲಿ ಮಠದಲ್ಲಿಯೇ ಉಳಿಯುತ್ತಿದ್ದರು. ನಾನು ಗುರುಗಳ ಬಳಿ ಬಿನ್ನವಿಸಿಕೊಂಡು ನಾಗಕ್ಕನ ಜೊತೆ ಮಠದ ಸನಿಹವೇ ಇದ್ದ ಮನೆಯೊಂದರಲ್ಲಿ ವಾಸಿಸಲಾರಂಭಿಸಿದೆ.

ಈಶಾನ್ಯಗುರುಗಳೆಂದರೆ ಬೆಣ್ಣೆಯ ಮನಸ್ಸಿನವರು, ವಜ್ರದ ನಿರ್ಧಾರದವರು ಅವರ ಮುಗುಳ್ನಗು, ತಲೆಯ ಮೇಲಿಟ್ಟ ಕೈಯಿನ ಸ್ಪರ್ಶ ಇವುಗಳಿಂದಲೇ ತಮ್ಮ ಪ್ರಭಾವವನ್ನು ಇತರರ ಮೇಲೆ ಬೀರುವವರು. ಅವರನ್ನು ಕಂಡರೆ ಯಾವುದನ್ನೂ ಮುಚ್ಚಿಡಬೇಕೆಂಬ ಮನಸ್ಸೇ ಆಗದು. ಅವರು ಕನ್ನಡಿಯಿದ್ದಂತೆ. ನಮ್ಮ ಎದೆಯಳಾದ ಭಾವನೆಯೆಲ್ಲ ಅವರಿಗೆ ಗೊತ್ತಾಗಿಬಿಡುತ್ತದೆ, ಅವರನ್ನು ವಂಚಿಸುವುದು ಸಾಧ್ಯವೇ ಇಲ್ಲ.

ಹೀಗೇ ಎಷ್ಟೋ ದಿನಗಳು ಕಳೆಯಿತು. ಎಷ್ಟೋ ಸಲ ಯೋಚಿಸಿದವನು, ಗುರುಗಳಿಗೆ ಹೇಳಲೋ ಬೇಡವೋ ಎಂದು ತುಯ್ದಾಡಿದ್ದೆ. ನಾನು ಅವರಿಂದ ಏನನ್ನೋ ಮುಚ್ಚಿಟ್ಟಿರುವೆನೆಂದು ಅವರಿಗೆ ಅನ್ನಿಸಬಾರದು. ನಾಗಕ್ಕನಲ್ಲಿ ಈಚೆಗೆ ಸ್ಪಷ್ಟ ದೈಹಿಕ ವ್ಯತ್ಯಾಸಗಳು ಕಾಣುತ್ತಿವೆ. ಎಂದಾದರೊಂದು ದಿನ ಹೇಳಲೇಬೇಕಾದ ಪ್ರಸಂಗವೊದಗಿದಾಗ ಬಾಯಿಬಿಡುವ ಮೊದಲು ಗುರುಗಳಲ್ಲಿ ಅರಿಕೆ ಮಾಡಿಕೊಳ್ಳುವುದು ಸರಿ ಎನ್ನಿಸಿತ್ತು. ನಾಗಕ್ಕನನ್ನೂ ಗುರುಗಳು ಆಮೇಲೆ ನೋಡಿದ್ದರು. ನಾನೇ ಕರೆದುಕೊಂಡು ಹೋಗಿ ಕಾಲಿಗೆ ಬಿದ್ದು 'ಅಕ್ಕ' ಎಂದು ಪರಿಚಯ ಮಾಡಿಕೊಟ್ಟಿದ್ದೆ.

ಸತ್ಯಕಾಮನ ನಿರ್ಧಾರ ನನ್ನದಾಯಿತು. ಸತ್ಯವನ್ನೆದುರಿಸುವ ಛಲ, ನೈತಿಕಬಲವೇ ನನ್ನ ಗುರಿಯಲ್ಲವೇ ಎಂದು ಆಲೋಚಿಸಿ ಒಂದು ದಿನ ಗುರುಗಳು ಒಬ್ಬರೇ ಸಿಕ್ಕಿದಾಗ ನನ್ನ ಪೂರ್ವಚರಿತ್ರೆಯನ್ನೆಲ್ಲ ಹೇಳಿದ್ದೆ. ನನ್ನ ವಿಷಯವನ್ನೆಲ್ಲ

ಯಾರ ಬಳಿ ಬೇಕಾದರೂ ಹೇಳಿಕೊಳ್ಳಬಹುದು; ಗುರುಗಳ ಬಳಿ ಹೇಳಿಕೊಳ್ಳಬೇಕಾದದ್ದು ಎಂದರೆ ಅಕ್ಕನ ವಿಚಾರ. ಆದರೆ ಏನೆಂದು ಹೇಳುವುದು. ನನಗೇ ತಿಳಿಯದಲ್ಲ, ಎಂದು ಚಡಪಡಿಕೆಯುಂಟಾಯಿತು. ಆದರೆ ಏನು ನಡೆಯಿತೋ ಅಷ್ಟನ್ನು ಹೇಳಬಹುದಲ್ಲ. ಎಲ್ಲವನ್ನೂ ಸಾದ್ಯಂತವಾಗಿ ವಿವರಿಸಿದೆ. ಅಕ್ಕ ಏನು ಕೇಳಿದರೂ ಅಳುವ ವಿಚಾರವನ್ನು ಒತ್ತಿ ಹೇಳಿದೆ, "ಸತ್ಯ ಇದು, ನನಗೆ ದಿಕ್ಕೇ ತೋಚದು. ನಮ್ಮನ್ನು ಕಾಪಾಡಬೇಕು" ಎಂದು ಯಾಚಿಸಿದೆ. ಗುರುಗಳ ಪ್ರೀತಿಯೆಂದರೆ ಭೂತಾಯಿಯ ಮಮತೆ. ರಮಿಸುವುದೇ ಹೊರತು, ದಂಡಿಸುವ ಪ್ರವೃತ್ತಿಯದಲ್ಲ. ಹೇಳಿದುದನ್ನೆಲ್ಲ ಕೇಳಿ ದೀರ್ಘವಾದ ಉಸಿರುಬಿಟ್ಟರು. "ಬಸವರಾಜ, ನೀನೂ ಸತ್ಯಕಾಮನೇ" ಎಂದರು. ಅವರು ಹೇಳಿದ ರೀತಿಯೇ ನನಗೆ ಎಂಟುಭುಜಗಳು ಬರುವಂತೆ ಮಾಡಿತು.

ಮುಂದೊಂದು ದಿನ ನಾಗಕ್ಕ ಹೆತ್ತಳು. ತುಂಬ ಸುಂದರ ಮಗು. ಚೆನ್ನಬಸವ ಎಂದು ಹೆಸರಿಟ್ಟೆವು. ನಮ್ಮ ವಿಚಾರವನ್ನು ಕೆದಕಿ ಕೇಳುವ ಮಂದಿಯೇ ಅಲ್ಲಿ ಕಡಿಮೆ. ಅಲ್ಲದೆ, ನಾನು ದಿನೇ ದಿನೇ ಈಶಾನ್ಯಗುರುಗಳಿಗೆ ಸನಿಹವಾಗುತ್ತಿದ್ದೆ. ಅಷ್ಟೇಕೆ, ಮಠದ ಎಲ್ಲರ ಪ್ರೀತಿಗೂ ಪಾತ್ರನಾಗಿದ್ದೆ. ಹಿರಿಯರ ಸೇವೆ, ಈಗ ಭೃತ್ಯಾಚಾರ ಎಂಬ ಹೆಸರಿನಿಂದ ಆಚರಿಸುತ್ತೇವಲ್ಲ, ಅದು ಮೊದಲಿನಿಂದಲೂ ನನ್ನ ಸ್ವಭಾವ. ಹೀಗಾಗಿ ಎಲ್ಲರ ಜೊತೆ ನನ್ನ ಸಲಿಗೆ, ಸ್ನೇಹ. ಆದುದರಿಂದ ಕೆದಕಿ ಕೇಳುವ ಪ್ರಶ್ನೆಗಳು ಎದುರಾಗಲಿಲ್ಲ; ಕೆದಕಬೇಕೆಂಬ ಚಪಲವಿರುವವರೂ ಕೆಲವೊಮ್ಮೆ ನನ್ನನ್ನು ಕಂಡರೆ ಸುಮ್ಮನಾಗಿಬಿಡುತ್ತಾರೆ. ಏಕೆಂದರೆ ನಾನು ಮಾಧುರ್ಯನಿಗೆ ಮಾಧುರ್ಯನೂ ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನೂ ಆಗಿದ್ದೆ.

ಚೆನ್ನಬಸವನಿಂದಾಗಿ ಅಕ್ಕನ ಮುಖದ ಮೇಲಿಷ್ಟು ನಗೆ ಮೂಡುವಂತಾಯಿತು. ಇದುವರೆಗೂ ಹಾಗೆಯೇ ಇದೆ. ಚೆನ್ನಬಸವ ನನ್ನನ್ನು ತುಂಬ ಹಚ್ಚಿಕೊಂಡಿದ್ದ. ಮಾತು ಬಂದ ಮೇಲೆ ಬೆಳಿಗ್ಗೆ ಏಳುತ್ತಲೇ 'ಅವ್ವ' ಎಂದು ಕೂಗುವ ಮಗುವಲ್ಲ ಅವನು; 'ಮಾವ' ಎಂದು ಕೂಗುತ್ತಿದ್ದ. ನನ್ನ ಬಗ್ಗೆ ಮಗು ತೋರುವ ವಿಶ್ವಾಸ ಕಂಡು ನಾಗಕ್ಕ ಹರ್ಷಿಸುವಳು. ನಮ್ಮಿಬ್ಬರಿಗೆ ಅವಳ ಅಕ್ಕರೆ ಯಥೇಚ್ಛವಾಗಿ ದೊರೆಯಿತು. ನನ್ನ ಹಾಗೆಯೇ ಚೆನ್ನಬಸವನೂ ಬೆಳೆದ. ನಾವು ಕಪ್ಪಡಿಸಂಗಮದಲ್ಲಿದ್ದದ್ದು ಸುಮಾರು ಆರು ವರ್ಷಗಳು. ಮಗು ಆರು ವರ್ಷ ಬೆಳೆಯುವುದೆಂದರೆ ಮನೆಯವರ ಮನದಂಗಳದಲ್ಲಿ ಬೆಳುದಿಂಗಳೇ ಸರಿ. ಸುರಿಸುವ ಜೊಲ್ಲಿನಿಂದ ಹಿಡಿದು, ದಟ್ಟಾಡುವ ಹೆಜ್ಜೆಗಳು, ಆಡುವ ತಿರಿತಿರಿ ಎಂಬ ತೊದಲು ಮಾತು, ಮಾಡುವ ಚೇಷ್ಟೆ ಎಲ್ಲ ಕಂಡವರಿಗೆ ಹಾಲು ಕುಡಿದಂತೆ. ನಮ್ಮ ಪುಟ್ಟಸಂಗಯ್ಯನೂ ಹೀಗೇ ಇದ್ದ. ಆದರೆ ಇಷ್ಟು ದಿನ ಕೂಡ ಅವನು ನಮ್ಮೊಡನೆ ಇರಲಿಲ್ಲ. ಪುಟ್ಟಸಂಗಯ್ಯ ಎಂದೊಡನೆ ನನ್ನ ಮನಸ್ಸನ್ನು ಸಂಪೂರ್ಣವಾಗಿ ಕತ್ತಲೆ ಆವರಿಸಿಬಿಡುತ್ತದೆ. ಅದೂ ಸುತ್ತುಮುತ್ತಲೂ ಅಂಧಕಾರ ಕವಿಯುತ್ತಿರುವ ಈ ದಿನಗಳಲ್ಲಿ ಒಳಗೂ ದಟ್ಟವಾಗಿ ಕೂಡಿ ಸೇರುವ ಕತ್ತಲೆ!

## ೧೫

ಅಂದು ಭಂಡಾರದ ಮನೆಗೆ ಬಸವಣ್ಣನವರು ಹೋಗಿ ಸ್ವಲ್ಪವೇ ಹೊತ್ತಾಗಿತ್ತು. ಮುಖ್ಯ ಬೇಹುಗಾರರಿಂದ ತುರ್ತುಕರೆ ಬಂತು. ಸಮಯವಿದ್ದರೆ ತಾವು ಬರಬೇಕೆಂಬುದಾಗಿಯೂ ವಿಷಯ ತುಂಬ ಮುಖ್ಯವಾದುದೆಂದೂ ಹೇಳಲಾಗಿತ್ತು. ಬಸವಣ್ಣನವರು ಉಳಿದ ಅಧಿಕಾರಿಗಳಿಗೆ ಕೊಡುವ ಸೂಚನೆಯನ್ನಿತ್ತು ಹೊರಟರು.

ಕುದುರೆ ಬಂಡಿಯಲ್ಲಿ ಅಲ್ಲಿಗೆ ಹೋಗಲು ಕೆಲವೇ ಕ್ಷಣಗಳು ಸಾಕು. ವಿಶಾಲವಾದ ಪ್ರಾಕಾರದೊಳಗೆ ಪ್ರವೇಶಿಸಿ ಹೋದರೆ ಎಡಗಡೆಯೇ ಮುಖ್ಯ ಬೇಹುಗಾರರ ಕೇಂದ್ರ. ಬಸವಣ್ಣನವರು ಈ ಎಡೆಗೆ ಹೊರಟಿರುವ ವಿಷಯ ಬೇಹುಗಾರರಿಂದ ಆಗಲೇ ಅವರನ್ನು ತಲುಪಿದ್ದರಿಂದ ಅಣ್ಣನವರನ್ನು ಬರಮಾಡಿಕೊಳ್ಳಲು ಕಟ್ಟಡದ ಹೊರಗೆ ಅವರು ಬಂದು ಸಿದ್ಧವಾಗಿದ್ದರು.

ಅಣ್ಣನವರು ಬಂಡಿಯಿಂದ ಇಳಿಯುತ್ತಿದ್ದಂತೆಯೇ ಕೈಜೋಡಿಸಿ ಮುಗುಳ್ನಗುತ್ತ ನಿಂತರು. ಬಳಿಗೆ ಬಂದಾಗ ಬಸವಣ್ಣನವರ ಎರಡೂ ಕೈಗಳನ್ನು ಹಿಡಿದು ಕ್ಷೇಮಸಮಾಚಾರ ವಿಚಾರಿಸಿದರು.

"ತಮಗೆ ತೊಂದರೆಯಿತ್ತೆ"

"ಏನಾದರೂ ಸುಳಿವು ಸಿಕ್ಕಿತೇ?" ಅವರು ಕೇಳುತ್ತಿದ್ದುದು ಕೇತಗನ ವಿಚಾರ. ಮುಖ್ಯ ಬೇಹುಗಾರರು ಕರೆ ಕಳಿಸಿದಾಗಲೇ ಅಣ್ಣನವರಿಗೆ ಏನೋ ಪ್ರಮುಖ ಘಟ್ಟವನ್ನು ತನಿಖೆ ತಲುಪಿದೆ ಎಂದು ಅನ್ನಿಸಿತ್ತು. ಬಸವಣ್ಣನವರು, ಗದ್ದುಂಬಳ್ಳಿಯ ಜನ ಇವರಲ್ಲಿ ಮಾತ್ರವಲ್ಲ, ಇಡೀ ಶರಣಸಮುದಾಯದಲ್ಲಿ ಕೇತಗನ ಅಪಹರಣ ಒಂದು ಬಗೆಯ ಅಲ್ಲೋಲ ಕಲ್ಲೋಲವುಂಟುಮಾಡಿತ್ತು. ಏತಕ್ಕೆ ಹೀಗಾಯಿತೆಂದು ಅರ್ಥವಾಗದ ಗೊಂದಲ ಪರಿಸ್ಥಿತಿ ನಿರ್ಮಾಣವಾಗಿತ್ತು. ಈಚೆಗೆ ರಾಜ್ಯದಲ್ಲಿ, ಮುಖ್ಯವಾಗಿ ರಾಜಧಾನಿ ಕಲ್ಯಾಣ ಮತ್ತದರ ಸುತ್ತಮುತ್ತಲಲ್ಲಿ ನಡೆಯುತ್ತಿರುವ ಘಟನೆಗಳು ಕೇತಗನ ಪ್ರಸಂಗಕ್ಕೇ ಸಂಬಂಧಿಸಿದವು. ಹಲವು ದಿನಗಳಲ್ಲೇ ಅವನ ಹೆಸರು ಸಾವಿರಾರು ಜನರಿಗೆ ತಿಳಿದಿತ್ತು. ಅವನೊಂದು ದಂತಕತೆಯಾಗಿಬಿಟ್ಟಿದ್ದ.

"ಅದಕ್ಕೇ ದಣ್ಣಾಯಕರಿಗೆ ಕರೆಕಳಿಸಬೇಕಾಯಿತು, ಬನ್ನಿ" ಎನ್ನುತ್ತ ಮುಖ್ಯ ಬೇಹುಗಾರರು ಬಸವಣ್ಣನವರನ್ನು ಕಟ್ಟಡದ ಒಳಭಾಗಕ್ಕೆ ಕರೆದೊಯ್ದರು. ಒಂದು

ಕೋಣೆಯ ಮುಂದೆ ಬಂದು ನಿಂತಾಗ ಅಲ್ಲಿದ್ದ ಭಟರು ನಟೆಸು ನಿಂತರು. ಇಬ್ಬರೂ ಒಳಗೆ ನಡೆದರು, ಕೋಣೆಯ ಮೂಲೆಯಲ್ಲಿ ಕೇತಗ ಕುಳಿತಿದ್ದ! ಇವರನ್ನು ಕಂಡೊಡನೆ ಎದ್ದು ನಿಂತ; ಅಣ್ಣನವರ ಮುಂದೆ ಅಡ್ಡಬಿದ್ದ. ಬಸವಣ್ಣನವರಿಗೂ ಆಶ್ಚರ್ಯವೇ. ತನಿಖೆಯ ಮುಖ್ಯ ಘಟ್ಟ ಮುಟ್ಟಿದೆ ಎಂದುಕೊಂಡಿದ್ದರೆ, ಅದು ಸಫಲವಾಗಿಯೇ ಇದೆ! ತಮ್ಮ ಸಾಮ್ರಾಜ್ಯದ ಬೇಹುಗಾರ ದಳದ ಬಗ್ಗೆ ಹೆಮ್ಮೆಯೆನಿಸಿತು. ಮುಂದೆ ಮೈಚಾಚಿದ್ದ ಕೇತಗನನ್ನು ಮೇಲೆತ್ತಿದರು; ಅಭಿಮಾನದಿಂದ ಆಲಂಗಿಸಿದರು. ಅವನಿಗಂತೂ ಬಾಯಲ್ಲಿ ಮಾತೇ ಹೊರಡಲಿಲ್ಲ, ಗಳಗಳ ಕಣ್ಣುಗಳಲ್ಲಿ ನೀರು. ಕೈಜೋಡಿಸಿ ಸುಮ್ಮನೆ ನಿಂತ, ಏನು ಕೇಳಿದರೂ ಉತ್ತರಿಸಲಾಗದ ಉದ್ವೇಗ ಅವನಲ್ಲಿ ತುಂಬಿತ್ತು. ಅಣ್ಣನವರಿಗೆ ಕೇತಗನ ಪರಿಸ್ಥಿತಿ ಅರ್ಥವಾಗದಿರುತ್ತದೆಯೇ? ಮೈದಡವಿದರು. ತಮ್ಮ ಸ್ಪರ್ಶದಿಂದಲೇ ಅವನಲ್ಲಿ ಚೈತನ್ಯವನ್ನು ತುಂಬಿದರು. ಆದರೂ ಕೇತಗ ಸೊರಗಿದ್ದ. ಕಣ್ಣುಗಳಲ್ಲಿ, ಆತಂಕ ನಿದ್ರಾಹೀನತೆಗಳಿಂದಾಗಿ ಎಂದು ಕಾಣುತ್ತದೆ ಕಾಂತಿ ಮಸುಕಾಗಿತ್ತು.

"ತಮ್ಮ ಕಾರ್ಯದಕ್ಷತೆಯ ಬಗ್ಗೆ ನಮ್ಮ ಶರಣವರ್ಗದ ಅಭಿನಂದನೆಗಳು" ಎಂದು ದಣ್ಣಾಯಕರು ಮುಖ್ಯ ಬೇಹುಗಾರರ ಕಡೆಗೆ ತಿರುಗಿ ಹೇಳಿದರು.

"ನಮ್ಮ ಕರ್ತವ್ಯ ನಾವು ನಿರ್ವಹಿಸಿದ್ದೇವೆ. ಪ್ರಭುಗಳ ಉಪ್ಪುಂಡು ಕೆಲಸ ಮಾಡದಿದ್ದರಾದೀತೇ?" ಎಂದು ಹೇಳಿದರೂ ಮುಖ್ಯ ಬೇಹುಗಾರರ ಮಾತಿನಲ್ಲಿ ಹೆಮ್ಮೆಯ ಲೇಪವಿತ್ತು.

ಮುಂದೆ ಅವರಿಬ್ಬರ ಮಾತುಕತೆ ಕೇತಗನನ್ನು ಕರೆದೊಯ್ಯುವ ಕಡೆಗಿತ್ತು. ಆಗಬೇಕಾದ ಕೆಲವು ವಿಧಿಗಳಿದ್ದುದರಿಂದ ತಕ್ಷಣವೇ ಕಳಿಸುವಂತಿರಲಿಲ್ಲ. ಎಲ್ಲ ಮುಗಿಯುವ ಹೊತ್ತಿಗೆ ಮಧ್ಯಾಹ್ನವಾಗಬಹುದು; ಆಗ ಕರೆದೊಯ್ಯಬಹುದು ಎಂಬ ಸಲಹೆ ಬಂದಿತು. ಅಂತೇ ಮಾಡುವುದಾಗಿ ಬಸವಣ್ಣನವರೆಂದಾಗ ಅವರೆಡೆಗೆ ತಿರುಗಿ ಮುಖ್ಯ ಬೇಹುಗಾರರು, "ದಣ್ಣಾಯಕರಿಗೆ ಅಪಹರಣಕಾರರ ಬಗ್ಗೆ ಆಸಕ್ತಿಯಿಲ್ಲವೇ?" ಎಂದು ನಗುತ್ತ ಪ್ರಶ್ನಿಸಿದರು.

"ಖಂಡಿತಾ ಇದೆ"

"ವೇಳೆಯಿದ್ದರೆ, ಕುತೂಹಲವಿದ್ದರೆ ನೋಡಬಹುದು, ಕರೆದೊಯ್ಯುತ್ತೇನೆ."

ಸೆರೆಮನೆ ಈ ಕಟ್ಟಡಕ್ಕಿಂತ ಇನ್ನೂ ಮುಂದೆ. ಅವರ ಸೂಚನೆಗನುಗುಣವಾಗಿ ಬಂಡಿ ಬಂದಿತು. ಇಬ್ಬರೂ ಒಟ್ಟಿಗೇ ಅದರಲ್ಲಿ ಕುಳಿತು ಸೆರೆಮನೆಯ ಕಡೆ ನಡೆದರು.

ಕಂಬಗಳ ಹಿಂದಿದ್ದ ಆರು ಜನರ ಕಡೆಗೆ ದೃಷ್ಟಿ ಹಾಯಿಸಿದಾಗ ಬಸವಣ್ಣನವರ ಮನಸ್ಸಿನಲ್ಲಿ ಕೋಲಾಹಲ. ಇನ್ನೂ ಯುವಕರು, ಕಟ್ಟುಮಸ್ತಾದ ಆಳುಗಳು. ಅವರೇಕೆ ಕೇತಗನನ್ನು ಅಪಹರಿಸಿದರು, ಅವರ ಹಿಂದೆ ಇರುವ ಪ್ರೇರಕಶಕ್ತಿಗಳಾವುವು? ತಮ್ಮ ಶಕ್ತಿಯನ್ನಿವರು ಎಂಥ ಕೆಲಸಕ್ಕೆ ಬಳಸಿಕೊಳ್ಳುತ್ತಾರೆ. ಮನಸ್ಸು ಮಾಡಿದರೆ ಶಿವ ಮೆಚ್ಚಿ ಅಹುದಹುದು ಎಂಬ ರೀತಿಯ ಕೆಲಸ

ಮಾಡಬಹುದಾದ ಇವರು ಶಿವಶರಣನನ್ನೇ ಅಪಹರಿಸುವ ಕೆಲಸಕ್ಕಿಳಿಯುವುದೇ? ಮನಸ್ಸಿನಲ್ಲಿ ಕೋಪಕ್ಕಿಂತ ವಿಷಾದದ ಭಾವ ದಟ್ಟವಾಯಿತು.

"ಏನಿರಯ್ಯಾ" ಎಂದು ಅವರ ಕಡೆ ತಿರುಗಿ ಬಸವಣ್ಣನವರು ಏನೋ ಹೇಳಲು ಹೊರಟರು. ಆದರೆ ಒಂದೇ ಮಾತಿಗೆ ಮುಖ್ಯ ಬೇಹುಗಾರರು ತಡೆದು, "ನಮ್ಮ ಭಟರು ಆ ಕೆಲಸ ಮಾಡುತ್ತಾರೆ. ತಮ್ಮ ಕುತೂಹಲ ತಣಿಯಲೆಂದು ಅವರನ್ನು ಕಾಣಿಸಿದೆ"ಎಂದು ಮುಗುಳ್ನಕ್ಕರು. ಈ ಕೆಲಸದ ರೀತಿಯೇ ಇದೋ ಏನೋ. ಕೆಲವು ಕ್ಷಣಗಳ ಹಿಂದೆ ತುಂಬ ವಿನೀತರಾಗಿದ್ದವರು ಈಗ ನಗೆಯಿದ್ದರೂ ನಿಷ್ಠುರರಾದರು ಎನ್ನಿಸಿತು ಬಸವಣ್ಣನವರಿಗೆ; ಸುಮ್ಮನಾದರು.

ಮತ್ತೆ ಮರಳಿ ಬರುತ್ತ ಮುಖ್ಯ ಬೇಹುಗಾರರು ಸರಳರಾದರು. ಸಂಕ್ಷಿಪ್ತವಾಗಿ ಕೇತಗನ ಪತ್ತೆಯಾದ ವಿವರಗಳನ್ನು ನೀಡಿದರು. ಕರವೀರಪುರದಲ್ಲಿ ಸಿಕ್ಕಿಹಾಕಿಕೊಂಡರಂತೆ ಅಪರಾಧಿಗಳು. ಕರವೀರಪುರ! ಸಾಕಷ್ಟು ದೂರವೇ ಎನ್ನಬಹುದಾದ ಊರು. ಕಲ್ಯಾಣದಿಂದ ಪೇರೂರಿಗೆ ಹೋಗುವ ದಾರಿಯಲ್ಲಿ ಸಿಕ್ಕುವುದು. ಕೇತಗನ ಅಪಹರಣದ ದೂರು ಬಂದ ಕ್ಷಣವೇ ಕಲ್ಯಾಣದಿಂದ ಹೋಗುವ ಎಲ್ಲ ಮಾರ್ಗಗಳಲ್ಲೂ ಬಿಗಿ ಪಹರೆ ಏರ್ಪಡಿಸಲಾಯಿತು. ಹೋಗಿ ಬರುವ ಬಂಡಿಗಳನ್ನು ಹೇರುಗಳನ್ನು ಪರೀಕ್ಷಿಸುವ ವ್ಯವಸ್ಥೆಯಾಯಿತು. ಅನುಮಾನ ಬಂದ ವ್ಯಕ್ತಿಗಳನ್ನು ಸೆರೆಹಿಡಿಯುವ ಆಜ್ಞೆಯಾಯಿತು. ಆದರೆ ಈ ಜನರು ನೇರ ದಾರಿ ಹಿಡಿದಿರಲಿಲ್ಲ. ಗದ್ದುಂಬಳ್ಳಿಯಿಂದ ಕಾಡು ದಾರಿ ಹಿಡಿದೇ ಬಂದರಂತೆ. ಆ ರಾತ್ರಿ ಮರಗಳ ಗುಂಪಿನ ಬಳಿ ಕೇತಗನ ಬಾಯಿ ಬಿಗಿಹಿಡಿದು ಅನಾಮತ್ತು ಎತ್ತುಕೊಂಡು ಹೋದ ಈ ಆರೂ ಜನ ಸ್ವಲ್ಪ ದೂರ ನಡೆದು ಯಾವುದೋ ಪಾಳು ಗುಡಿಯೊಂದರಲ್ಲಿ ತಳ್ಳಿ ಬಾಗಿಲು ಹಾಕಿ ಹೊರಗೆ ನಿಂತುಕೊಂಡರು. ಒಬ್ಬ ಹೋಗಿ ಒಂದು ಬಂಡಿ ತಂದ. ಅದರಲ್ಲಿ ಜೋಳದ ಮೂಟೆಗಳು. ಇವನ ಕಣ್ಣು ಬಾಯಿ ಕಾಲುಗಳನ್ನು ಕಟ್ಟಿ ಮೂಟೆಗಳೊಡನೆ ಎಸೆದರು. ಕಮಾನು ಗಾಡಿಯಾದ್ದರಿಂದ ಹೊರಗೇನೂ ಕಾಣಿಸದು. ಆಮೇಲೆ ಬಂಡಿಜಾಡು ಹಿಡಿದು ಕರವೀರಪುರವನ್ನು ಸೇರಲು ಪ್ರಯತ್ನಿಸಿದರು. ಮಾರನೇ ದಿನ ಆ ಊರಿನ ಸಂತೆ.

ದಾರಿಯಲ್ಲಿಯೇ ಬೇಹುಪಡೆಯವರು ಗಾಡಿಯನ್ನು ತಡೆದರು. ಎಲ್ಲ ಗಾಡಿಗಳನ್ನೂ ತಡೆಯುತ್ತಿದ್ದರು, ತನಿಖೆ ಮಾಡುತ್ತಿದ್ದರು. ತೆರೆದ ಬಂಡಿಯಾದರೆ ತನಿಖೆ ಸಲೀಸು. ಬಂಡಿಯ ಚಕ್ರದ ಮೇಲೆ ಹತ್ತಿ ಕಣ್ಣುಹಾಯಿಸಿದರೆ ಸಾಕು, ಸ್ಥೂಲವಾಗಿ ಅಲ್ಲಿರುವುದೆಲ್ಲ ಕಣ್ಣಿಗೆ ಬೀಳುತ್ತದೆ. ಆದರೆ ಮುಚ್ಚುಗಾಡಿಯಾದರೆ ಕಷ್ಟ. ಅದೂ ಬೆಳಕು ಹರಿಯುವ ವೇಳೆ, ಇನ್ನೂ ನಸುಕು. "ಏನ್ರೋ ಇದು?"

"ಜೋಳದ ಮೂಟೆಗಳು ಒಡೆಯರೆ, ಸಂತೆಗೆ" ಎಂದ ಇವರಲ್ಲೊಬ್ಬ.

"ಸುಳ್ಳು ಹೇಳಿದರೆ ಚರ್ಮ ಸುಲೀತೀವಿ" ಎಂದು ಬೆದರಿಸಿದ ಬೇಹುಗಾರರಲ್ಲಿ ಒಬ್ಬ ಬಂಡಿ ಹತ್ತಿದ; ಉಳಿದ ನಾಲ್ವರು ನಾಲ್ಕು ಜನಗಳನ್ನು ಹಿಡಿದುಕೊಂಡರು. ಮೂಕಿಯ ಬಳಿ ಹಿಂದೆ ಒಂದರ ಮೇಲೊಂದರಂತೆ

ಮೂಟೆಗಳು. ಹತ್ತಿದರೂ ಮಧ್ಯೆ ಏನಿದೆಯೆಂದು ಕಾಣದು. ಹಿಂದಿನ ಭಾಗದಲ್ಲಿದ್ದ ಮೇಲುಗಡೆಯ ಮೂಟೆಯನ್ನು ಕೆಳಕ್ಕೆ ಕೆಡವಿದ ಅವನು, ತನ್ನ ಬಡಿಗೆಯಿಂದ ಮಧ್ಯದ ಭಾಗದಲ್ಲಿ ತಿವಿದ. ಅಲ್ಲಿ ಮೂಟೆಯಿದ್ದಂತೆ ತೋರಲಿಲ್ಲ. ಕತ್ತಲಿನಲ್ಲಿ ಏನೋ ನರಳಿದ ಸದ್ದಾಯಿತು. ಅನುಮಾನವಾಯಿತು. ಹಿಂದಿದ್ದ ಇನ್ನೊಂದು ಮೂಟೆಯನ್ನು ಕೆಡವಿ ನೋಡುತ್ತಾನೆ; ಕೇತಗನನ್ನು ಮೂಟೆ ಕಟ್ಟಿ ಹಾಕಿದ್ದಾರೆ! ತಕ್ಷಣವೇ ಮುಂದೆ ಮೂಕಿಯ ಮೇಲೆ ಕೂತಿದ್ದು ಗಾಡಿ ಹೊಡೆಯುತ್ತಿದ್ದವನೂ ಮತ್ತೊಬ್ಬನೂ ಓಡಿ ಹೋಗಲು ಪ್ರಯತ್ನಿಸಿದರು. ನಾಲ್ಕು ಜನರನ್ನು ಮಿಕ್ಕ ನಾಲ್ವರು ಹಿಡಿದುಕೊಂಡಿದ್ದರಷ್ಟೆ. ಉಳಿದಿಬ್ಬರಲ್ಲಿ ಒಬ್ಬನನ್ನು ಮಾತ್ರ ಹಿಡಿಯಲು ಸಾಧ್ಯವಾಯಿತು. ಆರನೆಯವನು ತಪ್ಪಿಸಿಕೊಂಡ. ಆದರೇನು, ಅಂದು ಸಂಜೆಯೊಳಗಾಗಿ ಅವನನ್ನೂ ಸೆರೆ ಹಿಡಿದರು.

"ಇವರೆಲ್ಲ ಯಾರಂತೆ?" ಬಸವಣ್ಣನವರು ವಿಚಾರಿಸಿದರು. ಮುಖ್ಯ ಬೇಹುಗಾರರು ನೇರವಾಗಿ ಉತ್ತರಿಸಲಿಲ್ಲ. "ವಿಚಾರಣೆ ನಡೆಯುತ್ತಿದೆ. ಎಲ್ಲ ಮುಗಿದ ಮೇಲೆ ತಮಗೂ ತಿಳಿಯುತ್ತದೆ" ಎಂದು ಉತ್ತರಿಸಿದರು. ಬೀಳ್ಕೊಡುವಾಗ ಮತ್ತೆ ಬಸವಣ್ಣನವರ ಕೈಗಳನ್ನು ಹಿಡಿದುಕೊಂಡು ವಿಶ್ವಾಸ-ಗೌರವ ತೋರಿಸಿದರು.

ಬಸವಣ್ಣನವರು ಭಂಡಾರದ ಮನೆಗೆ ಹೋಗದೆ ನೇರವಾಗಿ ತಮ್ಮ ಮಹಮನೆಗೇ ಬಂದರು. ಅವರ ಮನಸ್ಸಿನಲ್ಲಿನ ಭಾರ ಸ್ವಲ್ಪ ಕಡಿಮೆಯಾಗಿತ್ತು. ಸದ್ಯ ಕೇತಗ ಸುಖವಾಗಿದ್ದಾನೆ. ಅವನಿಗೆ ಹಿಂಸೆ ಕೊಟ್ಟಿರಬಹುದು, ಉಪವಾಸ ಕೆಡವಿಸಿರಬಹುದು, ಆದರೆ ಕೊಂದಿರಲಿಲ್ಲ. ಕೊಲ್ಲಲು ಅವನು ಮಾಡಿರುವ ತಪ್ಪಾದರೂ ಏನು? ಆದರೂ ಈ ಅಪಹರಣಕಾರರ ಉದ್ದೇಶ ಏನಿತ್ತೋ ಬಲ್ಲವರಾರು. ಸಧ್ಯ, ಸಂಗ ಅವರಿಗೆ ಇದ್ದುದರಲ್ಲಿ ಒಳ್ಳೆಯ ಬುದ್ಧಿ ಕೊಟ್ಟಿದ್ದ, ಪ್ರಾಣ ಉಳಿಸಿದ್ದರು. ಅವನ ಪ್ರಾಣಕ್ಕೇನಾದರೂ ಅಪಾಯ ಒದಗಿದ್ದರೆ ಗತಿಯೇನು? ತಮ್ಮ ಮನೆಗೆ ಎದೆ ಹೊಡೆದುಕೊಂಡು ಬಂದ ಅಳ್ಳಯ್ಯನ ಮುಖಭಾವ ಕಣ್ಣೆದುರು ಬಂತು. ಮೊದಲು ಗದ್ದುಂಬಳ್ಳಿಗೆ ಸುದ್ದಿ ಕಳಿಸಿ ಅವರಿಬ್ಬರನ್ನು ಕರೆತರಲು ಬಂಡಿ ಕಳಿಸಬೇಕೆಂದುಕೊಂಡರು. ಕೇತಗನ ಅಪಹರಣದ ಬಗ್ಗೆ ದೂರಿತ್ತ ಮೇಲೆ ಇಡೀ ಗದ್ದುಂಬಳ್ಳಿಯ ಮೇಲೆ ರಾಜಭಟರ ರಕ್ಷೆಯಿತ್ತು. ಊರನ್ನು ಸುತ್ತುವರಿದು ಹಗಲು ರಾತ್ರಿ ಕಾಯುವ ಹೊಣೆ ಹೊತ್ತರು. ನಿರಾತಂಕವಾಗಿರಿ, ಸುಖವಾಗಿ ನಿದ್ರಿಸಿ ಎಂದು ಊರವರಿಗೆ ಅಭಯವಿತ್ತಿದ್ದರು. ಆದರೆ ಹಾಗೆ ನಿರ್ಭಯವಾಗಿ ಕಳವಳವಿಲ್ಲದೆ ಇರಲು ಸಾಧ್ಯವೆ? ಮುಂದೇನಾದೀತೋ ಎಂಬ ಬಗ್ಗೆ ಆತಂಕವಿಲ್ಲ, ಆದರೆ ಈಗಾಗಲೇ ಆಗಿಹೋಗಿರುವ ವಿಷಯ! ಅಯ್ಯೋ ಎಂದುಕೊಂಡ ಬಸವಣ್ಣನವರು ಮುಂದೇನು ಮಾಡಬೇಕೆಂಬ ಬಗ್ಗೆಯೂ ಯೋಚಿಸಲು ತೊಡಗಿದರು.

ಮಹಮನೆಗೆ ಬಂದವರೇ ಆಗಬೇಕಾದ ಕಾರ್ಯಗಳ ಬಗ್ಗೆ ಸರಸರನೆ ಆದೇಶವಿತ್ತರು. ಗದ್ದುಂಬಳ್ಳಿಗೆ ಹೋಗಬೇಕಾದ ಬಂಡಿಯನ್ನು ನೇಮಿಸಿದರು.

ಕೇತಗನನ್ನು ಕರೆತರಲು ತಾವೂ ಹೋಗುವುದರೊಂದಿಗೆ ಕೆಲವು ಹಿರಿಯರೂ ಜೊತೆಗಿರಬೇಕೆಂದು ಚೌಡಯ್ಯನವರಿಗೆ, ಮಾಚಯ್ಯನವರಿಗೆ ಹೇಳಿಕಳಿಸಿದರು. ಸೂರ್ಯ ಮುಳುಗಲು ಎರಡು ಮಾರಿದೆಯೆನ್ನುವಾಗ ಕೇತಗನನ್ನು ಕರೆತರಲು ಹೋಗುವ ನಿಶ್ಚಯವಾಯಿತು. ಅಲ್ಲದೆ, ಅಲ್ಲಿಂದ ಮಹಮನೆಗೆ ಮರಳಿ, ಈ ಸಂತೋಷದ ಸುದ್ದಿಯನ್ನು ತಿಳಿಸಿ, ಮುಂದಿನ ಕ್ರಮದ ಬಗ್ಗೆ ಚರ್ಚಿಸಲು ಶರಣರ ಸಭೆಯೊಂದನ್ನು ಕರೆಯಲೂ ಏರ್ಪಾಟಾಯಿತು.

ಬಸವಣ್ಣನವರು ಮಧ್ಯಾಹ್ನ ಬೊಕ್ಕಸದ ಮನೆಯಿಂದ ಬಂದು ಪ್ರಸಾದ ಸೇವಿಸಿ, ಕೊಂಚ ಕಾಲ ವಿಶ್ರಾಂತಿ ಪಡೆಯುವ ಪರಿಪಾಠ. ಪ್ರಸಾದದ ವೇಳೆಗಿಂತ ಮುಂಚೆಯೇ ಮನೆಗೆ ಮರಳಿದ್ದರೂ ನೀಡಬೇಕಾದ ಆದೇಶಗಳು, ಮಾಡಬೇಕಾದ ಏರ್ಪಾಟು ಮುಂತಾದವುಗಳ ಕಡೆಗೆ ಗಮನ ಹರಿಸಿ ನಿರ್ವಹಿಸುವ ಹೊತ್ತಿಗೆ ಪ್ರಸಾದದ ವೇಳೆ ಮೀರಿತ್ತು. ಪ್ರಸಾದ ಸೇವಿಸಿ ವಿಶ್ರಾಂತಿಯ ಕೋಣೆಯನ್ನು ಸೇರಿ ಪಲ್ಲಂಗದ ಮೇಲೆ ದೇಹ ವಿರಮಿಸಿದ್ದರೂ ಮನಸ್ಸು ಪ್ರಕ್ಷುಬ್ಧವಾಗಿತ್ತು. ಕೇತಗನನ್ನು ಕಣ್ಣಾರೆ ಕಂಡಾಗ, ಅವನು ಜೀವಂತವಾಗಿರುವುದನ್ನು ನೋಡಿದಾಗ, ಅವರ ಮನಸ್ಸು ಕೊಂಚ ಹಗುರಾಗಿತ್ತು, ನಿಜ. ಆದರೆ ಮತ್ತೆ ಪ್ರಶ್ನೆಗಳ ದಂಡು ದಾಳಿಮಾಡಿತ್ತು. ಮುಂದೇನು? ಎಂಬುದೇ ಮುಖ್ಯ ಪ್ರಶ್ನೆ. ಕಲ್ಯಾಣದಲ್ಲಿ ಈ ಕೆಲವು ದಿನಗಳಲ್ಲಿ ಆಗಿಹೋಗುತ್ತಿರುವ ಘಟನೆಗಳನ್ನು ನೆನೆದರೆ ನಾವೆಲ್ಲಿಗೆ ಮುಂದುವರಿಯುತ್ತಿದ್ದೇವೆ ಎಂದು ಗಾಬರಿಯಾಗುವುದು. ನಾವು ತೆಗೆದುಕೊಂಡ ತೀರ್ಮಾನಗಳೇ ಸರಿಯಾಗಿರಲಿಲ್ಲವೇ? ಅಥವಾ ನಮ್ಮ ಆಲೋಚನೆಗೆ ಅನುಗುಣವಾಗಿ ಜನರು, ಅಂದರೆ ಶರಣರು, ಯೋಚಿಸಲು ನಿರಾಕರಿಸುತ್ತಿರುವರೇ? ತಮ್ಮ ಶರಣಸಂಕುಲದಲ್ಲಿ ತಮ್ಮ ಯೋಜನೆಗೆ ವಿರೋಧವಿರುವುದು ಸ್ಪಷ್ಟವಾಗಿತ್ತು. ಆದರೆ ಅವರೊಡನೆ ಈಗ ಶರಣರಲ್ಲದವರೂ ಕೈಜೋಡಿಸಿರುವಂತೆ ಕಾಣುತ್ತದೆ. ಇಲ್ಲದಿದ್ದರೆ, ಇಷ್ಟು ವ್ಯಾಪಕವಾದ ಗಲಭೆಗಳು ನಡೆಯಲು ಸಾಧ್ಯವೇ? ಇಂಥ ಕೆಲಸಗಳಲ್ಲಿ ತೊಡಗುವ ಜನರಿಗೆ ಬಹುಬೇಗ ಬಹಳ ಸುಲಭವಾಗಿ ಬೆಂಬಲ ದೊರೆಯುವ ಹಾಗೆ ಕಾಣುತ್ತದೆ. ಇಲ್ಲದಿದ್ದರೆ ಇಂಥ ಕೆಲಸಗಳನ್ನು ಇಷ್ಟು ಅಚ್ಚುಕಟ್ಟಾಗಿ ಮಾಡಲು ಸಾಧ್ಯವೇ? ಈ ಹಿನ್ನೆಲೆಯಲ್ಲಿ ನಾವು ಮುಂದೆ ಅಡಿಯಿಡಬೇಕಾದದ್ದು ಯಾವ ಕಡೆಗೆ? ಸಂಜೆಯ ಸಭೆಯಲ್ಲಿ ಇವೆಲ್ಲ ತೀರ್ಮಾನವಾಗುವುದಲ್ಲವೇ? ಯೋಚನೆಯಿಂದ ಬಳಲಿದ ಮನಸ್ಸಿಗೆ ಜೊಂಪು ಹತ್ತಿತ್ತು.

ಎಂದಿನಂತೆಯೇ ಕ್ಲುಪ್ತಕಾಲದ ವಿಶ್ರಾಂತಿಯನಂತರ ಅಣ್ಣನವರಿಗೆ ಎಚ್ಚರವಾಯಿತು. ಕಣ್ಣುಜ್ಜಿಕೊಂಡಾಗ ಒಂದು ಕ್ಷಣ ಏನೂ ತೋಚಲಿಲ್ಲ. ಆದರೆ ಮರುಕ್ಷಣವೇ ಅಂದು ನಡೆದಿದ್ದ ಘಟನೆಗಳು ನೆನಪಿಗೆ ಬಂದು, ಮುಂದೆ ನಡೆಯಬೇಕಾದ ಕಾರ್ಯಗಳು ಮನಸ್ಸಿನಲ್ಲಿ ಮೂಡಿ ತರಾತುರಿಯಿಂದ ಮೇಲೆದ್ದರು. ನೀರಮನೆಗೆ ಹೋಗಿ ಮುಖದ ಮೇಲೆ ತಣ್ಣೀರು ಎರಚಿಕೊಂಡಾಗ ಹಾಯೆನಿಸಿ ಮುಂದೆ ನಡೆಯಬೇಕಾದವುಗಳ ಸ್ಪಷ್ಟಚಿತ್ರ ಕಾಣಿಸಿತು.

ಬಾಣದಂತೆ ಹೋಗಿದ್ದ ಬಂಡಿ ಅಳ್ಳಯ್ಯ–ಮಧುವಯ್ಯಗಳನ್ನು ಗದ್ದುಂಬಳ್ಳಿಯಿಂದ ಹೊತ್ತು ತಂದಿತ್ತು. ಸುದ್ದಿಯನ್ನು ತಿಳಿಸಿ, ಕರೆತರಬೇಕೆಂದು ಆದೇಶವಾಗಿದ್ದುದರಿಂದ ಅವರ ಮುಖಗಳು ಕೊಂಚ ಕಳೆಯಿಂದ ಕೂಡಿದ್ದವು. ಆದರೂ ಅವರನ್ನು ಕಂಡಾಗ ಇಬ್ಬರೂ ಈ ಕೆಲವೇ ದಿನಗಳಲ್ಲಿ ತೀರ ಇಳಿದುಹೋದಂತೆ ಕಾಣಿಸಿತು. ಚಿಂತೆಗೂ ಚಿತೆಗೂ ಇರುವ ವ್ಯತ್ಯಾಸ ಒಂದು ಸೊನ್ನೆ ಮಾತ್ರ ಎಂಬ ಜನಜನಿತವಾದ ಹಳೆಯ ಉಕ್ತಿ ನೆನಪಿಗೆ ಬಂತು.

ಬಂದ ಆ ಇಬ್ಬರೂ ಶರಣರು ಬಸವಣ್ಣನವರ ಮುಂದೆ ದಿಂಡುಗೆಡೆದರು. ಗೊಳೋ ಎಂದು ಅತ್ತರು. ಆದರೆ ಈಗ ಆ ಅಳು ಆನಂದದ ಕಾರಣದಿಂದ ಬಂದದ್ದು. ಅಂದು ಅತ್ತದ್ದಕ್ಕೂ ಇಂದಿನ ಅಳುಪಿಗೂ ಅಪಾರ ವ್ಯತ್ಯಾಸ. ಅವರನ್ನು ಸಮಾಧಾನಗೊಳಿಸುವುದೆಂದರೆ ಪ್ರಯಾಸದ ಮಾತು. ಅಲ್ಲದೆ, ಭಾವಾವೇಶದಿಂದ ಕಣ್ಣೀರು ಬಂದರೆ ಅದರಿಂದ ಒಳ್ಳೆಯದೇ, ಮನಸ್ಸಿನ ಭಾರ ಕಳೆಯುತ್ತದೆ. ಅಂಥವರನ್ನು ಸಮಾಧಾನಪಡಿಸುವುದಕ್ಕಿಂತಲೂ ಹೃದಯವನ್ನು ಹಗುರಗೊಳಿಸಿಕೊಳ್ಳಲು ಅವರಿಗೆ ಅವಕಾಶವೀಯುವುದೇ ಸೂಕ್ತ ಎಂಬ ಮರ್ಮವನ್ನು ಅಣ್ಣನವರು ಬಲ್ಲರಾಗಿ, ಅವರ ಪಾಡಿಗೆ ಅವರನ್ನು ಕೆಲ ಕ್ಷಣಗಳ ಕಾಲ ಬಿಟ್ಟರು.

ಆ ನೊಂದ ಶರಣರಿಬ್ಬರೂ ಸಮಾಧಾನ ತಂದುಕೊಂಡ ಮೇಲೆ ಉಪಚಾರದ ನಡುವೆಯೇ ಮಾತುಕತೆ ಮುಂದುವರೆಯಿತು. ಗದ್ದುಂಬಳ್ಳಿಯ ವಿಚಾರ, ಚಂದಲೆಯ ವಿಚಾರ. ಕಲ್ಯಾಣದ ವಿಚಾರ ಯಾವುದೂ ಸಂತೋಷದಾಯಕವಾದದ್ದೇನಲ್ಲ. ಪ್ರತಿಯೊಂದು ವಿಚಾರದ ಮುಂದೆಯೂ ಮುಂದೇನು ಎಂಬ ಪ್ರಶ್ನೆಯೇ ಎದ್ದು ನಿಲ್ಲುತ್ತಿತ್ತು. ಸಂಜೆಯ ಶರಣರ ಸಭೆಯಲ್ಲಿ ಮುಂದಿನ ವಿಚಾರಗಳ ಬಗ್ಗೆ ತೀರ್ಮಾನವಾಗಬೇಕಾಗಿದೆ ಎಂದು ಅಣ್ಣನವರು ಹೇಳಿದಾಗ ಇಬ್ಬರೂ ಹೂಂಗುಟ್ಟಿದರು. ಇವರಿಗೆ ಉತ್ಸಾಹ ಇಳಿದಿದೆಯೇ ಎಂಬ ಅನುಮಾನ ಬಂತು. ಇನ್ನೇನು, ಇಂಥ ದಿಗ್ಭ್ರಮೆಯುಂಟುಮಾಡುವ ಬೆಳವಣಿಗೆಗಳಾದ ಮೇಲೂ ಮನಸ್ಸು ಮೊದಲಿನಂತೆಯೇ ಹಗುರವಾಗಿರುವುದು ಸಾಧ್ಯವೇ ಎನಿಸಿ ಎಲ್ಲವೂ ಸರಿಹೋದೀತೆಂಬ ಆಶಾಭಾವನೆ ಮೊಳಕೆಯೊಡೆದಂತಾಯಿತು.

ಈ ವೇಳೆಗಾಗಲೇ ಕೇತಗನ ಪತ್ತೆಯ ಸುದ್ದಿ ಸಾಕಷ್ಟು ಪ್ರಚಾರಪಡೆದಂತೆ ಕಾಣಿಸಿತು. ಏಕೆಂದರೆ ಪಟ್ಟಣದ ಬೇರೆ ಬೇರೆ ಭಾಗಗಳಿಂದ ಅನೇಕ ಶರಣರು ಮಹಮನೆಯ ಬಳಿ ಬಂದರು. ಕೇತಗ ಮಹಮನೆಯಲ್ಲಿಯೇ ಇರುವನು, ಅವನನ್ನು ಕಾಣಬೇಕೆಂಬ ಹಂಬಲ ಎಲ್ಲರಿಗೂ. ಈ ಮೊದಲು ಅವನನ್ನು ಕಂಡವರು ಯಾರೂ ಇಲ್ಲ. ಅವನೊಬ್ಬ ಅತಿಮಾನುಷ ವ್ಯಕ್ತಿಯಂತೆ ಜನಗಳ ಕಲ್ಪನೆಯ ವೀರನಾಗಿಬಿಟ್ಟಿದ್ದ. ಅದರಲ್ಲಿಯೂ ಯುವಕರಿಗಂತೂ ಅತ್ಯುತ್ಸಾಹ. ತಾವೂ ಅಂತಹ ಕೇಂದ್ರ ವ್ಯಕ್ತಿಯಾದರೆ ಎಷ್ಟು ಚೆನ್ನ ಎಂಬ ಆಕಾಂಕ್ಷೆ ಅವರಲ್ಲಿ ಕೆಲವರಲ್ಲಾದರೂ ಮೂಡಿರಲು ಸಾಕು. ಸ್ವಲ್ಪ ಕಷ್ಟವನ್ನು ಅನುಭವಿಸಿದರೂ ನೂರಾರು ಜನರ ಕಣ್ಮಣಿಯಾಗಿ ವಿಭೂತಿಪುರುಷನಂತೆ ಇತರರ ಮುಂದೆ

ಸುಳಿಯುವುದೆಂದರೆ ಸಾಮಾನ್ಯವೇ? ಹೀಗಾಗಿ ಒಂದು ಸಂದಣಿಯೇ ಅಲ್ಲಿ ಸೇರಿಹೋಗಿತ್ತು. ಕೇತಗ ಅಲ್ಲಿಲ್ಲವೆಂದು ತಿಳಿದ ಮೇಲೆ ಹಲವರಿಗೆ ನಿರಾಶೆ. ಆದರೆ ಅವನನ್ನು ಕರೆತರಲು ಹಿರಿಯರು ಹೊರಡಲಿದ್ದಾರೆ ಎಂಬ ಸುದ್ದಿ ತಿಳಿದಾಗ ಆ ಯುವಕರಲ್ಲಿ ಕೆಲವರಿಗೆ ಹೊಸ ವಿಚಾರವೊಂದು ಮಿಂಚಿತು.

ಹಿರಿಯರು ಮುಖ್ಯ ಬೇಹುಗಾರರ ಕಾರ್ಯಸೌಧಕ್ಕೆ ಹೊರಟಾಗ ಒಂದು ದೊಡ್ಡ ಗುಂಪೇ ಅವರನ್ನು ಹಿಂಬಾಲಿಸಿತ್ತು. ಸರಸರನೇ ಅವರಲ್ಲಿ ಕೆಲವರು ಹೋಗಿ ಹೂವಿನ ಹಾರಗಳನ್ನು ತಂದರು, ಕೆಲವರು ತೆಂಗಿನಕಾಯಿಗಳನ್ನು ಸಂಪಾದಿಸಿಕೊಂಡು ಬಂದರು, ಬಸವಣ್ಣನವರಾದಿಯಾಗಿ ಹಿರಿಯರೆಲ್ಲ ಕುದುರೆ ಗಾಡಿಗಳಲ್ಲಿ ತೆರಳಿದರು, ಯುವಕರ ಗುಂಪು ಓಡುತ್ತಲೇ ಅವರನ್ನು ಹಿಂಬಾಲಿಸಿತು. ಗಾಡಿಗಳು ತೆರಳಲು ಅನುವಾದಾಗ ಗುಂಪಿನಲ್ಲಿದ್ದ ಯುವಕರು ಹೇಳಿದ್ದರು: "ಅಣ್ಣನವರೇ ನಾವೂ ಅಲ್ಲಿಗೆ ಬರುತ್ತೇವೆ. ಬಂದು ಸೇರುವವರೆಗೂ ತಾವು ಅಲ್ಲಿಂದ ಹೊರಡಬೇಡಿರಿ." ಅಣ್ಣನವರಿಗೆ ಹುಡುಗರ ಉತ್ಸಾಹ ಅರ್ಥವಾಗದಿರುತ್ತದೆಯೇ? ಅಲ್ಲದೆ ಇವರ ಉತ್ಸಾಹವನ್ನು ಕಂಡು ಸ್ವಲ್ಪ ಭರವಸೆಯೂ ಉಂಟಾಯಿತು. ಶರಣಮಾರ್ಗವನ್ನು ಮುಂದುವರೆಸಿಕೊಂಡು ಹೋಗುವವರು ಇವರೇ ಅಲ್ಲವೇ? ಇಂಥ ಯುವಕರ ಬೆಂಬಲವಿದ್ದರೆ ತಮ್ಮ ಕ್ರಾಂತಿಕಾರೀ ವಿಚಾರಗಳನ್ನು ಕಾರ್ಯರೂಪಕ್ಕೆ ತರಲು ಏನು ಕಷ್ಟ. ಆದರ್ಶದ ಬಗ್ಗೆ ಯುವಕರ ಮನಸ್ಸು ತಾನೇ ಖಚಿತವಾದ ನಿಲವಿನಿಂದ ಕೂಡಿರಬೇಕಾದದ್ದು. ಈ ಯುವಕರು ಅಂತಹವರು, ಸಮಾನತೆಯ ತೇರನ್ನು ಎಳೆಯಲು ಸಿದ್ಧವಾಗಿರುವ ಭಂಟರು ಎನ್ನಿಸಿತು. ಯುವಕರಿಗೆ ಆಶ್ವಾಸನೆಯಿತ್ತರು.

ಯುವಕರ ಗುಂಪು ಬರುವ ವೇಳೆಗೂ ಕೇತಗನನ್ನು ಹಿರಿಯ ಶರಣರು ಸುತ್ತುವರೆದು ಕಟ್ಟಡದಿಂದ ಹೊರತರುವ ವೇಳೆಗೂ ಸರಿಹೋಗಿತ್ತು. ಇವರು ಜೋರಾದ ಕಾಲ್ನಡಿಗೆಯಿಂದ ಕಾರ್ಯಸೌಧದ ಬಳಿ ಹೋಗುವ ವೇಳೆಗೆ ಮೊದಲೇ ಹೋಗಿದ್ದ ಹಿರಿಯರು ಅಲ್ಲಿ ನಡೆಸಬೇಕಾದ ವಿಧಿಗಳನ್ನು ನಡೆಸಿದ್ದರು. ಕೇತಗನನ್ನು ಕಲ್ಯಾಣದಿಂದ ಹೊರಗೆ ಕಳಿಸಬಾರದೆಂದು ಸೂಚಿಸಲಾಗಿತ್ತು. ಅವನ ರಕ್ಷಣೆಯ ಕಾರಣದಿಂದ ಈ ವ್ಯವಸ್ಥೆ. ಪರಿಸ್ಥಿತಿ ಮಾಮೂಲು ಎಂಬ ಸ್ಥಿತಿಗೆ ಮರಳುವವರೆಗೂ ಅವನು ಇಲ್ಲಿಯೇ ಇರಬೇಕೆಂದು ಸೂಚಿಸಿದುದು ಒಳ್ಳೆಯದೇ ಆಗಿತ್ತು. ಆ ಸೂಚನೆ ಬಾರದಿದ್ದರೂ ಅವನು ಇಲ್ಲಿಯೇ ಉಳಿಯುವವನಿದ್ದ. ಬಸವಣ್ಣನವರ ಮಹಮನೆಯಲ್ಲಿಯೇ ಗದ್ದುಂಬಳ್ಳಿಯಿಂದ ಬಂದವರಿಗೆ ಬಿಡಾರಕ್ಕೆ ವ್ಯವಸ್ಥೆಯಾಗಿತ್ತು.

ಹಿರಿಯರ ನಡುವೆ ಸಂಕೋಚಗೊಂಡು ನಡೆದು ಬರುತ್ತಿದ್ದ ಯುವಕನನ್ನು ಕಂಡೊಡನೆಯೇ ಅವನೇ ಕೇತಗನೆಂಬ ಅನುಮಾನ ಗುಂಪಿನಲ್ಲಿ ಯಾರಿಗೂ ಉಳಿಯಲಿಲ್ಲ. ಅವನನ್ನು ಗುಂಪು ಸುತ್ತುವರೆಯಿತು. ತಮ್ಮ ಕೈಲಿದ್ದ ಹಾರವನ್ನು ಅವನ ಕೊರಳಿಗೆ ಕೆಲವರು ಹಾಕಿದರು, ತೆಂಗಿನಕಾಯನ್ನು ನಿವಾಳಿಸಿ ಮತ್ತೆ ಕೆಲವರು ಇಡಿಗಾಯಿ ಒಡೆದರು. ಅವನನ್ನು ಕೆಲವರು ಎತ್ತಿ ತಮ್ಮ ಭುಜದ

ಮೇಲೆ ಕುಳ್ಳಿರಿಸಿಕೊಂಡರು. ಕೆಲವರು ಕುಣಿದರು, ಕೆಲವರು ಹಾಡಿದರು, ಮತ್ತೆ ಕೆಲವರು ಘೋಷಣೆ ಕೂಗಿದರು. ಇದ್ದಕ್ಕಿದ್ದಂತೆ ಇದೆಲ್ಲ ನಡೆದುದರಿಂದಲೂ, ಇಂಥವನನ್ನು ತಾನೆಂದೂ ಇದುವರೆಗೂ ಕಂಡಿರದಿದ್ದುದರಿಂದಲೂ ಒಂದೆರಡು ಕ್ಷಣಗಳ ಕಾಲ ವಿಚಲಿತನಾದ ಕೇತಗ ಇದು ತನ್ನ ಮೇಲಿನ ಅಭಿಮಾನದ ಪೂರ ಎಂದು ತಿಳಿಯಲು ತಡವಾಗಲಿಲ್ಲ. ಅವನಿಗೆ ಹೆಮ್ಮೆ ಎನ್ನಿಸಿದಂತೆ ಮುಖದ ಮೇಲೆ ಗಂಭೀರತೆಯ ಮುಗುಳ್ನಗೆ ಮೆರೆಯಿತು. 'ಕೇತಗನಿಗೆ ಜಯವಾಗಲಿ', 'ಶರಣರಿಗೆ ಜಯವಾಗಲಿ', 'ಜಾತಿಗೋಡೆ ಒಡೆಯಲು ಬನ್ನಿ', ಮುಂತಾದ ಘೋಷಣೆಗಳನ್ನು ಕೂಗಿದರು. ಗಲಭೆ ಮಾಡಬೇಡಿರೆಂದೂ ಮುಂದೆ ನಡೆಯಬೇಕೆಂದೂ ರಾಜಭಟರು ಸೂಚಿಸಿದ್ದರಿಂದ ಅಲ್ಲಿಂದ ಗುಂಪು ಹೊರಟಿತು.

ಅನಿರೀಕ್ಷಿತವಾಗಿ ಒಂದು ಮೆರವಣಿಗೆಯೇ ಏರ್ಪಾಟಾಗಿತ್ತು. ಕುತೂಹಲದಿಂದ ಸೇರಿದ್ದ ಯುವಕರ ಗುಂಪು ಅತ್ಯುತ್ಸಾಹದಿಂದ ಕೂಡಿತ್ತು. ತಾವು ಜೊತೆಯಲ್ಲಿಯೇ ಮೆರವಣಿಗೆಯಲ್ಲಿ ಕೇತಗನನ್ನು ಕರೆದೊಯ್ಯುವುದಾಗಿ ಗುಂಪು ಹಟ ಹಿಡಿಯಿತು. ಕೇತಗ ಬಳಲಿದ್ದಾನೆ ಎಂದರೆ ಅವನನ್ನು ಕೆಳಗಿಳಿಸುವುದೇ ಇಲ್ಲ, ಭುಜದ ಮೇಲೆ ಹೊತ್ತೇ ತರುವುದಾಗಿ ಹೇಳಿದಾಗ ಎದುರು ಹೇಳುವ ಧೈರ್ಯ ಯಾರಿಗೂ ಇರಲಿಲ್ಲ. ಬಂಡಿಯಲ್ಲಿ ಕೂತರೂ ಹಿರಿಯ ಶರಣರು ಮೆರವಣಿಗೆಯನ್ನೇ ಹಿಂಬಾಲಿಸಿದರು. ಅವರು ನಿಂತ ಕಡೆ ನಿಂತು, ನಿಧಾನವಾದ ಕಡೆ ತಡೆದು ಸಾಗಿದರು. ಇಂಥದ್ದನ್ನೆಲ್ಲ ಎಷ್ಟೋ ಕಂಡಿದ್ದ, ಇದನ್ನೂ ಪ್ರಾಯಶಃ ನಿರೀಕ್ಷಿಸಿದ್ದ ರಾಜಭಟರ ತಂಡವೊಂದು ಮೆರವಣಿಗೆಯನ್ನು ಹಿಂಬಾಲಿಸಿತು.

ದಾರಿಯುದ್ದಕ್ಕೂ ಘೋಷಣೆಗಳ ಕೂಗುವಿಕೆಯಿಂದ ಮನೆಯೊಳಗಿದ್ದ ಜನರು ಹೊರಬಂದು ನೋಡುವಂತಾಯಿತು. ಯುವಕನೊಬ್ಬನನ್ನು ಭುಜದ ಮೇಲೆ ಹೊತ್ತಿದ್ದುದರಿಂದ ಯಾವುದೋ ಕುಸ್ತಿಯ ಪಂದ್ಯದಲ್ಲಿ ಗೆದ್ದ ಮಲ್ಲನ ಮೆರವಣಿಗೆಯಿರಬೇಕೆಂದು ಕೆಲವರು ನೋಟಕರು ಭಾವಿಸಿದರು! 'ಕೇತಗನಿಗೆ ಜಯವಾಗಲಿ' ಎಂಬ ಘೋಷಣೆಯನ್ನು ಕೇಳಿದಾಗ ಈ ವಿಚಾರದ ಹಿನ್ನೆಲೆ ತಿಳಿದಿದ್ದ ಮತ್ತೆ ಕೆಲವರಿಗೆ ಎಲ್ಲವೂ ಅರ್ಥವಾಯಿತು. ಕೆಲವರು ಮೆರವಣಿಗೆಯಲ್ಲಿ ಸೇರಿದರು. ಹಲವಾರು ಚಿಣ್ಣರಂತೂ ಜೈ ಜೈ ಎನ್ನುತ್ತ ಗುಂಪಿನೊಡನೆ ಕೂಡಿದರು.

ಅಂತೂ ಊರ ಬೀದಿಗಳಲ್ಲಿ ಮೆರವಣಿಗೆ ಹಾಯ್ದು ನಿಧಾನವಾಗಿ ಬಂದು ಮಹಮನೆಯನ್ನು ಸೇರುವ ವೇಳೆಗೆ ಸಂಜೆಯಾಗಿತ್ತು. ಅಲ್ಲಿ ಆಗಲೇ ಸಂಜೆಯ ಸಭೆಗೆಂದು ಹಲವಾರು ಶರಣರು ಬಂದು ಸೇರಿದ್ದರು. ಮೆರವಣಿಗೆ ತಲುಪಿದಾಗ ಇದ್ದಕ್ಕಿದ್ದಂತೆ ಮಹಮನೆಯು ಅಂಗಳ ಉತ್ಸಾಹದ ವಿದ್ಯುತ್ತಿನಿಂದ ಬೆಳಗಿತು. ನಿರೀಕ್ಷೆಗೂ ಮೀರಿದ ಗುಂಪು ಅದು. ಅಣ್ಣನವರು ಬಂಡಿಯಿಂದಿಳಿದು ಬಂದು ಯುವಕರನ್ನೆಲ್ಲ ಅಭಿನಂದಿಸಿದರು. ನಿಮ್ಮ ಉತ್ಸಾಹವೇ, ಆದರ್ಶವೇ ಶರಣಮಾರ್ಗಕ್ಕೆ ದೊಡ್ಡ ಬೆಂಬಲ ಎಂದರು. ಬಂದವರಿಗೆಲ್ಲ ಬಾಯಾರಿಕೆಗೆಂದು ಪಾನಕ ಸಿದ್ಧವಾಯಿತು. ಸಂಜೆಯ ಕತ್ತಲು ಆವರಿಸುತ್ತಿದ್ದುದರಿಂದ ದೊಂದಿಗಳು ಬಂದವು. ಅಂಗಳವೆಲ್ಲ ತುಂಬಿ ಜನ ಹೊರಗೂ ನಿಲ್ಲುವಂತಾಯಿತು. ಹಿರಿಯ

ಶರಣರ ಸಭೆಯಿದೆ, ನೀವು ಹೋಗಿ ಎಂದು ಯುವಕರಿಗೆ ಹೇಳಲು ಸಾಧ್ಯವೇ? ಅಥವಾ ಹಾಗೆಂದರೂ ಅವರು ಹೋಗುತ್ತಾರೆಯೆ? ಆದರೆ ಸಭೆಯ ವಿಚಾರ ಹೇಳಬೇಕಲ್ಲ, ಮುಂದಿನ ಕ್ರಮವೇನೆಂದು ನಿರ್ಧರಿಸಿಬೇಕಲ್ಲ.

ಸಭೆಯ ವಿಚಾರ ಹಡಪದಪ್ಪಣ್ಣ ನಿವೇದಿಸಿ, ದಯವಿಟ್ಟು ಸಾವಧಾನವಾಗಿರಿ ಎಂದು ಬಿನ್ನವಿಸಿಕೊಂಡಮೇಲೆಯೇ ಯುವಕರ ಗುಂಪು ಸುಮ್ಮನಾದುದು. ಈ ಸಭೆಯ ಬಗ್ಗೆ ಕೆಲವರಿಗೆ ಮೊದಲೇ ತಿಳಿದಿದ್ದಿರಬಹುದು, ಆದರೆ ಬಹುಮಂದಿ ಕುತೂಹಲದಿಂದ ಬಂದವರು ಈಗಿನ ಸಭೆಯಲ್ಲಿ ತಾವೂ ಭಾಗವಹಿಸಬಹುದೆಂಬ ಉತ್ಸಾಹ ಮೂಡಿತು. ಶರಣರ ಸಭೆಯೆಂದರೆ ಹೇಗಿರುವುದೋ ಎಂಬ ಕುತೂಹಲವೂ ಕೆಲವರಿಗೆ.

ವಿಳಂಬಕ್ಕೆ ಅವಕಾಶವಿರಲಿಲ್ಲ. ತೀರ್ಮಾನ ಮುಖ್ಯವಾಗಿತ್ತು. ಕೇತಗ–ಚಂದಲೆಯರ ಮದುವೆಯ ನಿಶ್ಚಯದಿಂದಾಗಿ ಊರ ಹೊರ–ಒಳಗೆ ನಡೆದ ಘಟನೆಗಳೆಂತಹುವೆಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದ ಬಸವಣ್ಣನವರು, "ಘಟನೆಗಳಿಂದ ನಾವು ವಿಚಲಿತರಾಗಬೇಕಾಗಿಲ್ಲ ಎನ್ನಿಸುತ್ತದೆ. ಈ ಯುವಕರ ಉತ್ಸಾಹ ನೋಡಿದರೆ ನಾವಿಟ್ಟ ಮಾರ್ಗ, ಕೈಗೊಂಡ ತೀರ್ಮಾನ ಸರಿಯೆನಿಸುತ್ತದೆ. ದೊಡ್ಡ ಕಾರ್ಯವಾಗಬೇಕಾದರೆ ಕೆಲವು ತೊಂದರೆಗಳಾಗುತ್ತವೆ. ಆದರೆ ಅವೆಲ್ಲ ಅನಿವಾರ್ಯ" ಎಂದರು. ಯುವಕರ ಗುಂಪು ಹೋ ಎಂದು ಜೋರಾಗಿ ಕೂಗುತ್ತ ಚಪ್ಪಾಳೆ ತಟ್ಟಿದರು.

"ಇಷ್ಟೆಲ್ಲ ಆಗಿದೆ. ಮುಂದೇನು ಆದೀತೋ" ಎಂದು ಯಾರೋ ಅಂದರು.

"ಅಂದರೆ ಈ ಮದುವೆ ನಡೆಯಬೇಡವೇ?"

"ಹಾಗೆ ಅನ್ನಿಸುತ್ತೆ." ಈಗಂತೂ ಯುವಕರ ದಂಡು ಯಾರ ಮಾತು ಕೇಳಿಸದಂತೆ ಕೂಗಾಡಿತು. ಒಂದಿಬ್ಬರು 'ಜಾತಿವಾದಿಗಳಿಗೆ ಧಿಕ್ಕಾರ' ಎಂದು ಕೂಗಿದರು. 'ಮದುವೆ ಆಗಲೇ ಬೇಕು', 'ಯಾಕೆ ಆಗುವುದಿಲ್ಲವೋ ನೋಡಾಣ', 'ಯಾರು ನಿಲ್ಲಿಸುತ್ತಾರೋ ಮುಂದೆ ಬರಲಿ' ಇತ್ಯಾದಿ ಕಿರುಚಾಟ ನಡೆಯಿತು. ಕೆಲವರಿಗಂತೂ ಈ ಗೊಂದಲದ ಪರಿಸ್ಥಿತಿಯನ್ನು ಕಂಡು ದಿಗ್ಭ್ರಮೆಯೇ ಆಯಿತು. ಆದರೆ ಗುಂಪಿನಲ್ಲಿದ್ದ ಕೆಲವರು ಯುವಕರೇ ಮುಂದಾಗಿ ಸದ್ದಡಗಿಸಲು ಅಪ್ಪಣ್ಣ, ಉತ್ತಣ್ಣ ಮುಂತಾದವರಿಗೆ ನೆರವಾದರು.

"ಚೌಡಯ್ಯನೋರು ಏನಂತಾರೆ?" ಎಂದ ಯಾರೋ ಒಬ್ಬ ಯುವಕ. ಗುಂಪೆಲ್ಲ ಹೋ ಎಂದಿತು. 'ಚೌಡಯ್ಯನೋರಿಗೆ ಜಯವಾಗಲಿ' ಎಂದೂ ಕೆಲವರು ಕೂಗಿದರು. 'ನಿಮ್ಮ ಅಭಿಪ್ರಾಯವೇ ನನ್ನದೂ' ಎಂದು ಅಂಬಿಗರ ಚೌಡಯ್ಯ ಹೇಳಿಕುಳಿತಾಗ ಮತ್ತೆ ಕೂಗಾಟ, ಜಯಕಾರ ಮುಗಿಲು ಮುಟ್ಟಿತು. ಅವರು ಯುವಕರ ಸ್ಫೂರ್ತಿಯ ಕೇಂದ್ರವಾಗಿದ್ದಂತೆ ಕಾಣಿಸಿತು. ಕಲ್ಯಾಣದ ಬಿಸಿ ಯುವಕರಲ್ಲಿ, ಅದೂ ಕೆಳವರ್ಗದವರಿಗೆ ಸೇರಿದ ಯುವಕರಲ್ಲಿ ಹೊಸ ಆತ್ಮಸ್ಥೈರ್ಯವನ್ನು ತುಂಬಲು ಚೌಡಯ್ಯನವರು ಮಾಡುತ್ತಿದ್ದ ಕಾರ್ಯ ಶರಣರಿಗೆಲ್ಲ

ಪರಿಚಯವಿದ್ದದ್ದೇ. ಇಂಥ ಕ್ರಾಂತಿಕಾರಿ ವಿಚಾರಗಳನ್ನು ಯುವಕರಲ್ಲಿ ಬಿತ್ತಿದ್ದವರು ಅವರೇ. ಶರಣರಲ್ಲಿ ಮೇಲು ಜಾತಿಗೆ ಸೇರಿದವರೆಂದುಕೊಳ್ಳುವ ಕೆಲವರ ಬಗ್ಗೆ, ಅವರ ಸಂಪ್ರದಾಯ ಶರಣತೆಯ ಬಗ್ಗೆ ಚೌಡಯ್ಯನವರಿಗಿದ್ದ ಕೋಪ ತಿಳಿದದ್ದೇ.

ಈ ಮಧ್ಯೆ ಅಳ್ಳಯ್ಯ–ಮಧುವಯ್ಯ–ಕೇತಗರು ದಿಙ್ಮೂಢರಾಗಿದ್ದರು. ಅಳ್ಳಯ್ಯನವರಿಗಂತೂ ಕನಸಿನ ರೀತಿಯಲ್ಲಿ ಏನೇನೋ ನಡೆಯುತ್ತಿರುವಂತೆ ತೋರಿತು. ಇಷ್ಟು ಜನರನ್ನು ಈ ರೀತಿ ಅವರು ಎದುರಿಸಿದ್ದೇ ಇದುವರೆಗೆ ಇಲ್ಲ. ಮಗ ಕಾಣೆಯಾದಾಗ ಅವರ ಮನಸ್ಸಿನಲ್ಲಿ ಭಯ ಆವರಿಸಿತ್ತು. ಅವನು ವಾಪಸು ಬಂದರೆ ಸಾಕು, ಮತ್ತೇನೂ ಬೇಡ ಎನ್ನಿಸಿತ್ತು. ಈಗಂತೂ ಯೋಚಿಸಲೂ ಅವರಿಗೆ ಸಾಧ್ಯವಾಗುತ್ತಿಲ್ಲ. ಕೇತಗನಿಗೇನೋ ಒಂದು ಬಗೆಯ ಸಾರ್ಥಕ್ಯ ಭಾವನೆಯೇ ಮೂಡಿದಂತಿತ್ತು. ತನ್ನೆಡೆಗೆ ನೋಡುವ ಸಾವಿರ ಕಣ್ಣುಗಳ ನಡುವೆ ಕುಳಿತು ಎಲ್ಲೋ ತೇಲುತ್ತಿರುವ ಭಾವನೆ ಅನುಭವಿಸಿದ. ಈ ಗುಂಪಿನ ಗದ್ದಲದ ನಡುವೆ ಯಾರಿಗೂ ಮಾತಿಗೇ ಅವಕಾಶವಿರಲಿಲ್ಲ. ಒಂದು ರೀತಿಯಲ್ಲಿ ಚೌಡಯ್ಯನವರ ಮಾತು ಯುವಕರ ಅಭಿಪ್ರಾಯಕ್ಕೆ ಹಿರಿಯರೂ ಬೆಂಬಲವಿತ್ತಂತೆ ಎನ್ನಿಸಿಬಿಟ್ಟಿತು. ಹಾಗಾಗಿ ಬಂದದ್ದು ಬರಲಿ, ಈ ಮದುವೆ ಆಗಲೇಬೇಕು ಎಂದು ನಿರ್ಧಾರವಾದಂತಾಯಿತು.

## ೧೬

ನಾಗಕ್ಕ ಚೆನ್ನಬಸವ ಹಾಗೂ ನಾನು ಕೃಷ್ಣೆ-ಮಲಪ್ರಹರಿಯರ ಮಡಿಲಲ್ಲಿ ಸಂತೋಷವಾಗಿದ್ದೆವು. ಮಠ, ಸಂಗಮನಾಥ, ಹೂದೋಟ ಈಶಾನ್ಯಗುರುಗಳು ಎಲ್ಲವೂ ನಮ್ಮ ಹೃದಯಕ್ಕೆ ಹತ್ತಿರವಾದವು. ನಸುಕಿಗೆ ಎದ್ದು ನದಿಗೆ ಹೋಗಿ ಮಿಂದು ಒದ್ದೆ ಬಟ್ಟೆಯಲ್ಲಿ ಬಂದು ದೊಡ್ಡ ಕೊಡದ ತುಂಬ ಅಗ್ಗವಣಿಯನ್ನು ತುಂಬಿ, ಬಾಯಿಗೆ ಬಟ್ಟೆ ಕಟ್ಟಿ ಗುರುಗಳ ಪೂಜೆಗಾಗಿ ತಂದಿಟ್ಟು, ತೋಟಕ್ಕೆ ಹೋಗಿ ಬಗೆಬಗೆಯ ಹೂವುಗಳನ್ನು ಕೀಳುತ್ತಿದ್ದೆ. ದೇವರ ಪೂಜೆಗೆ ಹೂವುಗಳೇಕೆ ಬೇಕು ಎಂದು ಆಗಲೇ ನನಗೆ ಸಂಶಯ. ದೇವರನ್ನು ಅಲಂಕರಿಸುವುದು ಎಂದರೆ ಏನು ಎಂದು ಚಕಿತಗೊಳ್ಳುತ್ತಿದ್ದೆ. ತಮಗೆ ಬೇಕಾದಂತೆ ದೇವರಿಗೆ ಹೂವೇರಿಸಿ ಭಾವುಕರಾಗುವುದೆಂದರೆ ! ಎಲ್ಲವೂ ಒಗಟೆಯೆನಿಸುತ್ತಿತ್ತು. ಆದರೂ ಮೊದಮೊದಲು ನಾನು ಹೂ ಕೀಳಲು ಹೋದರೆ ಎಂಥ ಭಕ್ತಿ ಭಾವ ಮನಸ್ಸನ್ನು ಆಕ್ರಮಿಸಿಬಿಡುತ್ತಿತ್ತು. ಸ್ವಲ್ಪವೂ ಹೂ ನೋಯಬಾರದೆಂಬಂತೆ ಹೂ ಬಿಡಿಸುತ್ತಿದ್ದೆ. ಹಾಗೆ ಕೀಳುವಾಗ ಎಲ್ಲಾದರೂ ಹೂವಿನ ಪಕಳೆ ಹರಿದರೆ ಕಣ್ಣಲ್ಲಿ ನೀರೇ ಬಂದುಬಿಡುತ್ತಿತ್ತು. ನಾನು ಮನಸ್ಸನ್ನು ನಟ್ಟು ಕೆಲಸಮಾಡುವುದಕ್ಕಾಗದಿರುವುದರಿಂದ ಹೀಗಾಯಿತೇ ಎನ್ನಿಸುವುದು. ಹೂ ಕೀಳುವಾಗ ಮಾತ್ರವಲ್ಲ, ಸಂಧ್ಯಾವಂದನೆ ಮಾಡುವಾಗ, ಪೂಜಿಸುವಾಗ ಕೂಡ ಚಿತ್ತೈಕಾಗ್ರತೆ ಅಸಾಧ್ಯವಾಗುತ್ತಿತ್ತು. ನಾನು ಇಷ್ಟನ್ನೇ ಸಾಧಿಸಲಾರದವನು ಮತ್ತೇನು ಸಾಧಿಸಬಲ್ಲೆ ಎಂಬ ಅಸಾಧಾರಣ ನೈರಾಶ್ಯಭಾವ ಆವರಿಸುತ್ತಿತ್ತು.

ಮಾಣಿಗಳಿಗೆ ಕನ್ನಡ ಅಕ್ಷರಗಳನ್ನು ಕಲಿಸುವುದು, ಗುರುಗಳ ಬಳಿ ವಿದ್ಯೆ ಕಲಿಯುವುದು ತುಂಬ ಸಾರ್ಥಕ ಗಳಿಗೆಗಳು ಎನ್ನಿಸುತ್ತಿದ್ದವು. ಎಷ್ಟೋ ವೇಳೆ ಕನ್ನಡದ ಅಕ್ಷರಗಳ ಗೆರೆಗಳನ್ನು ಬರೆದ ಹಾಗೆ ಕಳೆದುಕೊಂಡ ಅಮ್ಮನ ಮಡಿಲಲ್ಲಿ ಮಲಗಿ ಅವಳ ಕೆನ್ನೆ ನೇವರಿಸಿದಂತಾಗುತ್ತಿತ್ತು. ಏನಿದು ಭಾಷೆ ಎಂದರೆ ಎಂಬ ಭಾವ ಬರುತ್ತಿತ್ತು. ವೇದಗಳನ್ನು ಬ್ರಹ್ಮ ಹೇಳಿದನಂತೆ; ಅವುಗಳದು ಸಂಸ್ಕೃತವೋ ಯಾವುದೋ ಭಾಷೆ. ಸಂಸ್ಕೃತವೆಂದರೆ ಗೀರ್ವಾಣಭಾಷೆಯಂತೆ; ಕನ್ನಡವೆಂದರೆ ಜನಪದರ ಭಾಷೆಯಂತೆ. ದೇವರು ಸರ್ವವನ್ನು ಬಲ್ಲ ಎನ್ನುತ್ತಾನೆ. ಅವನಿಗೆ ಸಂಸ್ಕೃತದಲ್ಲಿ ಮಂತ್ರ ಹೇಳಿ ಅರಿಕೆ ಮಾಡಿಕೊಳ್ಳುತ್ತಾರೆ, ಏಕೆ ದೇವರಿಗೆ ಕನ್ನಡ ಬರುವುದಿಲ್ಲವೇ? ನಾನು ಪ್ರೀತಿಯಿಂದ ಕನ್ನಡದಲ್ಲಿ ಕರೆದರೆ ಸರ್ವಜ್ಞನಾದ ದೇವರಿಗೆ ಕೇಳಿಸದಿರುತ್ತದೆಯೆ? ಹಾಗೆ ಕೇಳಿಸಕೊಳ್ಳಲಾರದ, ಪ್ರೀತಿಯನ್ನು

ಅರ್ಥಮಾಡಿಕೊಳ್ಳಲಾರದವನು ಅದೆಂಥ ದೇವರು. ನನ್ನ ಹೃದಯದಾಳದ ಭಾವನೆಗೆ ಅವನು ಸ್ಪಂದಿಸಲಾರದವನಾದರೆ ಅವನು ಸಂಗನಲ್ಲ ಮಂಗ! ಛೇ, ಛೇ, ಏನೆಲ್ಲ ಅಂದುಕೊಂಡುಬಿಟ್ಟೆ ಎಂದು ಪರಿತಪಿಸುವಂತಾಗುತ್ತಿತ್ತು, ಕೊನೆಗೆ ಅವನಿಗೆ ಕನ್ನಡ ತಿಳಿಯದಿದ್ದರೆ, ನಾನು ಕನ್ನಡದಲ್ಲಿಯೇ ಮಾತನಾಡಿ ಅವನು ಕಲಿಯುವಂತೆ ಮಾಡಿಬಿಡುತ್ತೇನೆ ಎಂದುಕೊಳ್ಳುತ್ತಿದ್ದೆ. ನನ್ನ ಯೋಚನೆಗೆ ನನಗೇ ನಗು.

ಈಶಾನ್ಯ ಗುರುಗಳ ನೋಟವೆಂದರೆ ಬೆಳಗಿನ ಬಿಸಿಲು; ಮಾತೆಂದರೆ ಕೃಷ್ಣೆ –ಮಲಪ್ರಹರಿಯರ ಜುಳುಜುಳು. ಅವರ ಪಾದದಡಿ ಕುಳಿತು ಅವರು ಹೇಳುವುದನ್ನು ಕೇಳುವುದೆಂದರೆ ಅರ್ಥವಾಗದಿದ್ದರೂ ಆಕಾಶದ ದಟ್ಟ ನೀಲಿಯನ್ನು ಕಂಡಂತೆ, ಏನೋ ಗಾಢವಾದ ಅನುಭೂತಿ. ಸೃಷ್ಟಿ, ದೈವ, ಮನುಷ್ಯ ಜನ್ಮ, ಬದುಕಿನ ಅರ್ಥ– ಯಾವಯಾವುದನ್ನೋ ಕುರಿತು ಗಳಿಗೆಗಟ್ಟಲೆ ಮಾತಾಡುವರು. ಪುಂಖಾನುಪುಂಖವಾಗಿ ವೇದ ಉಪನಿಷತ್ತು ಭಗವದ್ಗೀತೆಗಳನ್ನು ಉಲ್ಲೇಖಿಸುವರು. ಆಗಾಗ ಆಗಿಹೋದ ವಿವಿಧ ಮಹಾಮಹಿಮರ ಕಾರ್ಯಗಳನ್ನು ವಿವರಿಸುವರು. ಬೇರೆ ಬೇರೆ ಪುಣ್ಯಪುರುಷರು ಕುಂಡುಕೊಂಡ ಸತ್ಯಗಳು ಪರಸ್ಪರ ವಿರೋಧವೆಂಬಂತೆ ಕಾಣಬಹುದಾದ ಸಾಧ್ಯತೆಯನ್ನು ಮನಗಾಣಿಸುವರು. ಇಷ್ಟೊಂದು ದೇವರುಗಳ ಉಲ್ಲೇಖ ಬರುತ್ತದಲ್ಲ, ದೇವರೊಬ್ಬನೇ ಎಂದು ಹೇಳುತ್ತಾರಲ್ಲ, ಇವೆಲ್ಲವನ್ನು ನಂಬುವುದು ಹೇಗೆ ಎನ್ನುವರು. ಒಬ್ಬ ಪ್ರಾಮಾಣಿಕ ಅನ್ವೇಷಕನಿಗೆ ಬರಬಹುದಾದ ಅನುಮಾನಗಳನ್ನೆಲ್ಲ ಅವರು ಹೇಳುತ್ತಿದ್ದರು. ಹಾಗಾದರೆ ದೇವರು, ಅತ್ಯಂತಿಕ ಸತ್ಯ ಎಂದರೆ ಏನು ಎನ್ನುವ ಪ್ರಶ್ನೆ ಹಾಕಿಕೊಂಡು ನಿಧಾನವಾಗಿ ಹೇಳುವರು: ಬೇರೆ ಬೇರೆಯವರಿಗೆ ಸತ್ಯವು ವಿಭಿನ್ನವಾಗಿ ಕಾಣುವುದಿರಲಿ, ಒಬ್ಬನಿಗೇ ಬೇರೆ ಬೇರೆ ಕ್ಷಣ ಬೇರೆಯಾಗಿ ಕಾಣುವುದಿಲ್ಲವೇ? ಯಾವಾಗ ಕಂಡದ್ದು ಸತ್ಯ ಹಾಗಾದರೆ? ಈ ಬದುಕಿನಲ್ಲಿ ಘರ್ಷಣೆ ಬರುವುದಕ್ಕೆ ಕಾರಣವೆಂದರೆ ನಾನು ಕಂಡದ್ದು ಸತ್ಯ ಎಂದು ಸಾಧಿಸಹೊರಡುವುದರಿಂದ. ಸತ್ಯವನ್ನು ಸಾಧಿಸಿ ತೋರಿಸಲು ಸಾಧ್ಯವೇ? ಪ್ರೀತಿಯನ್ನು ಎದೆ ಬಗೆದು ತೋರಿಸಲಾದೀತೆ? ತನ್ನ ಕಾಣ್ಕೆಯನ್ನು ಕಣ್ಣಿಂದ ಕಿತ್ತಿಡಲಾದೀತೆ? ಸತ್ಯ ಎಂದರೆ ನನ್ನ ಅನುಭವವೇ ಅಲ್ಲವೇ? ಅನುಭವ ಕೇವಲ ವೈಯಕ್ತಿಕವಲ್ಲವೇ? ನನ್ನ ಹಸಿವು ನನ್ನದೇ ತಾನೇ. ಅದರ ಅನುಭವವೂ ನನ್ನದೇ, ಅದನ್ನು ಪೂರೈಸಿಕೊಳ್ಳಲು ತಿನಬೇಕಾದವನೂ ನಾನೇ ಅಲ್ಲವೇ? ನಿನ್ನ ಹಸಿವು ನಿಜವಾದುದಲ್ಲ, ನನ್ನದೇ ಸತ್ಯ ಎಂದು ಹೊಡೆದಾಡಲಾದೀತೇ? ಹಾಗೆಯೇ ಈ ಪಂಥ, ಮತ ಇವೆಲ್ಲ ಲೋಕದ ಜನ ಗುಂಪುಗಟ್ಟಲು ಸಾಧನಗಳೇ ಹೊರತು ಅನ್ವೇಷಕನಿಗೆ ಮಾರ್ಗದರ್ಶಿಯಾಗಬಲ್ಲ ದೀವಟಿಗೆಯಲ್ಲ ಎನ್ನುವರು. ನಾನು ಆಲೋಚಿಸುವ ರೀತಿ, ಅಷ್ಟೇಕೆ ನನ್ನ ಅನುಭವದ ರೀತಿಯ ಮೇಲೂ ಈಶಾನ್ಯಗುರುಗಳು ಮಾಡಿದ ಪ್ರಭಾವ ದಟ್ಟವಾದದ್ದು, ಆಳವಾದದ್ದು.

ಮನೆಯಲ್ಲಿ ನಾಗಕ್ಕನ ವಾತ್ಸಲ್ಯ, ಚೆನ್ನಬಸವನ ಮುದ್ದಾಟ ನನಗೆ

ಜೀವನವೆಂದರೆ ಅಂಗಾತ ನೀರಮೇಲೆ ಮಲಗಿ ಕಣ್ಮುಚ್ಚಿ ತೇಲುತ್ತಿರುವುದು ಎನಿಸಿತ್ತು. ಎಷ್ಟೋ ವೇಳೆ ಗುರುಗಳ ಮಾತು, ಚೆನ್ನಬಸವನ ಪ್ರಶ್ನೆಗಳಲ್ಲಿ ವ್ಯತ್ಯಾಸವೇ ಕಾಣದಂತಹ ಆಶ್ಚರ್ಯಕರ ಸಾಮ್ಯ ಗೋಚರಿಸುವುದು. ಮೂರ್ನಾಲ್ಕು ವರ್ಷಗಳಾಗಿದ್ದ ಅವನನ್ನು ಜೊತೆಯಲ್ಲಿ ಹೋಗುವಾಗ ಕೈಹಿಡಿದರೆ ಕೊಸರಿಕೊಳ್ಳುವನಲ್ಲ. ಅಗೆಲ್ಲ 'ಜೋಪಾನ ಬಿದ್ದೀಯೆ' ಎನ್ನುತ್ತಿದ್ದೆ. 'ಬಿದ್ದರೆ ನಾನೇ ಏಳ್ತೀನಿ' ಎನ್ನುತ್ತಿದ್ದ. ನನಗೆ ಅವನ ಮಾತು ಕೇಳಿ ಅಚ್ಚರಿ, ಅದೇ ದೊಡ್ಡ ಸತ್ಯವೆಂದೂ ಅನ್ನಿಸಿಬಿಡುತ್ತಿತ್ತು, ಕೆಲವೊಮ್ಮೆ ಅವನ ಜೊತೆ ಕಾಲ ಕಳೆಯುವುದೆಂದರೆ ಕಾಲದ ಬೆನ್ನನ್ನೇ ಏರಿದ ಹಾಗೆ.

ಚೆನ್ನಬಸವ ಬೆಳೆಯುತ್ತ ಬೆಳೆಯುತ್ತ ತುಂಬ ಗಂಭೀರನೇ ಆದನೆನ್ನಿಸುತ್ತದೆ. ಚಿಕ್ಕ ಮಗುವಾದಾಗಿನಿಂದಲೂ ಅವನದು ತುಂಬ ಕ್ರಮಬದ್ಧಜೀವನ. ಮಂಗಳವಾಡಕ್ಕೆ ಹೋದಮೇಲೆ, ಕಲ್ಯಾಣಕ್ಕೆ ಬಂದ ಮೇಲೆ ಕೂಡ ಅವನು ಶಿಸ್ತನ್ನು ಸದಾ ಕಾಪಾಡಿಕೊಂಡು ಬಂದವನೇ. ನಿಯಮವೆಂದರೆ ನಿಯಮ. ಕೆಲವೇಳೆ ತನ್ನಿಂದ ತಪ್ಪಾದರೆ ಅವನೇ ನಿಗದಿಪಡಿಸಿಕೊಂಡಿದ್ದ ಶಿಕ್ಷೆಯನ್ನು ವಿಧಿಸಿಕೊಳ್ಳುತ್ತಿದ್ದ. ಇತರರಲ್ಲೂ ಅವನು ಅದನ್ನೇ ನಿರೀಕ್ಷಿಸುವವನು. "ನಿನ್ನ ಹಾಗೇ ಎಲ್ಲರೂ ಪರಿಪೂರ್ಣರಾಗಲು ಸಾಧ್ಯವೇ?" ಎಂದು ಅವನು ಇತರರ ಅಶಿಸ್ತಿನ ಬಗ್ಗೆ ಸಿಡಿಮಿಡಿಗೊಂಡಾಗ ಕೇಳುತ್ತಿದ್ದೆ. "ನನ್ನ ಸ್ವಭಾವವೇ ಹಾಗೆ" ಎನ್ನುತ್ತಿದ್ದ, ಮೌನಿಯಾಗಿಬಿಡುತ್ತಿದ್ದ. ಅವನ ಗಂಭೀರ ಮುಖ ಕಂಡರೆ ತಮಾಷೆ ಮಾಡಲು ನನಗೆ ಭಯವೇ ಆಗುತ್ತಿತ್ತು.

ಅವನು ಬ್ರಹ್ಮಚಾರಿಯಾಗಿಯೇ ಉಳಿದನಲ್ಲ. ನನಗೆ ಮದುವೆಯಾಗಬೇಕೆನ್ನಿಸಿದಂತೆ ಅವನಿಗೆ ಅನ್ನಿಸಿರಲಿಲ್ಲವೇ? ಅವನು ಆಸೆಯನ್ನು ವ್ಯಕ್ತಪಡಿಸಿದ್ದರೆ ಅವನ ಮದುವೆಗೆ ಏರ್ಪಾಟುಮಾಡುವುದೇನೂ ಕಷ್ಟವಾಗಿರಲಿಲ್ಲ. ಒಂದೆರಡು ಬಾರಿ ಪರೋಕ್ಷವಾಗಿ ಆ ವಿಷಯ ಪ್ರಸ್ತಾಪಿಸಿದ್ದಕ್ಕೆ ಅವನು 'ನನ್ನ ಪಾಡಿಗೆ ನನ್ನ ಬಿಡಿ' ಎಂದಷ್ಟೇ ನಿಷ್ಠುರವಾಗಿ ಹೇಳಿದ್ದ. ಸತಿಪತಿಯರೊಂದಾದ ಭಕ್ತಿ ಶಿವನಿಗೆ ಹಿತವಾದರೂ ಸ್ವಯಂಪ್ರೇರಿತವಾದ ಬ್ರಹ್ಮಚರ್ಯೆಗೂ ಶರಣಧರ್ಮದ ಒಪ್ಪಿಗೆಯಿದೆಯಲ್ಲ. ಯಾವುದಕ್ಕೂ ಬಲವಂತ ಬೇಡ ಎಂಬುದೇ ಅದರ ಉದ್ದೇಶ. ನಾಗಕ್ಕನ ಕಠಿಣ ಜೀವನ ರೀತಿ ಅವನಲ್ಲಿ ರಕ್ತಗತವಾಗಿದೆಯೇನೋ ಅನ್ನಿಸುವುದು. ಅವನ ಶಿಸ್ತು ಮತ್ತು ಸತತ ಪ್ರಯತ್ನಗಳ ಕಾರಣದಿಂದಾಗಿ ಅವನು ಪ್ರಕಾಂಡ ಪಂಡಿತನಾದ. ಲೀಲಾಜಾಲವಾಗಿ ಆಗಮಗಳಿಂದ ನಿಯಮಗಳನ್ನು ಉಲ್ಲೇಖಿಸಬಲ್ಲವನಾಗಿದ್ದ. ಕೆಲವೇಳೆ ನಮ್ಮ ಚನ್ನಬಸವ ಸ್ವಲ್ಪ ಆರ್ದ್ರತೆಯಿಂದ ಕೂಡಿರುತ್ತಿದ್ದರೆ ಎಷ್ಟು ಚೆನ್ನ ಅನ್ನಿಸುತ್ತಿತ್ತು. ಅವನು ತನ್ನ ವಚನಗಳಲ್ಲಿ ಶರಣರು ಅನುಸರಿಸಬೇಕಾದ ನಿಯಮಗಳನ್ನು ಹೇಳಿರುವುದನ್ನು ಓದುತ್ತಿದ್ದರೆ ನನಗಂತೂ ದಟ್ಟವಾದ ಕಾಡಿನಲ್ಲಿ ನುಗ್ಗಿ ದಾರಿತಪ್ಪಿ ಭಯಗೊಂಡ ಅನುಭವವಾಗಿಬಿಡುವುದು!

ಆರುವರ್ಷಗಳ ಕಾಲ ಎಷ್ಟು ಬೇಗ ಮುಗಿದುಹೋಯಿತು ಎನಿಸುವುದು. ಪ್ರಾಯಶಃ ಎಲ್ಲಕ್ಕೂ ನಂತರ 'ಅನ್ನಿಸುವುದು' ಎಂದು ಹೇಳಬೇಕೇನೋ.

ಯಾಕೆಂದರೆ ಜೀವನದಲ್ಲಿ ವಸ್ತು ಇರುವುದಕ್ಕಿಂತ ಹೆಚ್ಚಾಗಿ ಅದನ್ನು ಕಂಡು ನನಗೆ ಏನು ಅನ್ನಿಸಿತು ಅನ್ನುವುದೇ ಮುಖ್ಯವಲ್ಲವೇ? ಕಾಣ್ಕೆಯನ್ನು ಕುರಿತು ಈಶಾನ್ಯಗುರುಗಳು ಒಮ್ಮೆ ವಿವರಿಸಿದರು : "ವಸ್ತು ಇದೆ, ಕಣ್ಣಿದೆ ಎರಡೂ ಸೇರಿದರೆ ಕಾಣ್ಕೆ ಅನ್ನುವುದು ಸಾಮಾನ್ಯವಾದ ಕಲ್ಪನೆ. ಅದು ನಿಜವೂ ಸಹ. ಆದರೆ ವಸ್ತುವನ್ನು ಕಣ್ಣೆದುರಿಗಿರಿಸಿಕೊಂಡರೂ ಕೆಲವೇಳೆ ನಾವು ನೋಡುವುದಿಲ್ಲವಲ್ಲ, ಅನ್ಯಮನಸ್ಕನಾಗಿದ್ದರೆ ಏನೂ ಗಮನಕ್ಕೆ ಬಾರದು ಅಲ್ಲವೇ? ಅಂದರೆ ಮನುಷ್ಯನ ಜೀವನದಲ್ಲಿ ಈ ಗಮನ ಮುಖ್ಯ" ಅವರನ್ನು ನೆನಸಿಕೊಂಡಾಗಲೆಲ್ಲ ಕಣ್ಣು ನೀರಾಡುವುದು.

ಕಪ್ಪಡಿ ಸಂಗಮದಲ್ಲಿ ಆರು ವರ್ಷ ಕಳೆಯಿತೆಂದೆ; ಅಥವಾ ಮುಗಿಯುತ್ತಿತ್ತೇನೋ. ಒಮ್ಮೆ ಈಶಾನ್ಯಗುರುಗಳ ಬಳಿ ಒಬ್ಬನೇ ಇದ್ದಾಗ ನನ್ನನ್ನು ಕುರಿತು, "ಮುಂದೇನು ಮಾಡಬೇಕೆಂದಿರುವೆ, ಮಗು?" ಎಂದು ಕೇಳಿದರು. ನನಗೆ ಅರ್ಥವೇ ಆಗಲಿಲ್ಲ. ಅದನ್ನ ಕುರಿತು ಯೋಚಿಸಿದ್ದರೆ ತಾನೇ ನಾನು? ಮುಂದೆ ಮಾಡುವುದೇನು: ನಸುಕಿಗೆ ಏಳುವುದು, ನದಿಯಲ್ಲಿ ಮೀಯುವುದು, ಹೂ ಕೀಳುವುದು ಇತ್ಯಾದಿ ತಾನೇ? ನನ್ನ ಜೀವನವೆಂದರೆ ಅಷ್ಟೇ ಅಲ್ಲವೇ? ಅವರ ಪ್ರಶ್ನೆ ಅರ್ಥವಾಗದವನಂತೆ ಪಿಳಿಪಿಳಿ ಕಣ್ಣು ಬಿಟ್ಟಿದ್ದೆ, ಅವರು ನನ್ನ ಗೊಂದಲವನ್ನು ಕಂಡವರಂತೆ "ಅಂದರೆ ಮುಂದೆ ಜೀವನವನ್ನು ಹೇಗೆ ಸಾಗಿಸಬೇಕೆಂದು ಯೋಚಿಸಿದ್ದೀಯೆ?" ಎಂದರು.

"ಗುರುದೇವರೇ, ನನಗೆ ನೀವು ಕೇಳುವುದೇಕೆ ಎಂದೇ ತಿಳಿಯುತ್ತಿಲ್ಲ!" ಎಂದೆ ಅಳುಕಿನಿಂದ.

"ಅಲ್ಲಪ್ಪ, ಬಸವರಾಜ. ನೀನು ಈಗಾಗಲೇ ತರುಣನಾಗಿದ್ದೀಯೆ. ಭಾವದಲ್ಲಿ ಇಲ್ಲಿಗೆ ಬಂದೆ, ಈಗ ವಿಕ್ರಮ. ಆರು ವರ್ಷಗಳಾಗಿವೆ. ನೀನು ಬಂದಾಗ ಹದಿನೈದೋ ಹದಿನಾರೋ ವರ್ಷ, ಅಂದರೆ ಈಗ ನಿನಗೆ ಇಪ್ಪತ್ತೊಂದು ಇಪ್ಪತ್ತೆರಡು ವರ್ಷವಾಯಿತೇನೋ. ಎಷ್ಟು ಕಾಲವೆಂದು ಇಲ್ಲೇ ಇರುತ್ತೀಯೆ?" ಎಂದರು ನನ್ನ ಎದೆ ಧಸಕ್ಕೆಂದಿತು. ಇಲ್ಲಿಂದ ಹೋಗು ಎಂದು ಹೇಳುವ ರೀತಿಯೇ ಗುರುಗಳದು ಎನ್ನಿಸಿತು. ನನಗೆ ಕತ್ತಲೆ ಕವಿದು ಬಂದಂತಾಯಿತು. ನಾನೇನಾದರೂ ತಪ್ಪು ಮಾಡಿರುವೆನೆ? ಹಾಗೆ ಮಾಡಿದ್ದರೆ ದಂಡಿಸಬಹುದಾದ ಅಧಿಕಾರ ಇರುವುದು ಗುರುಗಳಿಗೊಬ್ಬರಿಗೇ ಅಲ್ಲವೇ ? ಆದರೂ ಹಾಗೆ ಮಾಡದೆ ಹೊರಕಳಿಸುವ ಯೋಜನೆಯನ್ನು ಗುರುಗಳೇಕೆ ಮಾಡುತ್ತಿದ್ದಾರೆ ಎನ್ನಿಸಿತು.

"ಗುರುಗಳೇ, ನಾನೆಲ್ಲಿಯೂ ಹೋಗುವುದಿಲ್ಲ. ಸಂಗ ಮತ್ತು ನಿಮ್ಮ ಸೇವೆ ಮಾಡುತ್ತ ಇಲ್ಲಿಯೇ ಇದ್ದುಬಿಡುತ್ತೇನೆ. ನನ್ನನ್ನು ಹೊರದಬ್ಬಬೇಡಿ. ತಪ್ಪಾಗಿದ್ದರೆ ಏಟುಕೊಟ್ಟು ತಿದ್ದಿ" ಎಂದೆ ಬಿಕ್ಕುತ್ತ.

"ಹುಚ್ಚು ಬಸವರಾಜಾ, ನೀನು ತಪ್ಪು ಮಾಡಿದೆ ಎಂದು ನಾನೆಲ್ಲಿ ಹೇಳಿದೆನಪ್ಪಾ? ನಿನ್ನಂಥವನು ತಪ್ಪಿಯಾನೆ? ಸಂಗನ ಕೃಪೆಯಾಗದಿದ್ದರೆ

ನಿನ್ನಂಥವರು ಹುಟ್ಟುವುದೇ ಇಲ್ಲ. ನಾನು ಅಂದದ್ದು, ನಿನ್ನಂಥ ಶಕ್ತಿಯಿರುವ ತರುಣ ದೊಡ್ಡ ಕೆಲಸ ಮಾಡಬೇಕು ಮಗು" ಎಂದರು.

"ನಿಮ್ಮ ಸೇವೆಗಿಂತ ದೊಡ್ಡದು ಯಾವುದಿದೆ, ಗುರುಗಳೇ?" ಎಂದು ಗದ್ಗದಿಸಿದೆ.

"ಮತ್ತದೇ ಹೇಳುವೆಯಲ್ಲ. ದೊಡ್ಡ ಕೆಲಸವೆಂದರೆ ಹೆಚ್ಚಿನ ಆದಾಯದ್ದೆಂದಲ್ಲ ನಾನು ಹೇಳುತ್ತಿರುವುದು. ನಿನ್ನಂಥವನ ತಲೆಯಲ್ಲಿ ಆಕಾಶದಗಲದ ಆದರ್ಶವಿರಬೇಕು, ಮಗು. ನಿನ್ನಂಥವರು ಇಂಥ ಕಡೆ ಇದ್ದು ಮಾಡುವುದಾದರೂ ಏನು?"

ಗುರುಗಳು ನನ್ನನ್ನು ಕಳಿಸಲು ನಿರ್ಧರಿಸಿದ್ದಾರೆನ್ನಿಸಿತು. ನನ್ನ ತಲೆಯಲ್ಲಿ ಏನು ಮಾಡಬೇಕೆಂಬ ಕಲ್ಪನೆಯೂ ಇಲ್ಲವಲ್ಲ. ನನ್ನನ್ನು ಕಳಿಸಿದರೆ ಮುಂದೇನು; ನಾಗಕ್ಕ ಚೆನ್ನಬಸವರ ಬಗೆ ಏನು? ಎಂಬ ಕಳವಳವಾಯಿತು. ನನ್ನ ಮನದ ಕೋಲಾಹಲವನ್ನು ಅರಿತವರಂತೆ ಗುರುಗಳು ಹೇಳಿದರು : "ಹೀಗೇ ನಿನ್ನ ಬಗ್ಗೆ ಆಲೋಚಿಸುವಾಗ ನನಗನ್ನಿಸಿತು, ನಿನ್ನಂಥವನ ಕಾರ್ಯಕ್ಷೇತ್ರ ವಿಶಾಲವಾದದ್ದು. ಈ ಮಠದ ಆವರಣಕ್ಕಿಂತ ವಿಶಾಲ ಸಮಾಜವೇ ನಿನ್ನ ಆಡುಂಬೊಲ" ಎಂದು ಪ್ರಾರಂಭಿಸಿದರು. ನನ್ನ ಬಗ್ಗೆ ಆಗಲೇ ಏನೋ ತೀರ್ಮಾನಿಸಿರುವಂತೆಯೂ ಕಂಡಿತು. ನಾನು ಸುಮ್ಮನಿದ್ದೆ. "ನಿನ್ನನ್ನು ಈ ಆರು ವರ್ಷ ಕಂಡೆನಲ್ಲ. ನಿನ್ನ ಬುದ್ಧಿ ಚುರುಕು, ಬೆಳಕಿನಂತೆ ನಡತೆ ಪರಿಶುದ್ಧ. ಕತ್ತಿಯ ಮೊನೆಯಂಥ ನಿನ್ನ ಅನ್ವೇಷಕ ಪ್ರವೃತ್ತಿಯಿಂದ ದೊಡ್ಡ ಕೆಲಸ ಮಾಡಬಹುದು, ನೀನು ದೊಡ್ಡ ಊರಿಗೆ ಹೋದರೆ ನೀನಲ್ಲಿ ಬೆಳಗಬಹುದು, ಜನರಲ್ಲಿಯೂ ಬೆಳಗು ಹರಡಬಹುದು" ಎಂದರು.

"ದೊಡ್ಡ ಊರು ಅಂದರೆ?" ಎಂದು ಅಳುಕುತ್ತ ಕೇಳಿದೆ. ನನ್ನನ್ನು ಕಳಿಸುವುದೇ ಅವರ ತೀರ್ಮಾನವಾದರೆ ನಾನಿಲ್ಲಿ ಉಳಿಯುವುದೆಂತು. ಅಲ್ಲದೇ, ನಾನು ಎಲ್ಲಿಗೆ ಹೋಗಬೇಕೆಂಬುದನ್ನೂ ಅವರೇ ತೀರ್ಮಾನಿಸಿದ್ದಾರೆಯೋ ಏನೋ ಎನ್ನಿಸಿತ್ತು.

"ಅದನ್ನೇ ಹೇಳುವುದಕ್ಕೆ ಹೊರಟಿದ್ದೆ. ಮಂಗಳವಾಡ ಇದೆಯಲ್ಲ ಅಲ್ಲಿಗೆ ಹೋಗು. ಅದು ತರ್ದವಾಡಿ ಒಂದು ಸಾವಿರ ನಾಡಿನ ರಾಜಧಾನಿ. ಪೆರ್ಮಾಡಿರಾಯ ಅಲ್ಲಿ ರಾಜ. ಯಾರು ರಾಜನಾದರೇನಂತೆ; ನಾನು ಹೇಳಹೊರಟಿದ್ದು ರಾಜನ ಬಗ್ಗೆಯಲ್ಲ. ಅಲ್ಲಿ ಒಬ್ಬರಿದ್ದಾರೆ, ಅದೇ ಆ ರಾಜನ ಭಂಡಾರದಲ್ಲಿ, ಮುಖ್ಯ ಅಧಿಕಾರಿಯಾಗಿ. ತಟಕ್ಕನೆ ನಿನ್ನೆಯೋ ಮೊನ್ನೆಯೋ ಈ ವಿಷಯ ಹೊಳೆಯಿತು ನೋಡು." ಎಂದು ಹೇಳಿದವರೇ ಕ್ಷಣ ಮಾತನ್ನು ನಿಲ್ಲಿಸಿದರು. ಮಾತಿನ ಎಳೆ ತಪ್ಪಿ, ಅದನ್ನು ಮತ್ತೆ ಹುಡುಕಲು ಅವರು ನಿಲ್ಲಿಸಿದ್ದರೆನ್ನಿಸಿತು. "ಅವರ ಹೆಸರು ಸಿದ್ಧರಸ" ಎಂದರು. ಅವರೂ ಬಾಗೇವಾಡಿಯ ಪ್ರಾಂತದವರಂತೇ ನಮ್ಮ ತಂದೆಗೆ ಪರಿಚಯವಿದ್ದಿರಲೂ ಬಹುದು. ಅವರದೂ ಕಮ್ಮೆ ಕುಲವಾದ್ದರಿಂದ ದೂರದ ಸಂಬಂಧವೂ ಇರಬಹುದೇನೋ ಎಂದರು. ಕುಲ, ಸಂಬಂಧ ಇಲ್ಲದಿದ್ದರೇನಂತೆ ಅಲ್ಲಿಗೆ

ಹೋವರೆ ನನಗೆ ಒಳ್ಳೆಯ ಭವಿಷ್ಯ ಎಂದರು. ಬರಿಯ ನೌಕರಿಯ ದೃಷ್ಟಿಯಿಂದಲ್ಲ, ಕಾರ್ಯವ್ಯಾಪ್ತಿಯ ದೃಷ್ಟಿಯಿಂದ. ಹೇಗೂ ಲೆಕ್ಕಾಚಾರದಲ್ಲಿ ಚುರುಕು ಬುದ್ಧಿಯಿರುವುದರಿಂದ ಭಂಡಾರದ ಮನೆಯಲ್ಲಿ ನನಗೆ ಕೆಲಸಕ್ಕಾಗಿ ಏರ್ಪಾಟುಮಾಡುವುದು ಅವರಿಗೆ ಕಷ್ಟವಾಗದು. ಅವರಿಗೆ ಪರಿಚಯ ಪತ್ರವನ್ನು ಸಿದ್ಧಪಡಿಸಿ ಕೊಡಬಹುದು ಎಂದರು. ಒಟ್ಟಾರೆ ಈಶಾನ್ಯಗುರುಗಳು ನನ್ನ ಭವಿಷ್ಯವನ್ನು ಬರೆದ ಜ್ಯೋತಿಷ್ಕರಾದಂತೆ ಕಂಡಿತು. ನನ್ನ ಕಣ್ಣಲ್ಲಿ ಗಳಗಳ ನೀರು. ಮೈದಡವಿದರು. "ನಿಮ್ಮನ್ನು ಸಂಗನನ್ನು ಬಿಟ್ಟು ಹೇಗೆ ಹೋಗಲಿ?" ಎಂದೆ ಬಿಕ್ಕುತ್ತ.

"ನಾನು ಎಂದರೆ ಯಾರಪ್ಪ, ಈ ದೇಹ ತಾನೇ? ನೀನು ಇಲ್ಲೇ ಇದ್ದರೂ ಈ ದೇಹ ಎಷ್ಟು ದಿನ ಇದ್ದೀತು. ಇನ್ನು ಸಂಗ, ಇಲ್ಲಿರುವವನು ಅಲ್ಲಿಲ್ಲವೇ?" ಎಂದರು. ಅವರ ಮಾತೇ ಹಾಗೆ. ಸಾಮಾನ್ಯ ಮಾತೂ ಅನುಭವ ದಾರ್ಶನಿಕತೆಗಳಲ್ಲಿ ಅದ್ದಿ ತೆಗೆದ ನುಡಿಮುತ್ತುಗಳು. "ಕಣ್ಣು ಮುಚ್ಚಿದರೆ ಸಂಗನನ್ನು ಕಾಣಲು ತೊಡಗು. ತೊಂದರೆಯಾಗದು" ಎಂದರು. "ನಿನಗೆ ಬೇಕೆನಿಸಿದರೆ ಸಂಗನ ಮುಂದೆ ಕುಳಿತು ಅವನನ್ನು ನೋಡಿ ಅದೇ ಮೂರ್ತಿ ನೆನಪಿಗೆ ಬರುವಂತೆ ಒಂದು ಕುರುಹು ತೆಗೆದುಕೊಂಡು ಹೋಗು. ಕಂಕುಳಲ್ಲಿ ಕಟ್ಟಿಕೊಂಡ ಸಂಗ ನಿನ್ನನ್ನು ಮಡಿಲಿನಲ್ಲಿ ಹಾಕಿಕೊಳ್ಳುತ್ತಾನೆ" ಎಂದು ಕಿವಿಮಾತು ಹೇಳಿದರು.

ಅವರು ಹೇಳಿದಂತೆ ಕೇಳದೇ ವಿಧಿಯಿರಲಿಲ್ಲ. ಹಟಮಾಡಿ ಉಳಿಯಬಹುದಿತ್ತೇನೋ. ಆದರೆ ಹಾಗೆ ಮಾಡುವುದೇ? ನಾನೇನು ಎಳೆಯ ಮಗುವಲ್ಲ, ಅಲ್ಲದೆ, ನನ್ನ ತಲೆಯಲ್ಲಿಯೂ ಆಗಾಗ ಏನೋ ಭಾವನೆಗಳು: ಹಾಗಾಗಬೇಕು, ಹೀಗಾಗಬೇಕು; ಹಾಗೆ ಮಾಡಬೇಕು, ಹೀಗೆ ಮಾಡಬೇಕು; ಇವೇಕೆ ಈ ಬಗೆಯಲ್ಲಿರಬೇಕು, ಬದಲಾಯಿಸಬಾರದೇ –ಇತ್ಯಾದಿ ಆಯ್ಕೆಗಳ ನಡುವಣ ಘರ್ಷಣೆ. ಈಶಾನ್ಯಗುರುಗಳು ದಾರ್ಶನಿಕರು, ಮುಂದಿನದು ಅವರಿಗೆ ಕಾಣುತ್ತದೇನೋ. ಅವರಲ್ಲದೆ ನನ್ನ ಹಿತ ಕಾಯುವವರು ಯಾರಿದ್ದಾರೆ? ಅವರೆಂದರೆ ನನ್ನ ಕಣ್ಣೆದುರಿನ ಸಂಗನಲ್ಲವೇ?

ನಾಗಕ್ಕನಿಗೆ ಈ ವಿಷಯವನ್ನೆಲ್ಲ ಹೇಳಿದೆ, ಗುರುಗಳ ಆದೇಶವನ್ನು ತಿಳಿಸಿದೆ. ಗುರುಗಳು ಹೇಳಿದುದಕ್ಕೆ ವ್ಯತಿರಿಕ್ತವಾಗಿ ಹೇಳಲು ಅವಳಲ್ಲಿ ಏನೂ ಇಲ್ಲ. ಬೇಗುದಿಯಿರುವುದು ಪ್ರಪಂಚವೇ ಬೀಸಿ ಒಗೆದಾಗ ತಾಯಿಯ ತೋಳಿನಂತೆ ಆಸರೆಯಿತ್ತ ಕಪ್ಪಡಿ ಸಂಗಮನನ್ನು ಬಿಟ್ಟು ಹೊರಡುವುದೇ ಎಂಬುದರಲ್ಲಿ. ಆದರೆ ವಿಧಿಯಿಲ್ಲ, ಗುರುನಿರೂಪ. ಅಂದು ರಾತ್ರಿ ಮಲಗಿದರೆ ನನಗೆ ಕನಸು, ಹಳವಂಡ. ರಾತ್ರಿಯೆಲ್ಲ ಅದೇ ದಾರಿಯಲ್ಲಿ ಹೋಗುತ್ತಿರುವಾಗ ಹೆಜ್ಜೆಯಿಟ್ಟರೆ ಇದ್ದಕ್ಕಿದ್ದಂತೆ ನೀರಲ್ಲಿ ಬಿದ್ದಂತೆ, ಪ್ರಯಾಸದಿಂದ ಅದನ್ನೆಂತೋ ದಾಟಿ ಬಂದರೆ ದೊಡ್ಡ ಗುಡ್ಡ ಎದುರಾದಂತೆ. ಮುಗುಳ್ನಗುತ್ತ ನಿಂತಂತೆ ಒಂದು ಮೂರ್ತಿ. ನಿನ್ನೊಡನೆ ನಾನಿರುತ್ತೇನೆ ಎಂದು ಅಭಯವಿತ್ತಂತೆ, ಹೊರಡು

ಎಂದಂತೆ. ಮಾರನೆಯ ದಿನ ಎಚ್ಚರವಾದ ಮೇಲೂ ಆ ಮೂರ್ತಿಯೇ ಮನಸ್ಸಿನಲ್ಲಿ. ಆದರೆ ಮುಖ ಸ್ಪಷ್ಟವಾಗದು, ಯಾರು ಎಂದು ಗುರುತಿಸಲು ಸಾಧ್ಯವಾಗದು. ಆಯಿತು. ಪ್ರಪಂಚವೆಂದರೆ ಹೇಗಿರುವುದೋ ನೋಡಿಯೇ ಬಿಡೋಣ ಎಂಬ ಛಲ ಮೂಡಿತು. ಗುರುಗಳು ಹೇಳಿದಂತೆ ನನ್ನಲ್ಲಿ ಎರಡು ಆಸ್ತಿಗಳಿವೆಯಲ್ಲ: ಪ್ರಾಮಾಣಿಕತೆ, ಬುದ್ಧಿವಂತಿಕೆ. ಅವುಗಳ ಬಲದಿಂದ ಎಲ್ಲಾದರೂ ಜಯಿಸಬಲ್ಲೆ ಎಂಬ ಆತ್ಮವಿಶ್ವಾಸ ಕ್ಷಣಕಳೆದಂತೆ ಬಲವಾಯಿತು.

ಮಂಗಳವಾಡಕ್ಕೆ ಹೊರಡುವ ದಿನವೂ ನಸುಕಿಗೇ ಎದ್ದು ಸ್ನಾನ ಅಗ್ಗವಣಿ, ಹೂ ತಿರಿಯುವುದು ಮಾಡಿದೆ; ಮುಂದಿನದು ಸಾಧ್ಯವಾಗದ್ದು, ಅಲ್ಲಿಗೇ ನಿಲ್ಲಿಸಿದೆ. ಗುರುಗಳು ಹೇಳಿದಂತೆ ಸಂಗನ ಮುಂದೆ ನಂದಿಯ ಮುಂದೆ ಕುಳಿತೆ. ಒಂದು ಕುರುಹನ್ನು ಚುಳುಕಿನಲ್ಲಿ ಇರಿಸಿ ಕಣ್ಮುಚ್ಚಿದೆ. ಸಂಗಮನಾಥನನ್ನು ನಂದಿಯು ನನ್ನ ಕೈಯಲ್ಲಿರಿಸಿದಂತೆ ಭಾಸವಾಯಿತು. ಮೈಯಲ್ಲೆಲ್ಲ ವಿದ್ಯುತ್ ಸಂಚಾರವಾದಂತೆ, ತಲೆಯಲ್ಲಿ ಸೂರ್ಯನೊಬ್ಬನು ಉದಯಿಸಿದಂತೆ, ಹೃದಯದಲ್ಲಿ ಯಾವುದೋ ತತ್ವವೊಂದು ಪ್ರತಿಷ್ಠಿತವಾದಂತೆ ಅನುಭವವಾಯಿತು. ಎಷ್ಟು ಹೊತ್ತು ಕುಳಿತಿದ್ದೆನೋ. ಕಣ್ತೆರೆದಾಗ ಅನಿರ್ವಚನೀಯ ಸಮಾಧಾನ ನನ್ನನ್ನು ಆವರಿಸಿತ್ತು. ಅಲ್ಲಿಯವರೆಗೆ ನನ್ನ ಮನಸ್ಸಿನಲ್ಲಿದ್ದ ಶಂಕೆ ಕಿಂಚಿತ್ತೂ ಇಲ್ಲದಂತಾಗಿತ್ತು. ನಾನು ನನಗೆ ಇಷ್ಟವಾದೆಡೆ ಹೋಗುವ ಭಾವನೆಯುಂಟಾಯಿತು.

ಹೊರಡಲು ಎಲ್ಲ ಸಿದ್ಧತೆಗಳಾದವು. ಎಲ್ಲ ಎಂದರೆ ಏನು ಮಹಾ! ಕೆಲವೇ ವಸ್ತುಗಳು, ಅನಿವಾರ್ಯವಾದವು. ಆದಷ್ಟು ಕಡಿಮೆ ಹೊರೆಯಿರುವುದೇ ಒಳಿತಲ್ಲವೇ. ಹೀಗಾಗಿ ಮುಖ್ಯವಲ್ಲವೆನ್ನಿಸಿದವುಗಳನ್ನು ಅಲ್ಲಿಯೇ ಬಿಟ್ಟೆವು. ಮಂಗಳವಾಡವೆಂದರೆ ಕೇಳಿದ್ದೇ ಹೊರತು, ಎಷ್ಟು ದೂರವೆಂಬುದೂ ತಿಳಿಯದು. ಕೆಲವು ದಿನಗಳ ಪ್ರಯಾಣವಂತೆ, ಹೇಗೆ ಸಾಧ್ಯವೋ ಹಾಗೆ ಹೋಗುವುದು; ಚಕ್ಕಡಿಯಲ್ಲಿ, ನಡಿಗೆಯಿಂದ– ಹೀಗೆ. ಈಗಂತೂ ಕೃಷ್ಣೆಯ ಆಚೆಯವರೆಗೆ ದಾಟಿಸಲು ಹರಿಗೋಲು ವ್ಯವಸ್ಥೆಯಾಗಿದೆ.

ಗುರುಗಳನ್ನು ನಾವು ಮೂವರೂ ಕಂಡು ಸಾಷ್ಟಾಂಗವೆರಗಿದೆವು. ಗುರುಗಳ ಕಂಠವೂ ನಮ್ಮನ್ನು ಬೀಳ್ಕೊಡುವಾಗ ಗದ್ಗದವಾಯಿತು. ಎಂಥ ವಾತ್ಸಲ್ಯ ಅವರದು, ಅವರ ಬೆಚ್ಚಗಿನ ವಿಶ್ವಾಸವಲಯದಿಂದ ದೂರ ಹೋಗಬೇಕಲ್ಲ ಎಂಬ ಭೀತಿ ಮತ್ತೆ ಆವರಿಸಿತು. ಆದರೆ ಚೌಕಾಶಿಗೆ ಅವಕಾಶವಿಲ್ಲ. ನಾಗಕ್ಕ–ನಾನು ಇಬ್ಬರೂ ಕಂಬನಿದುಂಬಿ ಮೈಗರೆದೆವು. ತಲೆದಡವಿ ಆಶೀರ್ವದಿಸಿದರು. ಚೆನ್ನಬಸವಣ್ಣನನ್ನೂ ಗುರುಗಳಿಗೆ ನಮಸ್ಕರಿಸುವಂತೆ ಮಾಡಿದೆವು. ಅವನ ಕೆನ್ನೆ ನೇವರಿಸಿದ ಗುರುಗಳು ಒಂದೆರಡು ಖರ್ಜೂರಗಳನ್ನು ಅವನ ಕೈಯಲ್ಲಿತ್ತು, ನಾಗಕ್ಕನ ಕಡೆ ತಿರುಗಿ "ನಿನ್ನ ಮಗನೂ ಸಾಮಾನ್ಯನಲ್ಲ, ತಾಯಿ. ಲೋಕೋತ್ತರ ಕಾರ್ಯಮಾಡುತ್ತಾನೆ" ಎಂದು ಮುಗುಳ್ನಕ್ಕರು. ಅನಿವಾರ್ಯವಾಗಿ ಕಾಲುಕಿತ್ತುಕೊಂಡು ಹೊಳೆಯ ದಂಡೆಯ ಹರಿಗೋಲಿನೆಡೆ ಕಾಲುಹಾಕಿದೆವು. ಹೋಗುವಾಗ ಅಲ್ಲಿನ ಪ್ರತಿವಸ್ತುವೂ ನಮ್ಮ ಬಗ್ಗೆ ಕನಿಕರಿಸುತ್ತಿರುವಂತೆ ಅನಿಸಿತು. ಎಲ್ಲವೂ ಎಷ್ಟು ಪ್ರಿಯವಾದುದಾಗಿತ್ತು ಎಂಬ ದಟ್ಟ ಅರಿವು ಉಂಟಾಯಿತು.

ಈಶಾನ್ಯಗುರುಗಳ ಮಾತೆಂದರೆ ಮಂತ್ರವಲ್ಲವೇ? ಅವರು ಧೈರ್ಯ ಹೇಳಿದ್ದು, ಆತ್ಮವಿಶ್ವಾಸ ತುಂಬಿದ್ದು ಎಷ್ಟು. ಅವರು ಹೇಳಿದ ನುಡಿ ಸತ್ಯವಾಯಿತು. ಮಂಗಳವಾಡಕ್ಕೆ ಬಂದು ಸಿದ್ಧರಸರನ್ನು ಕಂಡೆವು. ಅವರನ್ನು ನೋಡಿದರೆ ಬಹುಕಾಲದಿಂದ ಆಪ್ತರಾದವರಂತೆ ಕಾಣಿಸಿದರು. ಈಶಾನ್ಯಗುರುಗಳ ಹೆಸರು ಹೇಳಿದೊಡನೆ ಭಕ್ತಿಯಿಂದೆಂಬಂತೆ ಕಣ್ಮುಚ್ಚಿದರು. ಗುರುಗಳು ಹೇಳಿದಂತೆ ಎಲ್ಲ ನಡೆದಿತ್ತು. ಸಿದ್ಧರಸರ ಬಳಿಗೆ ಬಂದದ್ದು ಎಂದರೆ ತಾಯಿಯ ಒಂದು ಮೊಲೆಯ ಹಾಲನ್ನು ಹೀರಿ ಇನ್ನೊಂದರ ಬಳಿ ಬಂದಂತೆ ಆಗಿತ್ತು.

ಸಿದ್ಧರಸರೆಂದರೆ ಈಶಾನ್ಯಗುರುಗಳ ಲೌಕಿಕರೂಪವೆಂಬಂತೆ ನನಗನಿಸುತ್ತದೆ. ಅವರ ವಾತ್ಸಲ್ಯವೇನು ? ಕಕ್ಕುಲತೆಯೇನು, ಅಪಾರ ತಾಳ್ಮೆಯೇನು ? ದೊರೆಗಳ ಬಳಿ ಕರೆದೊಯ್ಯುವ ಮುಂಚೆ ನನ್ನನ್ನು ಪ್ರಶ್ನೆಗಳನ್ನು ಹಾಕುವುದರ ಮೂಲಕ ಪರೀಕ್ಷಿಸಿದರು. ಭಂಡಾರದ ಒಂದೆರಡು ಲೆಕ್ಕಪತ್ರಗಳನ್ನು ನನಗಿತ್ತು ಪರಿಶೀಲಿಸಲು ಕೇಳಿದರು. ನಾನು ಒಂದೆರಡು ಕಡೆ ಆಗಿದ್ದ ದೋಷಗಳನ್ನು ಸೂಚಿಸಿದೆ, ಮತ್ತೆ ಅವುಗಳನ್ನು ತಾವೇ ಪರಿಶೀಲಿಸಿ, ನಾನು ಹೇಳಿದುದು ಸರಿಯೆಂದು ತೋರಿದ ಮೇಲೆ, "ಈಶಾನ್ಯಗುರುಗಳು ಸುಮ್ಮನೇ ಹೇಳುವವರೇ. ಅವರು ನಿಜವಾದ ರತ್ನಪರೀಕ್ಷಕರು" ಎಂದು ತೃಪ್ತಿಯಿಂದ ಮುಗುಳ್ನಕ್ಕರು.

ಮಂಗಳವಾಡದ ನನ್ನ ಬದುಕೆಂದರೆ ಉಲ್ಲಾಸದ ಕಾಲ. ಸಿದ್ಧರಸರ ಆಸರೆಯೆಂದರೆ ನೆಮ್ಮದಿಯ ತಾಣ. ನನ್ನ ಬದುಕಿನಲ್ಲಿ ಮುಂದೆ ಒದಗಲಿದ್ದ ಎಲ್ಲದರ ಬೀಜಾಂಕುರ ಆದದ್ದು ಮಂಗಳವಾಡದಲ್ಲಿಯೇ. ನನ್ನ ಕಾರ್ಯಕ್ಷೇತ್ರವನ್ನು ಮತ್ತಷ್ಟು ವಿಸ್ತರಿಸಲು ತಕ್ಕ ಭೂಮಿಕೆಯೊದಗಿದ್ದು ಇಲ್ಲೇ. ಏನೇನೋ ಮಾಡಬೇಕೆಂದು ಅನಿಸಿದ್ದು, ಮಾಡಲು ಅನುವು ದೊರೆತದ್ದು ಇಲ್ಲಿಯೇ. ದೊಡ್ಡ ಕನಸು ಕಾಣಬೇಕೆಂದು ಗುರುಗಳು ಹೇಳಿದ್ದರು. ನನ್ನ ಮನಸ್ಸಿನಲ್ಲಿ ಧ್ರುವತಾರೆಯಂತೆ ಮಿನುಗುತ್ತಿತ್ತು ಆ ಮಾತು. ನನ್ನ ಮನಸ್ಸಿಗೆ ತೋಚಿದ ಭಾವನೆಗಳನ್ನು ಕನ್ನಡದಲ್ಲಿ ತೋಚಿದಂತೆ ಬರೆದಿಡುವ ಹವ್ಯಾಸ ಬೆಳೆಸಿಕೊಂಡೆ. ದಿನ ದಿನ ಹೊಸ ಭಾವನೆಗಳು ಮೈದುಂಬಿ ಬರುತ್ತಿದ್ದವು. ಮೃದುವಾದ ಕನ್ನಡ ನುಡಿಯು ನನ್ನ ಭಾವನೆಗಳನ್ನು ಹೊತ್ತು ಹೊರಬಂದರೆ ನನಗೆ ಅದೆಂಥದೋ ತೃಪ್ತಿ; ಭಾರ ಇಳಿದಂತೆ, ನಸುಕು ಹರಿದಂತೆ.

ಈಶಾನ್ಯಗುರುಗಳು–ಸಿದ್ಧರಸರು, ಕೃಷ್ಣೆ–ಮಲಪ್ರಹರಿಯರಂತೆ. ಅವರಿಬ್ಬರೂ ಕೂಡಿ ಹರಿಸಿದ ವಾತ್ಸಲ್ಯಧಾರೆಯಲ್ಲಿ ನೆನೆದು ನಾನು ತಣಿವನ್ನು ಅನುಭವಿಸಿದೆ. ಬದುಕಿನ ದೂರ ಪಾತ್ರವನ್ನು ಆ ಹರಿವಿನಲ್ಲಿ ಹಗುರಾಗಿ ತೇಲಿ ಮುಗಿಸುವಂತಾಯಿತು ನನಗೆ. ಒಂದೋ ಎರಡೋ ಬಾರಿ ಸಮುದ್ರವನ್ನು ನಾನು ಕಂಡದ್ದುಂಟು. ಅಪಾರವಾದ ನೀರು ಅಲ್ಲಿರುವುದೂ ಸತ್ಯ. ಕೆರೆ ಹಳ್ಳಬಾವಿಗಳು ಮೈದೆಗೆದರೆ ಗುಳ್ಳೆ ಗೊರಸೆ ಚಿಪ್ಪು ಕಾಣಬಹುದು. ವಾರಿಧಿ ಮೈದೆಗೆದರೆ ರತ್ನಮುತ್ತುಗಳು ಕಾಣಬಹುದು ಎಂದು ಒಂದೆಡೆ ನಾನು ಹೇಳಿದ್ದುಂಟು. ಅದು ಬೇರೆಯ ಸಂದರ್ಭ. ಅಮೂಲ್ಯವಾದದ್ದನ್ನು ಒಳಗೊಂಡದ್ದರ ಪ್ರತೀಕ ಅದು ಅಲ್ಲಿ. ಆದರೆ

ನನಗೆ ಪ್ರಿಯವಾದದ್ದು ಹರಿವ ನದಿ. ಅಂಬುಧಿಗೆ ಸೀಮೆಯಲ್ಲದೆ, ಹರಿವ ನದಿಗೆ ಸೀಮೆಯುಂಟೆ ಅಂದುಕೊಂಡಿದ್ದೇನೆ. ಸಮುದ್ರದಲ್ಲಿ ನೀರಿನ ರಾಶಿಯಿದೆ, ಆದರೆ ಅದು ಜಡ. ನದಿ ನಮ್ಮ ಬಳಿಗೆ ಬರುತ್ತಾಳೆ, ಮನದಣಿಯೆ ಜೀವನಸಾರವುಣಿಸುತ್ತಾಳೆ. ಅವಳ ತುಂಬ ಭಾವ ಜೀವಂತಿಕೆಯಿಂದ ತುಂಬಿರುವಂಥದು. ಹರಿವನದಿ ಎಂದರೆ ಕೃಷ್ಣ-ಮಲಪ್ರಹರಿಯರದೇ ನೆನಪು ನನಗೆ. ಹಿಂದೆಯೇ ನನ್ನ ಮನಸ್ಸಿನಲ್ಲಿ ಸುಳಿಯುವುದು ಈಶಾನ್ಯಗುರು-ಸಿದ್ಧರಸರು; ನಮ್ಮ ಅಜ್ಜಿ-ನಾಗಕ್ಕರು; ಗಂಗೆ-ನೀಲರು!.

ಕೇತಗನ ಅನಿರೀಕ್ಷಿತ ಮೆರವಣಿಗೆಯಿಂದಾಗಿ ಕಲ್ಯಾಣದಲ್ಲಿನ ಗಲಭೆಗಳಿಗೆ ಕಾಲುಗಳು ಮೂಡಿದ್ದವು. ಅತನನ್ನು ಉತ್ಸಾಹದಿಂದ ಎತ್ತು ತಂದ ಯುವಕ ಸಮುದಾಯದ ಗದ್ದಲ, ಹಾದು ಬಂದ ಹಾದಿಯಲ್ಲೆಲ್ಲ ಜನರನ್ನು ಎಚ್ಚರಿಸಿತ್ತು. ಒಂದು ರೀತಿ ಈ ಮೆರವಣಿಗೆಯು ಮದುವೆಯ ಪರವಾಗಿದ್ದ ಜನರ ಜಯಭೇರಿಯ ಸದ್ದಿನಂತೆ ಕೆಲವರ ಕಿವಿಗಳಿಗೆ ಕರ್ಕಶವೆನಿಸಿರಲಿಕ್ಕೆ ಸಾಕು. ಅಲ್ಲದೆ, ಇದು ತಾವು ಎದುರಿಸಬೇಕಾದ ಸವಾಲೆಂದೂ ಅವರು ಭಾವಿಸಿರಬೇಕು. ಹೀಗಾಗಿ ಕಲ್ಯಾಣನಗರದ ಹಲವಾರು ಮೂಲೆಗಳಲ್ಲಿ ಪಿಸುಪಿಸು ಗುಸುಗುಸುಗಳು; ಎಷ್ಟೋ ದೇವಸ್ಥಾನಗಳಲ್ಲಿ ಸಭೆಗಳೂ; ಜನಸೇರಿದಡೆ ಮಾತು ಚರ್ಚೆಗಳೂ ಆದವು. ಹಾಗಾಗಿ ಕಲ್ಯಾಣ ಬಹುಬೇಗ ರಣರಂಗದ ಲಕ್ಷಣಗಳನ್ನು ಪಡೆದವು.

ಅಂದು ಮುಂಜಾನೆಯೇ ಹಡಪದಪ್ಪಣ್ಣ ತಂದ ಸುದ್ದಿ ಹೃದಯಭೇದಕವಾಗಿತ್ತು. ಕಲ್ಯಾಣದ ಈಶಾನ್ಯಮೂಲೆಯಲ್ಲಿದ್ದ ಒಂದು ಮಾದರ ಕೇರಿಗೆ ಯಾರೋ ದುಷ್ಟರು ಬೆಂಕಿ ಹಚ್ಚಿದ್ದರು. ಅಲ್ಲೆಲ್ಲ ಕೋಲಾಹಲವೇರ್ಪಟ್ಟಿತ್ತು. ಬಸವಣ್ಣನವರಿಗೆ ಸುದ್ದಿ ತಿಳಿಯುತ್ತಲೇ ಅಪ್ಪಣ್ಣ–ಉತ್ತಣ್ಣ–ಚೆನ್ನಬಸವಣ್ಣನವರೊಂದಿಗೆ ಆ ಕಡೆ ಧಾವಿಸಿದರು. ಸಂತೋಷದಾಯಕವಾದ ಪ್ರಸಂಗ ಜನರ ಮರುಳುತನದಿಂದಾಗಿ ಶ್ಮಶಾನ ಸದೃಶ ವಾತಾವರಣವನ್ನು ಸೃಷ್ಟಿಸುತ್ತಿತ್ತು.

ಅಣ್ಣನವರು ಅಲ್ಲಿ ಬಂದಾಗ ಕಂಡದ್ದು ಕೇಳಿದ್ದಕ್ಕಿಂತಲೂ ಭಯಂಕರವಾದ ದೃಶ್ಯವನ್ನು. ವಿಶಾಲವಾದ ಇಡೀ ಆ ಕೇರಿಯ ಎಲ್ಲ ಗುಡಿಸಲುಗಳೂ ಸುಟ್ಟು ಭಸ್ಮವಾಗಿದ್ದವು. ಎಲ್ಲಿ ನೋಡಿದರೂ ಬೂದಿ, ಕರಿಕು; ಇನ್ನೂ ಕೆಲವೆಡೆ ಹೊಗೆಯಾಡುವ ಕೆಂಡದ ತುಂಡುಗಳು. ಜನರ ಗೋಳಾಟವಂತೂ ಹೇಳತೀರದು. ಬಸವಣ್ಣನವರನ್ನು ಕಂಡಾಗಲಂತೂ ಆ ಮಾದರ ಕೇರಿಯ ಶರಣರು ಅವರನ್ನು ಸುತ್ತಿಹಾಕಿಕೊಂಡು ತಮ್ಮ ಅಳಲನ್ನು ತೋಡಿಕೊಳ್ಳತೊಡಗಿದರು. ಎಷ್ಟೋ ಜನ ಬೆಂಕಿಯಲ್ಲಿ ಆಹುತಿಗೊಂಡಿದ್ದಂತೆ ಕಾಣುತ್ತಿತ್ತು. ಕವಿಷ್ಠ ಪಕ್ಷ ಕೆಲವು ಮಕ್ಕಳು ಸುಟ್ಟು ಬೂದಿಯಾಗಿದ್ದವು. ಬೆಂಕಿ ಕಾಣಿಸಿಕೊಂಡಾಗ ಕೋಲಾಹಲದಲ್ಲಿ ಹೊರಬರಲು ಆಗದ ಆ ಬಾಳಕುಡಿಗಳು ಅನುಭವಿಸಿರಬಹುದಾದ ನೋವು ಊಹಾತೀತವಾಗಿತ್ತು. ಕಳೆದುಕೊಂಡ ವಸ್ತುಗಳು, ಬೂದಿಯ ರೂಪದಲ್ಲಿ ರಾಶಿಯಾಗಿದ್ದವು.

ಮಧ್ಯರಾತ್ರಿ ಕಳೆದ ನಂತರ ಯಾರೋ ಕೆಲವರು ಈ ಕೆಲಸ ಮಾಡಿ

ಪರಾರಿಯಾಗಿರಬಹುದು. ಬೇಸಿಗೆ ಸಮೀಪಿಸುತ್ತಿದ್ದ ಕಾಲ, ಗುಡಿಸಲುಗಳ ಛಾವಣಿಗಳಿಗೆ ಹೊದಿಸಿದ್ದ ಹುಲ್ಲು ಪೂರ್ಣ ಒಣಗಿದ್ದುದು ಬೆಂಕಿ ಬೇಗ ಆವರಿಸಲು ಕಾರಣವಾಗಿರಬೇಕು. ಬೆಂಕಿಯನ್ನು ಕಂಡ ಕ್ಷಣ ಕೂಗಿಕೊಂಡಾಗ ಜನರೆಲ್ಲ ಸೇರುವ ಹೊತ್ತಿಗೆ ಕೇರಿಯ ನಾಲ್ಕಾರು ಕಡೆಗಳಲ್ಲಿ ಒಟ್ಟಿಗೆ ಬೆಂಕಿ ಕಾಣಿಸಿಕೊಂಡಿತ್ತು. ಈ ಕೆಲಸ ಮಾಡಿದ ಹಿಂಸಾರಭಸಮತಿಗಳು ಒಟ್ಟಿಗೇ ನಾಲ್ಕಾರು ಕಡೆ ಬೆಂಕಿ ಹಚ್ಚಿ ಸುತ್ತಲಿಂದ ಆವರಿಸುತ್ತ ಇಡೀ ಕೇರಿಯನ್ನು ನೊಣೆಯುವಂತೆ ಮಾಡಿದ್ದರು. ಹಲವಾರು ಜನರ ತಂಡವೇ ಇದಕ್ಕೆ ಕಾರಣವಾಗಿದ್ದುದು ಸ್ಪಷ್ಟವಾಗಿತ್ತು. ಒಂದು ಕಡೆ ಆರಿಸಲು ಪ್ರಯತ್ನಿಸಿದರೂ ಮತ್ತೆ ಕೆಲವಾರು ಕಡೆ ಬೆಂಕಿಯ ನಾಲಗೆಗಳು ಗುಡಿಸಲುಗಳನ್ನು ನೆಕ್ಕುತ್ತ ಸಾಗಬೇಕು ಎಂಬ ಅವರ ಕ್ರೂರ ಉದ್ದೇಶವನ್ನು ವಿವರಿಸಬೇಕಾಗಿರಲಿಲ್ಲ. ಒಟ್ಟಾರೆ ಅಲ್ಲಿದ್ದುದು ಬೆಂಕಿಯ ರೂಪದ ಮನುಷ್ಯನ ಕರಾಳತೆ.

ಗೋಳು, ಗೋಳು, ಒಡೆದ ಹೃದಯಗಳು, ನಂಬಿಕೆ ಕಳೆದುಕೊಂಡ ಮನಸ್ಸುಗಳು, ದೈವವನ್ನು ಹಳಿಯುವ ನಾಲಗೆಗಳು, ತಮಗೆ ಕೇಡು ತಂದವರನ್ನು ಶಪಿಸುವ ಬೈಗುಳಗಳು – ಇವೇ ಆ ಕೇರಿಯಲ್ಲೀಗ. ಯಾರನ್ನು ಹೇಗೆ ಸಮಾಧಾನಪಡಿಸುವುದು. ಸಮಾಧಾನಪಡಿಸುವುದೆಂದರೆ ಏನು, ಬರಿಯ ಉಪಚಾರದ ಮಾತುಗಳೇ ಅಲ್ಲವೇ ? ಹಾಗೆ ಏನಾದರೂ ಹೇಳಹೋದರೆ ಅದಕ್ಕಿಂತ ನಗೆಪಾಟಲಿನ ಸ್ಥಿತಿ ಬೇರೇನಿದ್ದೀತು ? ಅಥವಾ ಆಡಬಹುದಾದ ಮಾತುಗಳು ತಾನೇ ಯಾವುವು. ಈ ಅಳಲನ್ನು ವಿವರಿಸುವ ಶಕ್ತಿ ಹೇಗೆ ಶಬ್ದಗಳಿಗಿಲ್ಲವೋ ಹಾಗೆಯೇ ಅವನ್ನು ಸಂತೈಸುವ ಶಕ್ತಿಯೂ ಶಬ್ದಗಳಿಗಿರಲು ಸಾಧ್ಯವಿಲ್ಲ. ಅದಕ್ಕೇ ಪ್ರಾಯಶಃ ಬೆಂಕಿಯಿಂದ ಆದದ್ದನ್ನು ಶಮನಿಸಿಕೊಳ್ಳಲು ಬೆಂಕಿಗೇ ಜನ ಶರಣರಾಗುತ್ತಾರೇನೋ; ಅದರ ನೆರವಿನಿಂದಲೇ ಉತ್ತರಿಸುವ ಪ್ರಯತ್ನ ಮಾಡುತ್ತಾರೇನೋ!

ಬಸವಣ್ಣನವರ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು. ಎದೆಯಿದ್ದ, ಅದರಲ್ಲಿ ಒಂದು ಕಿಂಚಿದಂಶ ತೇವವಿದ್ದ ಯಾರಿಗೂ ಆ ದೃಶ್ಯವನ್ನು ಕಾಣಲು ಸಾಧ್ಯವಿಲ್ಲವೆಂದ ಮೇಲೆ ಸರ್ವಜೀವಪ್ರೇಮಿಯಾದ ಅಣ್ಣನವರಿಗೆ ಸಹಿಸುವುದು ಸಾಧ್ಯವೇ? ಆದರೆ ಅವರ ಮೂಕಗೊಂಡ ಮುಖವೂ ಕೆಲವರಿಗೆ ಸಾಂತ್ವನ ನೀಡಿರಬಹುದು. ವೈಶಾಖದ ಬಿಸಿಲಿನಿಂದ ಬಳಲಿದವರಿಗೆ ಚಂದ್ರನ ಮುಖದರ್ಶನ ಕೊಂಚ ತಂಪು ನೀಡುವುದಲ್ಲವೇ ? ಆದರೂ ಚಕ್ರವರ್ತಿಗಳ ಬಳಿ ಹೋಗಿ ನೊಂದ ಜನಗಳಿಗೆ ಉಳಿದಿರುವವರಾದರೂ ಮುಂದೆ ಬಾಳಲು ಸಾಧ್ಯವಾಗುವಂತೆ ನೆರವೀಯುವ ವ್ಯವಸ್ಥೆ ಮಾಡುವುದಾಗಿ ಹೇಳಿದರು. ತಮ್ಮ ಜೊತೆಗೆ ಬರುವಂತೆ ಕೇರಿಯ ಕೆಲವು ಹಿರಿಯರನ್ನೂ ಕರೆದುಕೊಂಡರು. ನೇರವಾಗಿ ಅರಮನೆಯ ಕಡೆ ಹೊರಟರು.

ಹೋಗುವಾಗಲೂ ಮನಸ್ಸಿನಲ್ಲಿ ಕಂಡ ದೃಶ್ಯಗಳೇ. ಈ ಹಿಂಸೆ ಯಾಕೆ ಬೇಕು. ಹಿಂಸೆಯಿಲ್ಲದೆ ಜೀವನವಿರಲು ಸಾಧ್ಯವಿಲ್ಲವೇ ? ಇಂದು ಮಾತ್ರ ಅಲ್ಲ,

ಈ ಕಾರಣಕ್ಕೆ ಮಾತ್ರ ಎಂದೇನೂ ಅಲ್ಲ, ಯಾವ ಯಾವುದಕ್ಕೋ ಹಿಂಸಾಚಾರ ನಡೆಯುತ್ತಲೇ ಇರುವುದಲ್ಲ, ಇದನ್ನು ತಡೆಗಟ್ಟಲು ಸಾಧ್ಯವಿಲ್ಲವೇ? ಪ್ರಕೃತಿಯಲ್ಲಿ ಪ್ರಬಲ ಪ್ರಾಣಿಗಳು ಸಾಧುಜೀವಿಗಳನ್ನು ತಿಂದು ಬದುಕುತ್ತವೆ. ಆದರೆ ತಿಂದು ಬದುಕಲು ಮನುಷ್ಯರಿಗೆ ಮನುಷ್ಯರೇ ಬೇಕೆ? ಉಳಿದ ಯಾವ ಪ್ರಾಣಿಯೂ ತನ್ನ ವರ್ಗದ ಪ್ರಾಣಿಯನ್ನು ಕೊಲ್ಲುವುದಿಲ್ಲ, ಮನುಷ್ಯ ಮಾತ್ರ ಹೀಗೇಕೆ? ಅಥವಾ ಹಳೆಯ ಸ್ಥಿತಿಯೊಂದು ಹೋಗಿ ಹೊಸವ್ಯವಸ್ಥೆ ಬರುವ ಕಾಲಕ್ಕೆ ಈ ಹಿಂಸೆ ಅನಿವಾರ್ಯವೇ? ಅಥವಾ ಹೊಸ ಸೃಷ್ಟಿಯ ಮೊದಲ ಹಂತವಾಗಿ ಹಿಂಸೆ ಕಾಣಿಸಿಕೊಳ್ಳುವುದೇ? ಏನೋ ಈ ಬದುಕು ವಿಶ್ಲೇಷಣೆಗೆ ಹೊರತಾದಂತೆ ಎನ್ನಿಸುತ್ತದೆ. ಸುತ್ತಣ ಪ್ರಕೃತಿಗೇ ಮನುಷ್ಯ ವಿರುದ್ಧವಾಗಿ ನಡೆಯುತ್ತಿರುವಂತೆ ತೋರುತ್ತದಲ್ಲ?

ಚಕ್ರವರ್ತಿಗಳನ್ನು ಕಾಣಲು ಅತ್ಯಂತ ಜರೂರು ಸನ್ನಿವೇಶವಿರುವುದಾಗಿಯೂ, ದರ್ಶನ ಕೃಪೆ ಒದಗಿಸಬೇಕೆಂದೂ ಮುಂಚೆಯೇ ಗೃಹಮಹತ್ತರರಿಗೆ ಅಣ್ಣನವರು ಬಳಿಯಟ್ಟಿದ್ದುದರಿಂದಾಗಿ, ಇವರು ಅರಮನೆಗೆ ಹೋಗುವ ವೇಳೆಗೆ ಗೃಹಮಹತ್ತರರು ಬಸವಣ್ಣನವರ ಆಗಮನವನ್ನು ನಿರೀಕ್ಷಿಸುವವರಂತೆ ಕಾದಿದ್ದರು. ಇವರನ್ನು ಕಂಡವರೇ ಕೈಮುಗಿದು ಎದ್ದು ಬಂದು ಸ್ವಾಗತಿಸಿ ತಮ್ಮ ಕಾರ್ಯಕೋಣೆಗೇ ಕರೆದೊಯ್ದರು. ಅಣ್ಣನವರ ಮುಖದ ಮೇಲಿನ ಉದ್ವಿಗ್ನತೆ ಅವರಿಗೆ ಕಾಣಿಸುತ್ತಿತ್ತು. ಅವರನ್ನು ಸಾಂತ್ವನಗೊಳಿಸುವಂತೆ "ಪ್ರಭುಗಳು ಇನ್ನೊಂದು ಗಳಿಗೆಯಲ್ಲಿ ದರ್ಶನವೀಯುವುದಾಗಿ ಅಪ್ಪಣೆಯಿತ್ತಿದ್ದಾರೆ" ಎಂದರು. ಅಷ್ಟು ಹೊತ್ತು ಕಾಯಲೂ ಸಾಧ್ಯವಿಲ್ಲದ ಎದೆಗುದಿತ. ಆದರೆ ಕಾಯುವುದು ಅನಿವಾರ್ಯ. ಮನಸ್ಸಿನ ವೇಗಕ್ಕೆ ಹೊರಗಿನ ಕಾರ್ಯಗಳು ನಡೆಯುವುದು ಸಾಧ್ಯವೇ? ಅವರ ಮನಸ್ಸು ಪ್ರಭುಗಳಲ್ಲಿ ನಿವೇದಿಸಕೊಳ್ಳಬೇಕಾದ ವಿಷಯ, ಘಾಟಿಗಳನ್ನು ಕುರಿತು ಯೋಚಿಸುತ್ತಿತ್ತು. ಈ ದಿನ ಏನಾದರೊಂದು ತೀರ್ಮಾನವಾಗಲೇ ಬೇಕು. ಇನ್ನು ತಡೆಯಲು ಸಾಧ್ಯವಿಲ್ಲ. ಮುಗ್ಧಜೀವಿಗಳನ್ನು ಸುಮ್ಮಸುಮ್ಮನೇ ನೋವಿನತ್ತ ದೂಡುವುದೆಂದರೆ? ಸಾಕು, ಸಾಕು ಎನ್ನಿಸಿತು.

ಕಾಲ ಯಾರನ್ನೂ ಕಾಯುವುದಿಲ್ಲ, ಸಾಗುತ್ತಲೇ ಇರುತ್ತದಲ್ಲ. ಅಣ್ಣನವರ ಯೋಚನೆ ಮನಸ್ಸಿನಲ್ಲಿ ಸಾಗಿದಂತೆ ತಾನೂ ಸಾಗಿದುದರಿಂದ ಕಾಲ ಸರಿದಿತ್ತು. ಪ್ರಭುಗಳ ಆಗಮನ ಕಾಲ ಸಮೀಪಿಸಿತು. ಅರಮನೆಯ ದರ್ಶನ ಕೋಣೆಗೆ ಬಸವಣ್ಣನವರನ್ನು ಕರೆದೊಯ್ಯಲು ಗೃಹಮಹತ್ತರರು ಮುಂದಾದರು. ತಮ್ಮ ಜೊತೆಯಲ್ಲಿರುವವರನ್ನೂ ಕರೆದುಕೊಂಡು ಹೋಗಲು ಅಣ್ಣನವರು ಅನುಮತಿ ಬೇಡಿದರು. "ತಾವು ಕೇಳಿದರೆ ಸಾಧ್ಯವಿಲ್ಲವೆನ್ನಲಾದೀತೇ? ಅಗತ್ಯವಾಗಿ" ಎಂದು ಮನೆವೆರ್ಗಡೆಗಳು ಅವರೆಲ್ಲರನ್ನೂ ಕರೆದೊಯ್ದರು.

ಕೋಣೆಯ ಒಂದೆಡೆ ಬಸವಣ್ಣನವರಿಗಾಗಿ ಒಂದು ಪೀಠದ ವ್ಯವಸ್ಥೆಯಾಗಿತ್ತು. ಆದರೆ ಅಣ್ಣನವರಿಗೆ ಕುಳಿತುಕೊಳ್ಳಲೂ ಆರದ ತವಕ ತುಡಿಯುತ್ತಿತ್ತು. ನಿಂತೇ ಪ್ರಭುಗಳ ಆಗಮನ ನಿರೀಕ್ಷಿಸುವುದಾಗಿ 'ಹೇಳಿದರು. ಕೊಂಚ ಕ್ಷಣಗಳಲ್ಲಿಯೇ

ಪ್ರಭುಗಳ ಬರುವಿಕೆಯ ಸೂಚನೆಯಾಯಿತು. ಅವರು ಬರುವ ದಿಕ್ಕಿನತ್ತ ಎಲ್ಲರ ಕಣ್ಣುಗಳೂ ತಿರುಗಿದವು. ಅರೆ ಕ್ಷಣದಲ್ಲಿ ಅವರೇ ದಯಮಾಡಿಸಿದ್ದರು. ಬಸವಣ್ಣನವರ ಮುಖದ ಮ್ಲಾನತೆಗೆ ಎದುರಾದ ಪ್ರಸನ್ನವದನ. ಈ ರಾಜರುಗಳು ಸದಾ ಕಾಲ ಹೇಗೆ ಈ ರೀತಿ ಮುಗುಳ್ನಗೆಯನ್ನು ಮುಖದ ಮೇಲೆ ಎಳೆದುಕೊಂಡಿರುತ್ತಾರೋ? ಅದು ಸಹಜವೂ ಪ್ರಾಮಾಣಿಕವಾದದ್ದೂ ಆಗಿಲ್ಲದಿರಬಹುದು, ವಸ್ತ್ರದ ಹಾಗೆ ಬೇಕಾದಂತೆ ಹಾಕಿಕೊಳ್ಳುವ ಬೇಡವಾದಾಗ ಬಿಸುಡಬಹುದಾದ ನಗೆಯದು!

ಬಸವಣ್ಣನವರನ್ನು ಮುಂದೆ ಮಾಡಿಕೊಂಡು ಎಲ್ಲರೂ ಕೈಜೋಡ್ಡಿಸಿದರು, ಕೆಲವರು ಸಾಷ್ಟಾಂಗವನ್ನೇ ಮಾಡಿದರು. ಪ್ರಭುಗಳು ತಮ್ಮ ಪೀಠದಲ್ಲಿ ಕುಳಿತುಕೊಂಡು ತಮ್ಮ ಕೈಯಿಂದ ಪೀಠದತ್ತ ತೋರಿ ಬಸವಣ್ಣನವರಿಗೆ ಕುಳ್ಳಿರಲು ಸೂಚಿಸಿದರು. "ಕುಳಿತುಕೊಳ್ಳಲು ಮನಃಸ್ಥಿತಿಯೇ ಇಲ್ಲ ಪ್ರಭು" ಎಂದು ಹೇಳಿದರು. ಅವಿನಯವಾದೀತೆಂಬ ಹಿಂದಿನ ಅಭ್ಯಾಸಬಲದಿಂದಾಗಿ ಪೀಠದ ಮೇಲೆ ಕುಳಿತರು, ಪೀಠದ ತುದಿಗೆ ಕುಳಿತು ಮುಂದೆ ಬಾಗಿದರು. ಅವರ ಮೊಣಕೈಗಳು ಪೀಠದ ಕೈ ತೋಳುಗಳ ಮೇಲೆ ಕುಳಿತು, ಅಂಗೈಗಳು ಮುಖಾಮುಖಿಯಾಗಿ ಹತ್ತಿರ ಸೇರಿದ್ದವು.

"ದಣ್ಣಾಯಕರು ತುಂಬ ಉದ್ವಿಗ್ನಗೊಂಡಂತಿದೆ!" ಎಂದು ಆಶ್ಚರ್ಯವನ್ನು ಸೂಸುತ್ತ, ಅಣ್ಣನವರ ಮಾತಿನಿಂದ ಪ್ರೇರಿತರಾದಂತೆ ನುಡಿದರು.

"ಎದೆಯೇ ಒಡೆದುಹೋಗಿದೆ, ಪ್ರಭುಗಳೇ. ನಗರದ ಈಶಾನ್ಯಭಾಗದ ಮಾದರ ಕೇರಿಯು ಸುಟ್ಟು ಭಸ್ಮವಾಗಿದೆ. ನೂರಾರು ಜನ ನಿರ್ಗತಿಕರಾಗಿದ್ದಾರೆ. ಹಲವರು ಪ್ರಾಣಕಳೆದುಕೊಂಡಿದ್ದಾರೆ." ಅಣ್ಣನವರ ಮಾತು ಮುಂದುವರಿದಂತೆ ಧ್ವನಿ ಏರಿತು, ಆದರೆ ಕ್ಷಣಕಾಲದಲ್ಲಿ ಗದ್ಗದ ಪ್ರಾರಂಭವಾಯಿತು.

"ಶಾಂತರಾಗಿ ದಣ್ಣಾಯಕರೇ. ಈ ವಿಚಾರ ನಮ್ಮ ಗಮನಕ್ಕೂ ಬಂದಿದೆ. ತೊಂದರೆಗೆ ಒಳಗಾದ ಸತ್ಪ್ರಜೆಗಳ ಯೋಗಕ್ಷೇಮಕ್ಕೆ ನಮ್ಮ ಮನಸ್ಸು ಸದಾ ತುಡಿಯುತ್ತಿರುತ್ತದೆ. ನೀವು ಚಿಂತಿಸಬೇಕಾಗಿಲ್ಲ."

"ಆದರೆ ಮುಗ್ಧ ಜನರನ್ನು ಹೀಗೆ ಬಲಿತೆಗೆದುಕೊಳ್ಳುವ ಹೀನ ಜನರ...."

ಅವರು ಮುಂದುವರೆಸುವ ಮುಂಚೆಯೇ ಪ್ರಭುಗಳು ನಸುನಗುತ್ತ ಹೇಳಿದರು: "ನಮ್ಮ ರಾಜಭಟರು ಆಗಲೇ ಆ ಕಾರ್ಯದಲ್ಲಿ ತೊಡಗಿದ್ದಾರೆ, ದಣ್ಣಾಯಕರೇ, ಅಪರಾಧಿಗಳನ್ನು ಕಠಿಣವಾಗಿ ಶಿಕ್ಷಿಸಲಾಗುವುದು, ಅನುಮಾನ ಬೇಡ."

"ಆದರೂ ಶರಣ ವಿರೋಧಿಗಳ ದಾಂಧಲೆಯು ಈ ಮಟ್ಟಕ್ಕೆ ಹೋಗುವುದೆಂದು ನಾನು ಭಾವಿಸಿರಲಿಲ್ಲ."

"ಶರಣ ವಿರೋಧಿಗಳೆಂದರೆ? " ಮುಗ್ಧತೆಯಿಂದೆಂಬಂತೆ ಪ್ರಭುಗಳು ಪ್ರಶ್ನಿಸಿದರು.

"ನಮ್ಮ ಮಾರ್ಗವು ಪ್ರತಿಪಾದಿಸುವ ಸರ್ವಜಾತಿ ಸಮಾನತೆಯ ಸ್ಥಾಪನೆಗೆ ವಿರೋಧವಾಗಿರುವ ಸಂಪ್ರದಾಯನಿಷ್ಠರು."

"ಆತುರಪಡಬೇಡಿ. ನೀವು ಮುಗ್ಧರು, ಕೆಟ್ಟುದನ್ನು ಯೋಚಿಸದವರು. ಎಲ್ಲ ಶರಣರೂ ನಿಮ್ಮಂತೆಯೇ ಎಂದು ನೀವು ಭಾವಿಸುತ್ತೀರಿ. ಈಗಾಗಲೇ ಗಲಭೆಗಳಿಗೆ ಕಾರಣರಾದ, ಈ ಬೆಂಕಿಯ ಪ್ರಕರಣಕ್ಕೆ ಕಾರಣರಾದ ಕೆಲವರನ್ನು ಸೆರೆಹಿಡಿಯಲಾಗಿದೆಯೆಂದು ಮುಖ್ಯ ಬೇಹುಗಾರರು ನಮಗೆ ವರದಿಯೊಪ್ಪಿಸಿದ್ದಾರೆ. ಅವರ ಮುಖಗಳನ್ನು ಕಂಡರೆ ನೀವು ಖಂಡಿತ ಆಶ್ಚರ್ಯಪಡುತ್ತೀರಿ." ಮತ್ತೆ ಮುಗುಳ್ನಗು. ಬಸವಣ್ಣನವರು ಏನೂ ಹೇಳಲಾರದಾದರು, ಪ್ರಭುಗಳೇ ಮುಂದುವರೆಸಿದರು : "ನಿಮ್ಮ ಶರಣರಲ್ಲಿ ಕೆಲವರೇ ನಿಮ್ಮ ಯೋಜನೆಗೆ ವಿರುದ್ಧವಾಗಿ ಈ ಕಾರ್ಯದಲ್ಲಿ ತೊಡಗಿದವರಲ್ಲಿ ಮೊದಲಿಗರು. ಕಾಲಸರಿದಂತೆ ಇತರ ಮೇಲ್ಜಾತಿಗಳವರೂ ಸೇರಿದ್ದಾರೆಂಬುದು ನಿಜವೇ ಆದರೂ ತೊಂದರೆಗೆ ನಿಮ್ಮವರೇ ಕಾರಣ. ಹಾಗೆ ನೋಡಿದರೆ ಕಾರಣದ ಬೀಜರೂಪರು ನೀವೇ! "

ಬಸವಣ್ಣನವರಿಗೆ ದಿಗ್ಭ್ರಮೆಯಾಯಿತು. ಶರಣರ ಗುಡಿಸಲುಗಳಿಗೆ ಬೆಂಕಿ ಹಚ್ಚಲು ಶರಣರಲ್ಲಿ ಕೆಲವರೂ ಸೇರಿದಾದ್ದರೆಯೇ, ಅಲ್ಲದೆ ಇದೇನಿದು ಕೊನೆಯ ಮಾತು. "ಅಂದರೆ ಪ್ರಭುಗಳು ನನ್ನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಿರುವರೇ?" ನಿಧಾನವಾಗಿ ಕೇಳಿದರು. ಪ್ರಭುಗಳ ಮಾತು ಅಲ್ಲಿದ್ದ ಮಿಕ್ಕವರಲ್ಲೂ ಅಚ್ಚರಿಯುಂಟುಮಾಡಿತ್ತು. ಆದರೆ ಅವರಾರೂ ಮಾತಾಡುವ ಸ್ಥಿತಿಯಲ್ಲಿರಲಿಲ್ಲ. ಚನ್ನಬಸವಣ್ಣನವರ ಮುಖದ ಮೇಲೆ ಅಸಮಾಧಾನದ ಗೆರೆಗಳು ಮೂಡಿದವು. ಆದರೆ ತಮ್ಮ ಮನಸ್ಸಿನಲ್ಲಿ ಮೂಡಿದ ಭಾವನೆಯನ್ನು ದಣ್ಣಾಯಕರೇ ಪ್ರಶ್ನೆಯ ರೂಪದಲ್ಲಿ ವ್ಯಕ್ತಗೊಳಿಸಿದ್ದಾರೆ.

"ನಾವು ನಿಮ್ಮನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಿಲ್ಲ, ದಣ್ಣಾಯಕರೇ, ನೀವು ಕಂಡ ಕನಸು ಮಿಕ್ಕವರ ಕನಸು ಎಂದು ಭಾವಿಸಿದಿರಿ. ಆದರೆ ನಿಮ್ಮ ಕಾರ್ಯ ಇತರರ ಕಲ್ಪನೆಗಿಂತ ತುಂಬ ಮುಂದೆ ಹೋದಂತೆ ಕಾಣುತ್ತದೆ."

"ಈ ಪರಿಸ್ಥಿತಿಯಲ್ಲಿ ಪ್ರಭುಗಳ ಸೇವೆಯಲ್ಲಿ ಮುಂದುವರೆಯುವ ಆಸೆ ನನ್ನಲ್ಲಿಲ್ಲ. ನನ್ನನ್ನು ಬಿಡುಗಡೆ ಮಾಡಬೇಕೆಂದು ಪ್ರಭುಗಳಲ್ಲಿ ಅರಿಕೆಮಾಡಿಕೊಳ್ಳುತ್ತೇನೆ" ಬಸವಣ್ಣನವರು ಎದ್ದು ನಿಂತು ತುಸು ಮುಂದೆ ಬಾಗಿ ನಿಂತರು.

"ಆತುರ ಪಡಬೇಡಿ ದಣ್ಣಾಯಕರೇ. ನೀವು ಕನಸು ಕಾಣುವವರು ನಿಜ, ಆದರೆ ಸ್ವಲ್ಪ ವಾಸ್ತವವಾದಿಗಳಾಗಿ. ಈಗಲಾದರೂ ನೀವೊಮ್ಮೆ ನಮ್ಮ ಮುಖ್ಯ ಬೇಹುಗಾರರನ್ನು ಕಾಣಿ, ಸೆರೆ ಹಿಡಿದ ಜನರನ್ನು ಕಾಣಿಸುತ್ತಾರೆ. ಅವರಲ್ಲಿ ಶರಣರೆನ್ನಿಸಿಕೊಂಡವರೆಷ್ಟು ಮಂದಿಯಿದ್ದಾರೆಂಬುದು ನಿಮಗೇ ಅರಿವಾಗುತ್ತದೆ. ಅವರಲ್ಲಿ ಕೆಲವರು ನಿಮ್ಮ ನೇರ ಪರಿಚಯದವರೂ ಇರಬಹುದು." ಮತ್ತೆ ಪ್ರಭುಗಳು ಮುಗುಳ್ನಕ್ಕರು. ವ್ಯಂಗ್ಯದ ನಗೆಯೇ, ಪರಿಹಾಸದ್ದೇ!

"ಪ್ರಭುಗಳು ಹೇಳುವುದು...."

"ಇನ್ನು ಹೆಚ್ಚೇನಿಲ್ಲ. ನೀವು ಚಿಂತಿಸಬೇಕಾಗಿಲ್ಲ, ಶಾಂತಿ ಪಾಲನೆ ನಮ್ಮ

ಹೊಣೆ, ಅಪರಾಧಿಗಳಿಗೆ ಖಂಡಿತ ಶಿಕ್ಷೆಯಾಗುವುದು. ತಾವು ಹೇಳಿದವರಿಗೆಲ್ಲ ಸೂಕ್ತ ಸಹಾಯ ಒದಗಿಸಲಾಗುವುದು. ಇದಕ್ಕಿಂತ ಭರವಸೆ ಬೇಕೇ? ಆದರೆ ಒಂದು ಮಾತು: ನೀವು ವಾಸ್ತವವನ್ನು ಕಾಣಬೇಕು, ದಣ್ಣಾಯಕರೇ, ಪ್ರಯತ್ನಿಸಿ" ಹೀಗೆಂದು ಪ್ರಭುಗಳು ಮೇಲೆದ್ದರು. ಸಂದರ್ಶನ ಮುಗಿಯಿತೆಂಬ ಸೂಚನೆ. ಏನೇನನ್ನೋ ಹೇಳಬೇಕೆಂದುಕೊಂಡಿದ್ದ ಬಸವಣ್ಣನವರಿಗೆ ಅವುಗಳನ್ನೆಲ್ಲ ಸಮರ್ಪಕವಾಗಿ ಹೇಳುವ ಅವಕಾಶವೇ ಸಿಕ್ಕಲಿಲ್ಲ. ಅಥವಾ ಪ್ರಭುಗಳು ಹೇಳಿದ್ದ ನಂಬಲಾಗದ ಸತ್ಯಗಳು ಅವರ ಮನಸ್ಸನ್ನು ಗೊಂದಲಕ್ಕೀಡುಮಾಡಿದ್ದುವು.

ನಿಜವಾದ ಪರಿಸ್ಥಿತಿಯೂ ಅದೇ ಆಗಿತ್ತು. ಬಂಧಿತರಲ್ಲಿ ಅನೇಕರು ಶರಣರೂ ಇದ್ದರು. ಅವರ ಕೊರಳಲ್ಲಿ ಕರಡಿಗೆ, ರುದ್ರಾಕ್ಷಿ; ಹಣೆಯಲ್ಲಿ ವಿಭೂತಿಪಟ್ಟೆ ರಾರಾಜಿಸುತ್ತಿದ್ದವು. ಮಾತು ಮಾತಿಗೆ 'ಶಿವ' ಎಂದು ಉದ್ಗರಿಸುತ್ತಿದ್ದರು. ಕಲ್ಲಿನಾಥನೂ ಅವರಲ್ಲಿ ಸೇರಿದ್ದ, ಅವನಂತಹ ಇನ್ನೂ ಕೆಲವರು. ಬೇಹುಗಾರರ ಅನುಮಾನವೆಂದರೆ ಪೂರ್ತಿ ಶಿವಾಚಾರ ಮಾರ್ಗಾವಲಂಬಿಗಳಾದ ಮಾದರಕೇರಿಗೆ ಬೆಂಕಿ ಹಚ್ಚಲು ಕೆಲವು ಶರಣರ ಕುಮ್ಮಕ್ಕು ಇದ್ದುದಷ್ಟೇ ಅಲ್ಲ, ನೇರವಾದ ಕೈವಾಡವಿತ್ತು ಎಂಬುದು.

ಮಹಮನೆಗೆ ಮರಳುತ್ತ ಬಸವಣ್ಣನವರ ಮನಸ್ಸು ಬೇಗುದಿಯ ಕುಂಡದಲ್ಲಿ ಬಿದ್ದು ಬೇಯುತ್ತಿತ್ತು. ಸೆರಗಲ್ಲಿ ಸುಣ್ಣವನ್ನು ಕುಟ್ಟಿಕೊಂಡು ನೀರಲ್ಲಿ ಬಿದ್ದಂತಾಯಿತೇ ಎಲ್ಲರನ್ನೂ ತಮ್ಮವರೆಂದು ಭಾವಿಸಿದ್ದು. ಲಾಂಛನಕೆ ಶರಣೆಂಬೆ ಎಂಬ ತಮ್ಮ ಮಾತು ತಮಗೇ ಉರುಳಾಯಿತೇ? ಎದುರಲ್ಲಿ ತಮ್ಮನ್ನು ಆರಾಧಿಸುವವರಲ್ಲಿ ಕೆಲವರಾದರೂ ಮರೆಯಲ್ಲಿ ತಮ್ಮ ವಿರೋಧಿಗಳಾಗಿರುವವರೇ? ಅಥವಾ ಪ್ರಭುಗಳೆಂದಂತೆ ತಾವು ಕಂಡ ಕನಸಿನ ಅನುಕೂಲಕರ ಭಾಗವನ್ನು ಮಾತ್ರ ಹಂಚಿಕೊಳ್ಳಲು ಸಿದ್ಧರಾದ ಜನ ತಮಗೆ ಸರಿಯೆನಿಸದ ಭಾಗವನ್ನು ತಮ್ಮ ಮೇಲೆ ಎಸೆಯುತ್ತಿದ್ದಾರೆಯೇ? ಅಥವಾ ಈ ಮದುವೆಗೆ ಉತ್ಸಾಹದಿಂದ ಒಪ್ಪಿಗೆಯಿತ್ತುದು ಇನ್ನೂ ಹದಗೊಳ್ಳದೇ ಇದ್ದ ಪರಿಸ್ಥಿತಿಯಲ್ಲಿಯೇ? ತಾವು ಕಂಡ ಎಷ್ಟೋ ತ್ರಿಪುಂಡ್ರಗಳ ಹಿಂದೆ ಬೆಂಕಿಯು ಉರಿಯುತ್ತಿತ್ತೇ? ಕಂಡ ರುದ್ರಾಕ್ಷಿಗಳು ಪ್ರಚ್ಛನ್ನ ಕೆಂಡಗಳಾಗಿದ್ದುವೇ? ಕೊರಳಲ್ಲಿ ನೇತಾಡುವ ಕರಡಗೆಗಳು ತಾವಿ ಕಟ್ಟಿಕೊಂಡ ಕೆಲವರ ಎದೆಯಲ್ಲಿ ಪ್ರೀತಿಯನ್ನು ಬಿತ್ತುವುದರ ಬದಲು ದ್ವೇಷವನ್ನು ಹೊತ್ತಿಸಿತ್ತೇ? ಅಂದುಕೊಂಡದ್ದೊಂದು, ಆದದ್ದು ಮತ್ತೊಂದು. ಎಲ್ಲವೂ ತಮ್ಮ ಕಲ್ಪನೆಗೆ ಮೀರಿದಂತೆ ತಮ್ಮ ಕೈಯನ್ನೂ ಮೀರಿಬಿಟ್ಟಿವೆಯೇ?

# ೧೮

ನಮ್ಮ ಅಜ್ಜಿ ಬದುಕಿದ್ದಾಗ ನನಗಿನ್ನೂ ತುಂಬ ಚಿಕ್ಕ ವಯಸ್ಸು. ಆದರೂ ಅವರು ಹೇಳುತ್ತಿದ್ದ ಮಾತುಗಳು, ವಿಷಯಗಳು ನನಗೀಗಲೂ ಸ್ಪಷ್ಟವಾಗಿ ನೆನಪಿವೆ. ಆ ವಯಸ್ಸೇ ಅಂತಹುದೇನೋ. ಏನು ಕೇಳಿದರೂ ನೋಡಿದರೂ ಸ್ಪಷ್ಟವಾಗಿ ಮನಸ್ಸಿನಲ್ಲಿ ಮೂಡಿಬಿಡುತ್ತವೆ. ಹಾಗೆಯೇ ಅಭ್ಯಾಸಗಳೂ; ಚಿಕ್ಕಂದಿನಲ್ಲಿ ಮಾಡಿಕೊಂಡ ಅಭ್ಯಾಸಗಳು ಕೊನೆಯವರೆಗೂ ಉಳಿದುಬಿಡುತ್ತವೆ. ಅವಕ್ಕೇ ಚಿಕ್ಕಂದಿನ ಬಾಳೆಂದರೆ ಮುಂದಿನ ಬದುಕಿಗೆಂದು ಬಿತ್ತನೆ ಮಾಡುವ ಕಾಲ. ಆಗ ಬಿತ್ತಿದ್ದೇ ಮುಂದೆ ಬೆಳೆಯುವುದು; ಆಗ ಬಿತ್ತಿದ್ದೇ ಮುಂದೆ ಉಳಿಯುವುದು.

ಅಜ್ಜಿ ಪ್ರತಿನಿತ್ಯ ಅಡುಗೆಯ ಮನೆಯೊಳಗೆ ಹೊರಗೆ ಕೆಲಸಮಾಡುವಾಗಲೆಲ್ಲ, ವಿಶೇಷವಾಗಿ ಬೆಳಗಿನ ಹೊತ್ತು ಏನೇನೋ ಹೇಳಿಕೊಳ್ಳುತ್ತಿದ್ದರು. ಹಾಗೆ ನೋಡಿದರೆ ಅವರಿಗಿಂತ ಮುಂಚೆ ನಾನೇ ಜಳಕ ಮಾಡುತ್ತಿದ್ದೆ; ಅಥವಾ ಮಾಡುವ ಅಭ್ಯಾಸವಾಗಿತ್ತು; ಅರ್ಥಾತ್ ಅಭ್ಯಾಸ ಮಾಡಿಸಿದ್ದರು. ನಾನು ಒದ್ದೆಯ ಮುಂಡು ಉಟ್ಟು ಅಡಿಗೆಯ ಮನೆಯಲ್ಲಿ ಅಜ್ಜಿ ಬೆಂಕಿ ಪಟುಮಾಡಿದ್ದ ಒಲೆಯ ಮೇಲೆ ಎಸರಿಗಿಡುತ್ತಿದ್ದೆ. ಅಜ್ಜಿ ನಸುಕಿಗೇ ಎದ್ದು ಊರ ಅಗ್ಗಿಷ್ಟಗೆಯಿಂದ ಬೆಂಕಿ ತಂದಿಡುತ್ತಿದ್ದರು. ಅದನ್ನು ಹಾಕಿ ಕಟ್ಟಿಗೆಗಳನ್ನು ಒಟ್ಟಿ ಒಲೆಯಲ್ಲಿ ದೊಡ್ಡ ಉರಿ ಸಿದ್ಧವಾಗಿಸುವ ಹೊತ್ತಿಗೆ ನಾನು ಸ್ನಾನಮಾಡಿರುತ್ತಿದ್ದೆ. ಮುಂದಿನ ಅಡಿಗೆ ಕಾರ್ಯವೆಲ್ಲ ಅಜ್ಜಿಯದೇ. ಆಗೆಲ್ಲ ಏನೇನೇನ್ನೋ ನಿಧಾನವಾಗಿ ಹೇಳಿಕೊಳ್ಳುತ್ತಿದ್ದರು.

"ಏನಜ್ಜಿ, ಅದು ಏನೇನೋ ಪದ್ಯ ಹೇಳಿಕೊಳ್ತೀಯಲ್ಲ" ಎಂದು ಕೇಳಿದರೆ ತನ್ನ ಹಲ್ಲಿಲ್ಲದ ಬಾಯನ್ನು ಇಷ್ಟಗಲ ಮಾಡಿ "ಶ್ಲೋಕಗಳು; ಸ್ತೋತ್ರಗಳು ಕಣಪ್ಪ" ಎನ್ನುತ್ತಿದ್ದರು.

"ಯಾಕೆ ನೀನೇನು ಗುರುಗಳ ಹತ್ತಿರ ಒಪ್ಪಿಸಬೇಕಾ?"

"ಇದಾನಲ್ಲಪ್ಪ ಎಲ್ಲರಿಗೂ ದೊಡ್ಡ ಗುರು, ಅವನ ಹತ್ತಿರ ಒಪ್ಪಿಸಬೇಕಲ್ಲ"

"ಯಾರಜ್ಜಿ ಅದು?" ಎಂದು ಬೆಕ್ಕಸಬೆರಗಾಗಿ ಕೇಳುತ್ತಿದ್ದೆ.

"ಅಗೋ ಅಲ್ಲಿದ್ದಾನಲ್ಲ, ಯಾರಿಗೂ ಕಾಣದೆ ಕೂತವನು" ಎಂದು ಕಣ್ಣು ಮೇಲೆ ಮಾಡಿ ಕೈಯೆತ್ತಿ ತೋರಿಸುತ್ತಿದ್ದರು.

ಇಂಥ ಭಂಗಿಯಲ್ಲಿ ಮೇಲಿನವನನ್ನು ತೋರಿಸುವ ಪರಿ ನನಗಾಗಲೇ ಸಾಕಷ್ಟು ಪರಿಚಯವಾಗಿದ್ದುದರಿಂದ "ದೇವರಾ?" ಎನ್ನುತ್ತಿದ್ದೆ.

"ಹ್ಞೂಂ, ಪುಟ್ಟ, ಎಲ್ಲ ಗೊತ್ತು ನಮ್ಮ ಪುಟ್ಟಶಂಕರನಿಗೆ" ಎಂದು ಅಜ್ಜಿ ನನ್ನ ಕೆನ್ನೆ ನೇವರಿಸಿ ಲಟಿಗೆ ಮುರಿದುಕೊಳ್ಳುತ್ತಿದ್ದರು. ಎಷ್ಟು ಮಮತೆಯಿರಬೇಕು ನನ್ನ ಮೇಲೆ ಎಂದು ಆಗಿನ ಅಜ್ಜಿಯ ನಡವಳಿಕೆಯನ್ನು ನೆನೆದು ಕಣ್ಣು ಒದ್ದೆಯಾಗುತ್ತದೆ. ಪ್ರೀತಿ, ವಿಶ್ವಾಸ ಎಂದರೆ ಹೇಗೆ ಶಾಶ್ವತವಾಗಿ ನೆನೆಯುವಂತೆ ಮಾಡುತ್ತದೆ ಎಂದು ಅದರ ಶಕ್ತಿಯ ಬಗ್ಗೆ ಬೆರಗಾಗುತ್ತದೆ.

ಅಜ್ಜಿ ನನ್ನನ್ನು ಪುಟ್ಟಶಂಕರನೆಂದು ಕರೆಯುತ್ತಿದ್ದರಲ್ಲ ಅದಕ್ಕೆ ಕಾರಣ ಮುಂಜಿಯಾಗುವ ಮೊದಲಿನ ನಾನು ಸಂನ್ಯಾಸ ಪಡೆಯುವ ಶಂಕರಾಚಾರ್ಯರಂತೆಯೇ ಇದ್ದೇನೆ ಎಂದು ಭಾವಿಸಿದ್ದು. ಪಕ್ಕದಿಂದ ನೋಡಿದರೆ ನಾನ್ ಥೇಟ್ ಅವರಂತೆಯೇ ಎಂದು ಶಂಕರರನ್ನು ತಾನು ಕಂಡವಳಂತೆಯೇ ಅಜ್ಜಿ ಹೇಳುತ್ತಿದ್ದರು. ಕಂಡಿರಲು ಸಾಧ್ಯವೇ, ಶಂಕರಾಚಾರ್ಯರು ಇಂದಿಗೆ ಸುಮಾರು ಮುನ್ನೂರೈವತ್ತು ವರ್ಷಗಳಷ್ಟು ಹಿಂದೆಯಲ್ಲವೇ ಇದ್ದುದು. ಆದರೂ ಶಂಕರರೆಂದರೆ ಅಜ್ಜಿಗೆ ಅಷ್ಟು ಭಕ್ತಿ. ಅದಕ್ಕೇ ಪ್ರತಿನಿತ್ಯ ಬೆಳಗಿನ ಕೆಲಸ ಸಾಗಿಸುವಾಗ ಅವರು ಹೇಳಿಕೊಳ್ಳುತ್ತಿದ್ದುದು ಶಂಕರರ ಭಜಗೋವಿಂದ ಸ್ತೋತ್ರ, ಕರಾವಲಂಬನ ಸ್ತೋತ್ರ, ಕಾಲಭೈರವಾಷ್ಟಕ ಮುಂತಾದವನ್ನು, ತನಗೆ ಬಲ್ಲ ಮಟ್ಟಿನಿಂದ. ಜೊತೆಗೆ ಭಗವದ್ಗೀತೆಯ ಶ್ಲೋಕಗಳನ್ನೂ ಹೇಳಿಕೊಳ್ಳುವರು. ಅವರು ಹೇಳುತ್ತಿದ್ದುದನ್ನು ಕೇಳಿ ಕೇಳಿ ಅದೆಲ್ಲ ನನಗೂ ನಾಗಕ್ಕನಿಗೂ ಬಾಯಿಪಾಠವಾದುವು. ಯಾವ ಸ್ತೋತ್ರವಾದ ಮೇಲೆ ಯಾವುದು, ಯಾವ ಶ್ಲೋಕವಾದ ಮೇಲೆ ಯಾವುದು ಎಂಬುದು ನಮಗೆ ಪರಿಚಯವಾಗಿಬಿಟ್ಟಿತ್ತು. ಅಜ್ಜಿ ಒಂದು ಸ್ತೋತ್ರ ಹೇಳಿದ ಮೇಲೆ ಒಂದು ಕ್ಷಣ ನಿಲ್ಲಿಸಿದರೆ, ಮುಂದಿನ ಸ್ತೋತ್ರ ಯಾವುದೆಂದು ಅಜ್ಜಿಗೆ ಕೇಳಿಸದಂತೆ ನಾನು ಅಕ್ಕನಿದ್ದರೆ ಅವಳಿಗೆ ಹೇಳುತ್ತಿದ್ದೆ. ಮುಂದಿನ ಕ್ಷಣದಲ್ಲಿ ಅಜ್ಜಿ ಅದೇ ಸ್ತೋತ್ರ ಪ್ರಾರಂಭಿಸುತ್ತಿದ್ದರು. ಆಗ ನಾನು–ಅಕ್ಕ ನಕ್ಕಿದ್ದೇ ನಕ್ಕಿದ್ದು!

ಅಜ್ಜಿ ಶಂಕರಾಚಾರ್ಯರ ಬಗ್ಗೆ ನನಗೆ ಕತೆಗಳನ್ನೂ ಹೇಳುತ್ತಿದ್ದರು. ಬಹುಬೇಗ ಸನ್ಯಾಸ ತೆಗೆದುಕೊಂಡದ್ದು, ಕಾಯಿಲೆಯಾದ ತಾಯಿ ನದಿಸ್ನಾನಕ್ಕೆಂದು ನದಿಯವರೆಗೆ ನಡೆಯಲಾರದಾದಾಗ ಗಂಗಾಸ್ತೋತ್ರ ಮಾಡಿ ನದಿಯೇ ಮನೆಯ ಮುಂದೆ ಹರಿಯುವಂತೆ ಮಾಡಿದುದು. ಸನ್ಯಾಸಿಯಾಗಿ ಭಿಕ್ಷೆಗೆಂದು ಅಡುಗೂಲಜ್ಜಿಯೊಂದರ ಮನೆಯ ಮುಂದೆ ನಿಂತಾಗ ಕಡು ಬಡವಿಯಾದ ಅವಳು ತಮ್ಮ ಮನೆಯಲ್ಲಿದ್ದ ಒಂದೇ ಒಂದು ಒಣ ನೆಲ್ಲಿಕಾಯನ್ನು ತಂದು ಭಿಕ್ಷಾಪಾತ್ರೆಗೆ ಹಾಕಿದ್ದನ್ನು ಕಂಡು ಅವಳ ಬಡತನವನ್ನು ತಿಳಿದು ಲಕ್ಷ್ಮೀ ಧ್ಯಾನ ಮಾಡಿ ಸುವರ್ಣವೃಷ್ಟಿಯನ್ನು ಕರೆದದ್ದು– ಹೀಗೇ ಅದ್ಭುತವಾದ ಕತೆಗಳು. ಅಜ್ಜಿ ಹೇಳುವ ಆಕರ್ಷಕ ವಿಧಾನ ಬೇರೆ. ಕಣ್ಣೆರಡನ್ನೂ ಇಷ್ಟಗಲ ಮಾಡಿಕೊಂಡು ಕಿವಿಯೊಳಕ್ಕೆ ತುಂಬಿಕೊಳ್ಳುತ್ತಿದ್ದೆ. ಅಕ್ಕನೂ ಜೊತೆಗಿರುತ್ತಿದ್ದಳು. ಅವಳಿಗೂ ಇವೆಲ್ಲ ನೆನಪಿರಬಹುದು.

ಮುಂದೆ ನಾನು ಶಂಕರಾಚಾರ್ಯರ ಬಗ್ಗೆ ಬೇಕಾದಷ್ಟು ತಿಳಿದುಕೊಂಡೆ. ಈಶಾನ್ಯಗುರುಗಳ ಪಾದದಡಿ ಕುಳಿತು ಅವರ ಮಾರ್ಗದರ್ಶನದಲ್ಲಿಯೇ

ಶಂಕರರು ರಚಿಸಿದ್ದ ಭಾಷ್ಯಗಳನ್ನು ಅಧ್ಯಯನ ಮಾಡಿದೆ. ಅವರು ಅದ್ವೈತವನ್ನು ಪ್ರತಿಪಾದಿಸಿದರೂ 'ಅಹಂ ಬ್ರಹ್ಮಾಸ್ಮಿ' ಎಂದರೂ ಸಗುಣದ ಉಪಾಸನೆಯನ್ನು ಒಪ್ಪಿದರು. ತಾವೇ ನಾನಾ ದೇವರುಗಳಾದ ವಿಷ್ಣು, ಶಿವ, ಶಕ್ತಿ, ಹನುಮಂತ ಮುಂತಾದವರ ಬಗ್ಗೆ ಸ್ತೋತ್ರರಚನೆ ಮಾಡಿದ್ದರಲ್ಲ. ಅವರ ಅದ್ವೈತ ನನಗೆ ಒಪ್ಪಿತವೆನಿಸಿದ್ದರೂ ಈ ಲೋಕವನ್ನು ಮಾಯೆ ಎಂದು ಕರೆದದ್ದು, ಸಂಸಾರ ಅಸಾರ – ಅನಿತ್ಯ ಎಂದದ್ದು ನನಗೆ ಬುದ್ಧಿ ಬಲಿತಂತೆ ಒಪ್ಪಿತವಾಗದೆ ಹೋಯಿತು. ಅಜ್ಜಿ ಹೇಳಿದ ಕತೆಯ ಪ್ರಕಾರ ಶಂಕರರು ಕಾಶಿಗೆ ಹೋಗಿ ಗಂಗೆಯಲ್ಲಿ ಮಿಂದು ಬರುವಾಗ ಚಂಡಾಲನೊಬ್ಬನು ಎದುರಾದನಂತೆ. ಮಡಿಯಲ್ಲಿದ್ದಾಗ ಇವನು ಬರಬೇಕೆ ಎಂಬ ಚಡಪಡಿಕೆಯಿಂದ 'ದೂರ ಸರಿ' ಎಂದು ಕೈಯಿಂದ ಸೂಚಿಸಿದರಂತೆ. ಕಣ್ಣೆತ್ತಿ ನೋಡುವಷ್ಟರಲ್ಲಿ ಆ ಚಂಡಾಲ ಮಾಯವಾಗಿದ್ದನಂತೆ. ಆಗ ಅವರಿಗೆ ಹಾಗೆ ಚಂಡಾಲವೇಷಧಾರಿಯಾಗಿ ತನ್ನನ್ನು ಪರೀಕ್ಷಿಸಲು ಸಾಕ್ಷಾತ್ ಶಿವನೇ ಬಂದಿದ್ದನೆಂದು ಜ್ಞಾನೋದಯವಾಯಿತಂತೆ. ಆದರೆ ನನಗೆ ಅನುಮಾನ ಉಳಿದೇ ಉಳಿಯಿತು. ಜ್ಞಾನೋದಯವಾದರೆ ಅವರೇಕೆ ವರ್ಣಾಶ್ರಮ ವ್ಯವಸ್ಥೆಯ ಬುನಾದಿಯನ್ನು ಪಡೆದ ವೈದಿಕಮತದ ಪುನಃಸ್ಥಾಪನೆಗೆ ಅಷ್ಟೊಂದು ಪ್ರಯತ್ನಿಸಬೇಕಾಗಿತ್ತು ಎನ್ನಿಸಿತು. ಬುದ್ಧನಂತಹವರು ಮನುಷ್ಯ–ಮನುಷ್ಯರಲ್ಲಿ, ಗಂಡು–ಹೆಣ್ಣುಗಳಲ್ಲಿ ಭೇದವೆಣಿಸುವಂಥ ವೈದಿಕ ಮತವನ್ನು ಖಂಡಿಸಿ ಮತ್ತೊಂದು ಮಾರ್ಗವನ್ನು ತೋರಿಸಿದ್ದರಲ್ಲ. ಅದು ಭರತ ಖಂಡದಾದ್ಯಂತ ವ್ಯಾಪಿಸಿತೆಂಬ ಕಾರಣಕ್ಕಾಗಿಯೇ ಅಲ್ಲವೇ ಶಂಕರರು ಅದನ್ನೋಡಿಸಲು ಪ್ರಯತ್ನಿಸಿದ್ದು ? ಬುದ್ಧ ಹೇಳಿದಂತಹ ಮತದ ಸ್ವರೂಪ ಶಂಕರರ ಕಾಲಕ್ಕೆ ಇರಲಿಲ್ಲವೆಂಬುದು ಸರಿಯೇ; ಬೌದ್ಧವೂ ಶಂಕರರ ಹೊತ್ತಿಗೆ ವಜ್ರಯಾನದ ವಾಮಾಚಾರಿಗಳ ಕೈಯಲ್ಲಿತ್ತು ಎಂಬುದು ನಿಜ. ಆದರೆ ಅವನನ್ನು ನಿರೀಶ್ವರವಾದಿಯೆಂಬುವ ಕಾರಣಕ್ಕಾಗಿ ಶಂಕರರು ಬೌದ್ಧಮತವನ್ನು ಖಂಡಿಸಿದರಂತೆ. ಆದರೇನು ಅವರು ಹೋಗಿದ್ದ ವರ್ಣ–ಜಾತಿ–ಪದ್ಧತಿಗಳನ್ನೂ, ಮಾಯಾವಾದವನ್ನೂ ಮತ್ತೆ ವಾಪಸ್ಸು ಬರುವಂತೆ ಮಾಡಿದರಲ್ಲ!

ನನ್ನ ಮನಸ್ಸು ಮಂಗಳವಾಡಕ್ಕೆ ಬರುವ ವೇಳೆಗಾಗಲೇ ಈ ವಿಷಯದ ಬಗ್ಗೆ ಕುದಿಯ ತೊಡಗಿತ್ತು. ಬುದ್ಧ ಜೀವನಕ್ಕೆ ಕೊಟ್ಟ ಮಹತ್ವ, ದುಃಖವನ್ನು ಹೋಗಲಾಡಿಸಿಕೊಳ್ಳಲು ಆಸೆಗೆ ಹಾಕಬೇಕಾದ ಕಡಿವಾಣ, ಸ್ತ್ರೀಯರಿಗೂ ಕೊಟ್ಟಪ್ರಾಶಸ್ತ್ಯ –ಇವೆಲ್ಲ ನನ್ನ ಮನಸ್ಸನ್ನು ಆಕರ್ಷಿಸಿದ್ದವೆಂಬುದು ನಿಜ. ಎಷ್ಟೋ ವೇಳೆ ಯಾವುದು ಸರಿ, ಯಾವುದು ಸರಿಯಲ್ಲ ಎಂಬ ಗೊಂದಲಕ್ಕೆ ಒಳಗಾಗುತ್ತಿದ್ದೆ. ಆಗೆಲ್ಲ ಈಶಾನ್ಯಗುರುಗಳಿಗೆ ಪ್ರಶ್ನೆಹಾಕುವ ಮೂಲಕ ನನ್ನ ಸಂದೇಹಗಳನ್ನು ಹೊರಚೆಲ್ಲುತ್ತಿದ್ದೆ. ಪ್ರಾಯಶಃ ಈ ಕಾರಣದಿಂದಲೇ ದೊಡ್ಡ ಕನಸು ಕಾಣು ಎಂದು ನನ್ನನ್ನವರು ಹುರಿದುಂಬಿಸಿದರೇನೋ!

ಆದರೆ ಬುದ್ಧನಾಗಲೀ, ಶಂಕರರಾಗಲೀ ತಾವು ಏನನ್ನು ಸಾಧಿಸಿದರೋ ಅದನ್ನೆಲ್ಲ ತಮ್ಮ ಬದುಕನ್ನೇ ಒತ್ತೆಯಿಟ್ಟು ಮಾಡಿದ ಹಿನ್ನೆಲೆಯಲ್ಲಿರುವುದು ಏನು?

ಜೀವನದಲ್ಲಿ ಅಪಾರ ದುಃಖವಿದೆ; ಕೆಲವು ಪ್ರಕೃತಿಯಿಂದ ಬಂದವು, ಮತ್ತೆ ಹಲವು ಮನುಷ್ಯನ ತಿಳಿವಳಿಕೆಯ ದೋಷದಿಂದ ಉಂಟಾದವು. ಅದನ್ನು ಹೋಗಲಾಡಿಸಿಕೊಂಡು ಜೀವನವನ್ನು ಸಹನೀಯವನ್ನಾಗಿ, ಅರ್ಥಪೂರ್ಣವನ್ನಾಗಿ ಬಾಳಲು ಜನರಿಗೆ ಸಹಾಯ ಮಾಡಬೇಕೆಂಬ ಕಕ್ಕುಲತೆಯೇ ಅಲ್ಲವೇ ಇಂತಹ ಮಹಿಮಾನ್ವಿತರ ಮನಸ್ಸಿನ ಮೂಲದ್ರವ್ಯ? ಜನರನ್ನು ಮೇಲೆತ್ತಬೇಕೆಂಬುದೇ ಅಲ್ಲವೇ ಅವರೆಲ್ಲರ ಉದ್ದೇಶ ? ಅವರೂ ಮಾನವರಾದ್ದರಿಂದ ಅವರು ಕಂಡುಕೊಂಡ ಸತ್ಯ ಸಾರ್ವಕಾಲಿಕವೆನ್ನಿಸದಿರಬಹುದು. ಆದರೆ ಅವರ ಪ್ರಾಮಾಣಿಕತೆಯನ್ನು ನಾವು ಅಲ್ಲಗಳೆಯಬೇಕೆ? ಹೀಗನ್ನಿಸಿಯೇ ಜನರಲ್ಲಿ ಭೇದವೆಣಿಸದ ಶಿವನ ಉಪಾಸನೆಯ ಸರಳ ಮಾರ್ಗದ ಪ್ರಚಾರವನ್ನು ನಾವೆಲ್ಲ ಕೈಗೊಂಡಿದ್ದು. ಆದರೆ ಈ ಮನುಷ್ಯರೇಕೆ ಹೀಗೆ. ಪ್ರಾಣಗಿಂತ ಹಿಂಸ್ರಜಂತುಗಳಲ್ಲ! ಎಲ್ಲ ಕಾಲದಲ್ಲಿಯೂ ಹೀಗೆಯೇ ಏನೋ. ತಮ್ಮ ಬದಿಗಿರುವವರನ್ನು ಎದುರಾಳಿಯೆಂದು ಬಗೆದು, ಅವನನ್ನು ನಿರ್ನಾಮಗೊಳಿಸುವ ಉದ್ದೇಶದಿಂದ ಯಾವುದಾದರೊಂದು ನೆಪ ಕಂಡುಕೊಳ್ಳುವುದು, ಅದು ದೇವರೋ, ಧರ್ಮವೋ, ರಾಜ್ಯವೋ ಎಂಥದ್ದೋ ಒಂದು! ಹೀಗೆಂದು ತಾವು ಮಾಡಬೇಕೆಂದುಕೊಂಡ ಕಾರ್ಯವನ್ನು ಮಾಡದೇ ಸುಮ್ಮನಿರುವುದೂ ಸಾಧ್ಯವಲ್ಲ. ದಿನನಿತ್ಯ ಉಂಟಾಗುವ ಕೊಳೆಯನ್ನು ಹೋಗಲಾಡಿಸಿಕೊಳ್ಳಲು ಶುಚಿಕ್ರಿಯೆ ಬೇಕಲ್ಲ; ನಾಳೆಯೂ ಕೊಳೆಯಾಗುತ್ತದಲ್ಲ ಎಂದು ಸುಮ್ಮನಿದ್ದುಬಿಡಲು ಸಾಧ್ಯವೇ, ಹಾಗಿರುವುದು ಸಾಧುವೇ?

ಒಂದು ಬಾರಿ ನನಗೊಂದು ಕನಸು ಬಿದ್ದಿತ್ತು : ಅದಿನ್ನೂ ನನ್ನ ಮನಸ್ಸಿನಲ್ಲಿ ಸ್ಪಷ್ಟವಾಗಿ ನೆನಪಿದೆ. ಅರ್ಧಕ್ಕೇ ಎಚ್ಚರಗೊಂಡಿದ್ದೆ. ಕನಸಿನ್ನೂ ಪೂರ್ತಿಗೊಂಡಿರಲಿಲ್ಲವೆನ್ನಿಸುತ್ತದೆ. ಹೀಗೆಂದುಕೊಂಡರೆ ನಗು ಬರುತ್ತದೆ. ನಿದ್ದೆಯಲ್ಲಿ ಕಾಣುವ ಕನಸು ಅರ್ಧವೋ ಪೂರ್ಣವೋ ಹೇಗೆ ಗೊತ್ತಾಗಬೇಕು. ಪೂರ್ಣವೆಂಬುದು ಯಾವುದೆಂದು ತಿಳಿದಿದ್ದರೆ ತಾನೇ ಅರ್ಧವೆಂದು ಗೊತ್ತಾಗುವುದು! ಆಗ ನಾನು ಮಂಗಳವಾಡಕ್ಕೆ ಬಂದ ಹೊಸತು. ಆಶ್ರಯ ಸಿಕ್ಕಿದ್ದರೂ, ಬದುಕಿಗೆ ನೆಲೆಯೊದಗಿದಂತೆ ಕಂಡರೂ, ನನ್ನ ಮನಸ್ಸು ಅಸ್ಥಿರವಾಗಿತ್ತು. ನಾನೇನಾದರೂ ಹಿರಿದನ್ನು ಸಾಧಿಸಬೇಕೆಂಬ ಬಯಕೆಯ ಬೀಜವನ್ನು ಈಶಾನ್ಯಗುರುಗಳು ನನ್ನ ಮನಸ್ಸಿನಲ್ಲಿ ಬಿತ್ತಿದ್ದರಲ್ಲವೇ. ಅದು ಮಿಸುಕಾಡುತ್ತಿತ್ತೆಂದು ಕಾಣುತ್ತದೆ. ದೊಡ್ಡ ಗುರಿಗೆ ಮನಸ್ಸು ಕಣ್ಣು ನೆಡಲು ಯೋಚಿಸುತ್ತಿತ್ತೇನೋ. ಆ ಕಾಲಕ್ಕೆ ಬಿದ್ದ ಕನಸಿದು: ನಾನೆಲ್ಲೋ ಹೋಗುತ್ತಿದ್ದೇನೆ, ಎಲ್ಲಿಗೆ ಎಂಬುದು ತಿಳಿಯದು, ಎಲ್ಲಿಂದ ಬಂದಿದ್ದೆನೆಂಬುದೂ ನೆನಪಿಲ್ಲ. ಈಗ ಹೋಗುತ್ತಿರುವ ಜಾಗವಾದರೂ ಯಾವುದೆಂಬ ಸ್ಪಷ್ಟ ಅರಿವಿಲ್ಲ. ಭಯವಾಗತೊಡಗುತ್ತದೆ. ಭಯವೆನ್ನಿಸಿದಾಗ ನಾವು ಕೂಗುವುದು ಅಮ್ಮ ಎಂದಲ್ಲವೇ? 'ಅಮ್ಮ' ಎಂದುಕೊಂಡೆ. ಜೋರಾಗಿ ಅಮ್ಮನನ್ನು ಕೂಗಲೂ ಹೆದರಿಕೆ! ಅಮ್ಮನ ಇನ್ನೊಂದು ರೂಪವೆಂದು, ರಕ್ಷಕದೇವತೆಯೆಂದು ಹಿರಿಯರು ಹೇಳಿದ್ದರಲ್ಲ ಆ ಗಾಯತ್ರಿಯನ್ನು ನೆನೆದೆ.

ಯಾರೋ ಬಂದಂತಾಯಿತು. ಮುಖ ಸ್ಪಷ್ಟವಿಲ್ಲ ತನ್ನ ತೋಳುಗಳನ್ನು ಚಾಚಿ. ಬರಸೆಳೆದುಕೊಂಡಳು. ಆ ತೋಳುಗಳು ವಜ್ರಕವಚವೆಂಬಂತೆ ನನಗೆ ನಿರ್ಭಯವೆನ್ನಿಸಿತು, ಹಿತವಾಯಿತು. ಅದೇ ಹೊತ್ತಿಗೆ 'ಅಮ್ಮ' 'ಅಮ್ಮ' ಎಂಬ ನೂರಾರು ಧ್ವನಿಗಳು ಕೇಳಿಸಿದವು. ಅಮ್ಮನ ಚಾಚಿದ ತೋಳು ತನ್ನ ತೆಕ್ಕೆಯನ್ನು ವಿಶಾಲಗೊಳಿಸುತ್ತ ಹೋದಳು. ಭಯದಿಂದ ತುಂಬಿದ ಕೊರಳಿಂದ ಕೂಗುತ್ತ ಆಶ್ರಯಕ್ಕಾಗಿ ಬಂದ ಅಸಂಖ್ಯರಿಗೆ ಆ ತೋಳು ನಿರ್ಭಯದಾಣವಾಯಿತು. ಎಚ್ಚರವಾಯಿತು.

ಈ ಕನಸಿಗೆ ಏನಾದರೂ ಅರ್ಥವಿದೆಯೇ ಎಂದು ಎಷ್ಟೋ ಬಾರಿ ಅನ್ನಿಸಿದೆ. ನನ್ನ ಕನಸಿಗೆ ನನ್ನಲ್ಲಿಯೇ ಅಲ್ಲದೆ ಬೇರೆಲ್ಲಾದರೂ ಅರ್ಥವಿರಲು ಸಾಧ್ಯವೇ ಎಂದೂ ಅನ್ನಿಸಿದೆ. ಆದರೆ ಈ ಕನಸು ನನ್ನಲ್ಲಿ ಎಂದೆಂದೂ ಮರವೆಯಾಗದಂತೆ ನೆಲೆಸಿಬಿಟ್ಟಿದೆ. ಈ ಅಮ್ಮನ ಹಾಗೆ ಎಲ್ಲರಿಗೂ ಅಭಯವೀಯುವ ಒಂದು ಬಾಳು ಸಾಧ್ಯವೇ ಎಂದು ಯೋಚಿಸುತ್ತಿದ್ದೆ. ನಮ್ಮಲ್ಲಿ ಒಬ್ಬೊಬ್ಬರಿಗೂ ಒಬ್ಬೊಬ್ಬ ಅಮ್ಮ ಇದ್ದಾಳೆ. ಆದರೆ ಈ ಎಲ್ಲರೂ ಒಬ್ಬಳೇ ಆದರೆ ಹೇಗೆ? ಆದರೆ ಆಗುವುದಾದರೂ ಹೇಗೆ? ಈ ಬಯಕೆ– ಈ ವಾಸ್ತವ ನನ್ನಲ್ಲಿ ಹಲವಾರು ಬಾರಿ ಮಾನಸಿಕ ಅಶಾಂತಿಯನ್ನು ಎಬ್ಬಿಸಿದೆ.

ನನಗೆ ನನ್ನ ಅಮ್ಮನ ನೆನಪೇ ಇಲ್ಲ. ಈಗ ಯಾವುದಾದರೂ ಹೆಣ್ಣು ತನ್ನ ಮಗುವನ್ನು ಮುದ್ದಿಸುತ್ತಿದ್ದರೆ ನನ್ನ ಅಮ್ಮ ನಾನು ಚಿಕ್ಕವನಾಗಿದ್ದಾಗಲೂ ಹೀಗೆ ಮುದ್ದಿಸುತ್ತಿದ್ದಿರಬೇಕಲ್ಲವೇ? ಅಂಥ ಮಧುರ ಕ್ಷಣವೊಂದು ನನ್ನ ಬಾಳಿನಲ್ಲಿ ನೆನಪುಳಿದಿಲ್ಲವಲ್ಲ. ನಾನೆಂಥ ನತದೃಷ್ಟ ಎನ್ನಿಸುವುದು. ಆದರೆ ಅಜ್ಜಿ ನಾಗಕ್ಕ, ಗಂಗೆ–ನೀಲ, ಕೃಷ್ಣೆ–ಮಲಪ್ರಭೆ ಇವರುಗಳನ್ನು ನೆನೆದಾಗ ನನ್ನ ಅಮ್ಮ ನನ್ನಿಂದ ಬೇಗ ದೂರ ಹೋದರೂ ಈ ಎಲ್ಲ ರೂಪಗಳಲ್ಲಿ ನನ್ನನ್ನು ಕಾಪಾಡಲು ಬಂದಂತೆ ಭಾಸವಾಗುತ್ತದೆ. ಅಮ್ಮ ಹೋದಳೆಂದು ಅಳಲುವ ಬದಲು ಇದ್ದವರನ್ನೇ ಅಮ್ಮನೆಂದು ಭಾವಿಸುವುದೇ ಹಾಯಲ್ಲವೇ?

## ೧೯

ಬಸವಣ್ಣನವರು ತಮ್ಮ ಭಂಡಾರಿ ಪದವಿಯನ್ನು ಪ್ರಭುಗಳಿಗೆ ಒಪ್ಪಿಸಿ ಪದತ್ಯಾಗ ಮಾಡಿದ್ದರು. ಹಾಗೆ ಮಾಡಬೇಕಾಗಿಲ್ಲವೆಂದೂ ಅವಸರಪಡಬಾರದೆಂದೂ ಬಿಜ್ಜಳ ಚಕ್ರವರ್ತಿಗಳು ಸೂಚಿಸಿದ್ದರು. ಅಂದಿನ ಘಟನೆಯನಂತರದ ಬೆಳವಣಿಗೆಗಳು ಅವರಲ್ಲಿ ವಿಪರೀತ ಸಂಕ್ಷೋಭೆಯನ್ನುಂಟುಮಾಡಿದ್ದವು. ಒಂದು ರೀತಿಯಲ್ಲಿ ಕೇತಗ–ಚಂದಲೆ ಇವರ ವಿವಾಹಕ್ಕೆ ಒಪ್ಪಿಗೆಯಿತ್ತು ಮುಂದಿನ ಘಟನಾವಳಿಗಳಿಗೆ ತಾವೇ ಕಾರಣಭೂತರಾದೆವೆಂದು ಅವರು ಈಗ ಮನಗಂಡಿದ್ದರು. ಅಂದು ಪ್ರಭುಗಳು ಅದನ್ನೇ ಅಲ್ಲವೇ ಸೂಚಿಸಿದ್ದು? ಅವರ ಮನಸ್ಸಿನಲ್ಲಿ ಬಸವಣ್ಣನವರ ಮೇಲೆ ಆರೋಪ ಹೊರಿಸುವ ಮನೋಭಾವವಿರಲಿಲ್ಲವೆಂದು ಅಂದೇ ಸ್ಪಷ್ಟಪಡಿಸಿದ್ದರೂ, ಕನಿಷ್ಠಪಕ್ಷ ತಾರ್ಕಿಕವಾದ ಮೂಲವನ್ನೇ ಅವರು ಗುರುತಿಸಿದ್ದರು. ಆ ನಂತರದ ಬೆಳವಣಿಗೆಗಳ ಬಗ್ಗೆ ಬಸವಣ್ಣನವರಿಗೆ ತೀವ್ರ ವಿಷಾದವಿತ್ತು; ಆದರೆ ಆ ಮದುವೆ ತಪ್ಪಲ್ಲ, ತಮ್ಮ ಜೀವಮಾನದ ಆದರ್ಶಾನುಷ್ಠಾನದ ಫಲ ಎಂದೇ ತಿಳಿದಿದ್ದರು. ಆದರ್ಶ ತೀರ ಎತ್ತರದ ವ್ಯಕ್ತಿಗಳಲ್ಲಿಯೂ, ತೀರ ಸಾಮಾನ್ಯರಲ್ಲಿಯೂ ಜೀವಂತವಾಗಿರುತ್ತದೆ. ಮೇಲುಸ್ತರದ ಆದರ್ಶ ಜೀವಿಗಳು ತಾರ್ಕಿಕವಾಗಿಯೂ ಭಾವುಕವಾಗಿಯೂ ತಮ್ಮ ಆದರ್ಶ– ಕಾಣ್ಕೆಗಳು ಶ್ರೇಷ್ಠವೆಂದು ಭಾವಿಸಿ ಅದಕ್ಕೆ ಬದ್ಧರಾಗಿರುತ್ತಾರೆ. ತೀರ ಸಾಮಾನ್ಯ ಅನುಯಾಯಿಗಳು ವೈಚಾರಿಕ ವಿಶ್ಲೇಷಣೆಯ ಹೊಣೆಯನ್ನು ತಮ್ಮ ಆರಾಧ್ಯ ವ್ಯಕ್ತಿಗಳಿಗೆ ಬಿಟ್ಟು, ಅವರ ಮಾರ್ಗದಲ್ಲಿ ಅನನ್ಯ ಶ್ರದ್ಧೆ–ಪ್ರಾಮಾಣಿಕತೆಗಳನ್ನಿಟ್ಟಿರುತ್ತಾರೆ. ಆದರೆ ಈ ಮಧ್ಯೆ ಇರುವವರದೇ ತೊಂದರೆ. ಆದರ್ಶವು ಕೆಲವು ವೇಳೆ ಅವರನ್ನು ಆಕರ್ಷಿಸಿದರೂ, ಅದೇ ಮುಂದೆ ಒಂದು ಕಾಲಕ್ಕೆ ಸಂಪ್ರದಾಯವಾಗಿಬಿಡುತ್ತದೆ; ಅಥವಾ ವ್ಯಕ್ತಿವಿಶಿಷ್ಟ ಆಲೋಚನಾಕ್ರಮದಿಂದಾಗಿ ಮುಖಂಡರು ಹೇಳುವುದರಲ್ಲಿ ಲೋಪ ಕಾಣಿಸುತ್ತದೆ. ಅವರಲ್ಲಿ ಕೆಲವರಿಗೆ ಹೊಸದಾದ ಅಲೆಯೊಂದು ಬಂದಾಗ ಅದರೊಡನೆ ಮೇಲೇರುವ ಪ್ರಕ್ರಿಯೆಯೇ ರೋಮಾಂಚಕಾರಿಯಾಗಿರುತ್ತದೆ; ಅದಕ್ಕಾಗಿಯೇ ಉಬ್ಬರದಲ್ಲಿ ಅವರು ಸೇರುವುದು. ಈಗ ಆಗಿದ್ದೂ ಅದೇ; ಬಸವಾದಿಗಳಿಗೆ ಈ ಮದುವೆ ತಮ್ಮ ಸಮಾನತೆಯನ್ನು ವಾಸ್ತವ ನೆಲೆಯಲ್ಲಿ ಸ್ಥಾಪಿಸುವ, ಅದಕ್ಕೆ ಸಮಾಜದ ಒಪ್ಪಿಗೆಯನ್ನು ದೊರಕಿಸಿಕೊಡುವ ಸಾಂಕೇತಿಕ ಕ್ರಿಯೆ. ಅಳ್ಳಯ್ಯ–ಮಧುವಯ್ಯರಂತಹವರಿಗೆ ದೊಡ್ಡ ಕಾರ್ಯದಲ್ಲಿ ತಮ್ಮ ಕಿಂಚಿತ್ ಪಾತ್ರವನ್ನು ವಹಿಸಿ ಧನ್ಯರಾಗುವ ಹಂಬಲ. ಆದರೆ ಈ ಎರಡೂ ಪಾತ್ರಗಳ

ನಡುವೆ ಅಲೆಗಳ ಮೇಲೇರಿ ಹೋಗುವ ಮಧ್ಯಮ ಜನ ಗಾಳಿ ಬಂದಾಗ ತಮ್ಮ ಚಲನೆಯ ಸ್ವರೂಪವನ್ನು ಅದಕ್ಕನುಗುಣವಾಗಿ ಬದಲಾಯಿಸುವವರು. ಅದಕ್ಕೇ ಇಂತಹ ಎಲ್ಲ ಕ್ರಾಂತಿಕಾರಕ ಚಳುವಳಿಗಳು ದುರಂತದಲ್ಲಿ ಕೊನೆಗೊಳ್ಳುವುದೇನೋ?

ಬಸವಣ್ಣನವರಿಗೆ ತಾವು ಮುಖ್ಯ ಅಧಿಕಾರದಲ್ಲಿದ್ದುಕೊಂಡೂ ಮುಗ್ಧರಿಗೆ ಆಗುತ್ತಿರುವ ನೋವನ್ನು ತಪ್ಪಿಸಲು ಮಾತ್ರವಲ್ಲ, ಕಡಿಮೆ ಮಾಡಲೂ ತಮಗೆ ಸಾಧ್ಯವಾಗುತ್ತಿಲ್ಲವಲ್ಲ ಎಂಬ ಕೊರಗು. ತಮ್ಮ ಅನುಯಾಯಿಗಳು, ತಮ್ಮ ಕನಸನ್ನು ಧರೆಗಿಳಿಸಲು ಪ್ರಾಮಾಣಿಕವಾಗಿ ಜೊತೆಗೂಡಿದವರು, ಬಲಿಯಾಗುತ್ತಿರುವಾಗ ತಾವು ಹಿರಿ ಹುದ್ದೆಯ ಗರಿಮೆಯಲ್ಲಿರುವುದೇ? ಹೇಸಿಕೆಯೆನಿಸಿತು. ಒಂದು ಕಾಲಕ್ಕೆ ತಮ್ಮ ಚಟುವಟಿಕೆಗಳಿಗೆ ತಮ್ಮ ಕಾರ್ಯಸ್ಥಾನ ಸಹಾಯಕವಾಗಿತ್ತೆಂಬುದು ನಿಜ; ಆದರೀಗ ಅದು ಕುಳಿತರೆ ಚುಚ್ಚುವ ಮುಳ್ಳಾಗಿದೆಯೆನಿಸಿತು. ಕೊನೆಗೊಮ್ಮೆ ನಿರ್ಧಾರಕ್ಕೆ ಬಂದರು; ಪ್ರಭುಗಳ ದರ್ಶನವನ್ನು ಪಡೆದು ತಮ್ಮ ಪದತ್ಯಾಗದ ನಿರ್ಧಾರವನ್ನು ಅರಿಕೆಮಾಡಿಕೊಂಡರು. ಬಿಜ್ಜಳ ಚಕ್ರವರ್ತಿಗಳು ಉಪಚಾರಕ್ಕೆಂಬಂತೆ ಒಂದೆರಡು ಮಾತುಗಳನ್ನಾಡಿದರೂ, ಕೊನೆಗೆ "ನಿಮ್ಮಿಷ್ಟ"ವೆಂದರು.

ಆಯಿತು. ಪದತ್ಯಾಗದಿಂದ ನೈತಿಕ ಜವಾಬ್ದಾರಿಯೊಂದನ್ನು ನಿರ್ವಹಿಸಿದ ಧನ್ಯತೆ ಒಂದು ಕ್ಷಣ ಬಸವಣ್ಣನವರ ಮನಸ್ಸನ್ನು ತುಂಬಿತ್ತು; ಆದರೆ ಕಣ್ಣೆದುರಿಗಿನ ದೃಶ್ಯದಲ್ಲಿ ಸಾವು–ನೋವುಗಳೇ ತುಂಬಿರುವ ಕಠಿಣ ವಾಸ್ತವವು ಅವರ ಕಣ್ಣುಗಳನ್ನು ಮಂಜಾಗಿಸಿತು. ಕಲ್ಯಾಣದಲ್ಲಿ ಗಲಭೆಗಳು ಹಲ್ಲೆ–ಹೊಡೆದಾಟಗಳು ಕೊಲೆ–ಅನಾಚಾರಗಳು ನಿಲ್ಲದೆ ಸರಪಳಿಕ್ರಿಯೆಯಾಗಿ ಮುಂದುವರಿದೇ ಇತ್ತು.

ಬಸವಣ್ಣನವರ ಪದತ್ಯಾಗದ ವಿಷಯ ಜನಗಳಿಗೆ ನಿಧಾನವಾಗಿ ತಿಳಿಯತೊಡಗಿತು. ಪ್ರಕ್ಷುಬ್ಧ ಸನ್ನಿವೇಶದಲ್ಲಿ ಕುಂಟು ವದಂತಿಗೆ ರೆಕ್ಕೆ ಪುಕ್ಕಗಳು ಬಲಿತುಬಿಡುತ್ತವೆ; ಗಾಳಿಗೆ ಮಾತು ಬಂದುಬಿಡುತ್ತವೆ. ಅವರ ಪದತ್ಯಾಗ ಪದಚ್ಯುತಿ ಎಂದೇ ಜನಜನಿತವಾಯಿತು. ದಣ್ಣಾಯಕರನ್ನು ಕರೆಸಿ ಪ್ರಭುಗಳು ಅವರಿಂದ ಭಂಡಾರಿ ಪದವಿಯನ್ನು ಕಸಿದುಕೊಂಡರೆಂಬ ವಾರ್ತೆ ಹರಡಿತು. ಹಾಗೆಯೇ ಬಸವಣ್ಣನವರು ಪ್ರಭುಗಳ ಮುಂದೆ ಹಾರಾಡಿ, ತಮ್ಮ ಅನುಯಾಯಿಗಳೊಡನೆ ಪ್ರಭುಗಳ ಆಡಳಿತವನ್ನು ಕೊನೆಗೊಳಿಸುವುದಾಗಿ ಸಂಗನ ಮೇಲೆ ಆಣೆಯಿಟ್ಟು ಶಪಥ ಮಾಡಿದರೆಂದೂ; ಅಪಾರ ತಾಳ್ಮೆಯಿಂದ ಪ್ರಭುಗಳು ಈ ಭರ್ತ್ಸನೆಯನ್ನು ಸಹಿಸಿಕೊಂಡರೆಂದೂ ವದಂತಿ ಹಬ್ಬಿತು. ಬರಬರುತ್ತ ಈ ವದಂತಿಗಳು ಬಾಯಿಂದ ಕಿವಿಗೆ ಸಾಗಿದಂತೆಲ್ಲ ಹೊಸರೂಪವನ್ನು ತಳೆಯುತ್ತಿದ್ದವು. ಕಲ್ಯಾಣದ ಸೂರ್ಯಾಸ್ತಾನಂತರದ ಸಾರ್ವಜನಿಕ ಚಟುವಟಿಕೆಗಳು ಸ್ಥಗಿತಗೊಂಡವು. ಆಗೆಲ್ಲ ರಾಜಭಟರೇ ಬೀದಿಗಳಲ್ಲಿ ಗಸ್ತು ತಿರುಗುತ್ತಿದ್ದರು. ಬಿಚ್ಚುಗತ್ತಿಯ ಕುದುರೆ ಸವಾರರು ಎಲ್ಲೆಡೆ ಉಸ್ತುವಾರಿಗಾಗಿ ಸಂಚರಿಸುತ್ತಿದ್ದರು. ಹಗಲು ಇಷ್ಟು ತೀವ್ರವಾಗದಿದ್ದರೂ ಜನರು ಬೀದಿಗೆ ಬರುವುದಕ್ಕೇ ಹೆದರುತ್ತಿದ್ದರು. ಒಂದಡೆ ಏನಾಗುವುದೋ ಎಂಬ ಹೆದರಿಕೆ; ಇನ್ನೊಂದೆಡೆ ಬೇಹುಗಾರರು ಏನು ಆರೋಪ ಹೊರಿಸಿ ತಮ್ಮನ್ನು ಸೆರೆಗೆ ಎಲ್ಲಿ

ಮಾಡುತ್ತಾರೋ ಎಂಬ ಭಯ. ಜನರು ಪಿಸುಗುಟ್ಟಿಕೊಳ್ಳುತ್ತಿದ್ದರೆ ಮಾರುವೇಷದ ಬೇಹುಗಾರರು ಅಂಥವರಲ್ಲಿ ಕೆಲವರನ್ನು ಸೆರೆಹಿಡಿದಿದ್ದುದೂ ನಿಜ. ಜನರು ಮಾತಾಡಿಕೊಳ್ಳುವಲ್ಲಿ ತಾವೂ ಸಾಮಾನ್ಯರಂತೆ ವೇಷ ಧರಿಸಿದ ಬೇಹುಗಾರರು ಹೋಗಿ ಅವರೊಡನೆ ಮಾತಿನಲ್ಲಿ ಪಾಲುಗೊಳ್ಳುವ ನೆವದಿಂದ ಅವರ ಮನಸ್ಸಿನಲ್ಲಿರುವುದನ್ನು ತಿಳಿದುಕೊಂಡು ತಕ್ಷಣ ಅಲ್ಲಿಯೇ ಸುಳಿಯುತ್ತಿದ್ದ ಭಟರಿಗೆ ಒಪ್ಪಿಸುತ್ತಿದ್ದರು. ಹೀಗಾಗಿ ಜನರು ಅನಿವಾರ್ಯವಾಗಿ ಹೊರಕ್ಕೆ ಬಂದರೂ ಮಾತನ್ನು ನಿಲ್ಲಿಸಿದರು. ವಾಚಾಳಿಯಾಗಿದ್ದ ಕಲ್ಯಾಣಪಟ್ಟಣ ಮೂಕವಾಯಿತು; ಹಾರಾಡುತ್ತಿದ್ದ ರಾಜಧಾನಿ ಕುಂಟುಗಾಲು ಪಡೆಯಿತು.

ಬಸವಣ್ಣನವರು ಪದತ್ಯಾಗ ಮಾಡಿದರೆಂಬ ಅಥವಾ ಅವರನ್ನು ಪದಚ್ಯುತಗೊಳಿಸಿದರೆಂಬ ವಾರ್ತೆಯನ್ನು ಕೇಳಿದ ಜನ ಅವರನ್ನು ಕಾಣಲು ಮಹಮನೆಗೆ ಬರಲು ತೊಡಗಿದರು; ಮೊದಲು ಕೆಲವರು ಬಂದರೆ ಅವರಿಗೆ ಸಮಾಧಾನ ಹೇಳಿ ಕಳಿಸುವುದು ಸಾಧ್ಯವಾಯಿತು. ಆದರೆ ಬರಬರುತ್ತ ಸಂದರ್ಶಕರ ಪ್ರವಾಹವೇ ಇತ್ತ ಬರಲಾರಂಭಿಸಿತು. ಈಗ ಅವರು ಭಂಡಾರಿಯ ಪದವಿಯಲ್ಲಿಯೂ ಇರಲಿಲ್ಲವಲ್ಲ. ಹೀಗಾಗಿ ಮೊದಲಿನಂತೆ ಅವರ ಮನೆಯ ಬಳಿ ಹೋಗಲು ಜನರಿಗೆ ರಾಜಭಟರು ಸಲೀಸಾಗಿ ಅನುಮತಿ ನೀಡುತ್ತಿರಲಿಲ್ಲ. ಬರಬರುತ್ತ ಅಲ್ಲಿಗೆ ಬರಲು ಇಚ್ಛಿಸುವ ಜನರನ್ನು ಬೀದಿಗಾವಲಿನ ಭಟರು ದೂರವೇ ತಡೆದುಬಿಡುತ್ತಿದ್ದರು. ತೀರ ಪರಿಚಿತರಾದ, ಆಪ್ತರಾದ, ಹೆಸರುವಾಸಿಯಾದ ಸಂದರ್ಶಕರಿಗೆ ಮಾತ್ರ ಅವಕಾಶವೀಯುತ್ತಿದ್ದರು. ಹೀಗಾಗಿ ಮಹಮನೆಯ ಬೀದಿಯಲ್ಲಿ ಜನಸಂಚಾರವೇ ಇರುತ್ತಿರಲಿಲ್ಲ. ಇನ್ನು, ಸದಾ ಶರಣರಿಂದ ಗಿಜಿಗುಟ್ಟುತ್ತಿದ್ದ ಮಹಮನೆ ಬಿಕೋ ಎನ್ನತೊಡಗಿತ್ತು. ಕೇತಗ, ಅಳ್ಳಯ್ಯ-ಮಧುವಯ್ಯಗಳನ್ನು ಗಡ್ಡುಂಬಳ್ಳಿಗೇ ಕಳಿಸಬೇಕೆಂದೂ, ಅವರ ರಕ್ಷಣೆಗೆ ಪ್ರಭುತ್ವವೇ ವ್ಯವಸ್ಥೆ ಮಾಡುವುದೆಂದೂ ಮುಖ್ಯ ಬೇಹುಗಾರರು ಆದೇಶ ಕಳಿಸಿದ್ದರಿಂದ ಹಾಗೇ ಮಾಡಲಾಗಿತ್ತು. ದಾಸೋಹದ ಧನ್ಯತೆಯು ಆವರಿಸಿದ್ದ ಮನೆಯ ಆವರಣ ಕಾತರದಿಂದ ಆವೃತ್ತವಾಗಿತ್ತು. ಮಹಮನೆಯೆಂದರೆ ಮನೆಯವರು, ಅಪ್ಪಣ್ಣ, ಬಿತ್ತಣ್ಣ ಮತ್ತೆ ಕೆಲವರು ಸೇವಕರು, ಅಷ್ಟೆ. ಮನೆಯಲ್ಲಿರುವವರ ಮುಖಗಳ ಮೇಲೂ ಉತ್ಸಾಹವೆಂಬುದು ಇರಲಿಲ್ಲ. ಯಾಂತ್ರಿಕವಾದ ದೈನಂದಿನ ಕಾರ್ಯಗಳು ಜರುಗುತ್ತಿದ್ದರೂ, ಅದರಲ್ಲಿಯೂ ಚುರುಕುತನವಿರಲಿಲ್ಲ. ತಗ್ಗಿದ ದನಿ, ಕುಗ್ಗಿದ ದೇಹ.

ಮುಂದೇನೋ ಎಂಬ ಆತಂಕವೇ ತುಂಬಿದ್ದಾಗ ಹೊರಗೆ ಏನಾಗುತ್ತಿದೆಯೆಂಬುದನ್ನು ತಿಳಿಯಲು ಆಗುವಂತಿರಲಿಲ್ಲ, ಮೊದಲಾದರೆ ಜನರು ಬರುತ್ತಿದ್ದರು; ಊರಿನ ಸುದ್ದಿ, ಸ್ಥಳಗಳ ಸುದ್ದಿ ಹೇಳುತ್ತಿದ್ದರು. ಏನಾಯಿತೆಂಬುದನ್ನು ವಿವರಿಸುವುದರೊಡನೆ ಏನಾಗಬೇಕು ಅಥವಾ ಏನಾಗಲಿದೆ ಎಂಬ ಬಗ್ಗೆಯೂ ಮಾತಾಗುತ್ತಿತ್ತು. ಈಗ ಹೊರಪ್ರಪಂಚದಿಂದ ಸಂಪರ್ಕವನ್ನೇ ಕಳೆದುಕೊಂಡಂತೆ. ನಾಗಕ್ಕ ಮೊದಲಿನಿಂದ ಮೌನಿ, ಸದಾ ಕೆಲಸದಲ್ಲಿ ತೊಡಗಿರುವವರು. ಗಂಗೆ

ತಾನಾಯಿತು, ತಮ್ಮ ಪಾಡಾಯಿತು ಎಂಬಂತೆಯೇ ಇದ್ದವರು. ನೀಲ ಈಚೆಗೆ ಅಂತರ್ಮುಖಿಯೇ ಆಗಿಬಿಟ್ಟದ್ದಾರೆ. ಚೆನ್ನಬಸವಣ್ಣನವರು ಎಂದಿಗಿಂತ ಈಗ ಹೆಚ್ಚು ಕಾಲ ಧ್ಯಾನದಲ್ಲಿ ತೊಡಗಿರುತ್ತಾರೆ. ಚಿಕ್ಕಂದಿನಿಂದಲೂ ಶಿಸ್ತುಬದ್ಧರಾದ ಅವರು ಈಗ ನಿಷ್ಠುರ ವ್ರತಧಾರಿಗಳಾಗಿಬಿಟ್ಟರೇನೋ ಎನ್ನಿಸುವಂತಿದ್ದರು. ಅವರೆಲ್ಲರ ಮನಸ್ಸುಗಳಲ್ಲಿ ಏನು ನಡೆಯುತ್ತಿದೆಯೆಂಬುದು ಅವರವರನ್ನು ಹೊರತು ಇತರರಾರಿಗೂ ತಿಳಿಯದು. ಮನೆಯ ಒಳಗಡೆಯೂ ಒಂದೇ ಕುಟುಂಬದ ವ್ಯಕ್ತಿಗಳ ನಡುವೆಯೂ ಸಂವಹನವಿಲ್ಲದೆ ಒಬ್ಬೊಬ್ಬರೂ ಒಂದೊಂದು ನಡುಗಡೆಗಳಾಗಿಬಿಟ್ಟದ್ದರು. ಇದ್ದಕ್ಕಿದ್ದಂತೆ ಜೀವನ ಲಕ್ಷವರ್ಷದಷ್ಟು ಹಿಂದೆ ಸರಿದುಬಿಟ್ಟ ಹಾಗೆ.

ಇಂಥ ಒಂದು ಸಂಜೆ ಅಪ್ಪಣ್ಣ–ಉತ್ತಣ್ಣಗಳು ತರಾತುರಿಯಿಂದ ಅಣ್ಣನವರ ಕೋಣೆಗೆ ಬಂದರು. "ತಮ್ಮಲ್ಲೊಂದು ಅರಿಕೆ" ಎಂದರು. ಪಲ್ಲಂಗದ ಮೇಲೆ ಅನ್ಯಮನಸ್ಕರಾಗಿ ಒರಗಿದ್ದ ಬಸವಣ್ಣನವರು "ಏನು ಸಮಾಚಾರ?" ಎಂದರು ಕ್ಷೀಣದನಿಯಿಂದ. "ತಾಯಿಗಳನ್ನು ಕರೆತನ್ನಿ" ಎಂದು ಅಪ್ಪಣ್ಣ ಉತ್ತಣ್ಣನಿಗೆ ತಿಳಿಸಿದ. ಅಪ್ಪಣ್ಣ ಹೀಗೇಕೆ ಮಾಡುತ್ತಿದ್ದಾರೆಂದು ಅಣ್ಣನವರಿಗೆ ತಿಳಿಯುವಂತಿರಲಿಲ್ಲ. ಕ್ಷಣದಲ್ಲಿ ನಾಗಕ್ಕ–ಗಂಗೆ–ನೀಲರು ಅಲ್ಲಿಗೆ ಬಂದರು. ಚೆನ್ನಬಸವಣ್ಣನವರು ಎಲ್ಲಿಗೋ ಹೋಗಿದ್ದರಂತೆ. ಅಣ್ಣನವರ ಪಾದಮೂಲದಲ್ಲಿ ನೆಲದ ಮೇಲೆ ಕುಳಿತಿದ್ದ ಅಪ್ಪಣ್ಣ ಮಾತಿಗೆ ಮೊದಲು ಮಾಡಿದ; ಅವನ ನುಡಿಯಲ್ಲಿ ನಡುಕವಿತ್ತು, "ಅಣ್ಣನವರು ದೊಡ್ಡ ಮನಸ್ಸು ಮಾಡಬೇಕು, ನಮ್ಮ ಮಾತು ಕೇಳಬೇಕು" ಎಂದ. ಕೈಜೋಡಿಸಿ ದೂರ ನಿಂತಿದ್ದ ಉತ್ತಣ್ಣನ ಕಣ್ಣಂಚಿನಲ್ಲಿ ಆಗಲೇ ನೀರು ಹನಿಗಟ್ಟಿತ್ತು. ಅವರೇನು ಮಾತಾಡುತ್ತಿರುವರೆಂದು ಹೇಗೆ ತಿಳಿಯಬೇಕು. ಅಣ್ಣನವರು ಅಪ್ಪಣ್ಣನ ಭುಜದ ಮೇಲೆ ಕೈಹಾಕಿ "ಅದೇನು ಅಪ್ಪಣ್ಣ, ಹೇಳು ನಿನಗಿಂತ ಯಾರು ಆಪ್ತರಿದ್ದಾರೆ!" ಎಂದರು.

ಅವನು ಅರಿಕೆಮಾಡಿಕೊಂಡಿದ್ದಿಷ್ಟೆ : ಕಲ್ಯಾಣವೆಲ್ಲ ಈಗ ರಣರಂಗವಾಗಿಬಿಟ್ಟದೆ. ವದಂತಿಗಳು ಯದ್ವಾತದ್ವಾ ಹಬ್ಬುತ್ತಿವೆ. ಬಸವಣ್ಣನವರು ಬಿಜ್ಜಳ ಪ್ರಭುಗಳ ಕೊಲೆಗೆ ಸಂಚು ನಡೆಸುತ್ತಿದ್ದಾರೆಂದು, ಬಸವಣ್ಣನವರನ್ನು ಸೆರೆಗೊಳಿಸಲಾಗುವುದೆಂಬ ಮಾತುಗಳೇ ಎಲ್ಲರ ಬಾಯಲ್ಲಿಯೂ. ಅಣ್ಣನವರು ಭಂಡಾರಿ ಪದವಿಯನ್ನು ಒಪ್ಪಿಸಿಕೊಟ್ಟ ದಿನದಿಂದ ಪ್ರಭುತ್ವದೊಡನೆ ಸಂಪರ್ಕವಿಲ್ಲ, ರಾಜಭಟರು ಸಂದರ್ಶಕರನ್ನು ಮಹಮನೆಗೆ ಬಿಡುತ್ತಿಲ್ಲ, ನೋಡಿದರೆ ಭಟರುಗಳು ಇಲ್ಲಿನ ಜನರನ್ನು ಅನುಮಾನದಿಂದ ಕಾಣುತ್ತಿರಬಹುದು. ಮೊದಲಾಗಿದ್ದರೆ ದಣ್ಣಾಯಕರು ಪ್ರಭುತ್ವದ ಭಾಗ; ಈಗ ಬರಿ ವ್ಯಕ್ತಿ. ರಾಜಭಟರಿಗೆ ಮೇಲಿನವರಿಂದ ಏನು ಸೂಚನೆಯಿದೆಯೋ. ಪ್ರಭುಗಳನ್ನು ಕಂಡು ತಮ್ಮ ಮನಸ್ಸಿನಲ್ಲಿ ದುಷ್ಟಯೋಜನೆಯಿಲ್ಲ ಎಂದು ಅರಿಕೆಮಾಡಿಕೊಳ್ಳಬಾರದಿತ್ತೆ? ಇಲ್ಲದಿರುವಾಗ ಇಲ್ಲ ಎಂದು ಹೇಳಬೇಕೆ? ಇಲ್ಲ ಎಂದರೆ ಅನುಮಾನಪಡದಿರುವವರ ಮನಸ್ಸಿನಲ್ಲೂ ಅನುಮಾನ ಸುಳಿಯುವುದಲ್ಲವೇ. ಹಾಗಾಗಿ ಮಾರನೆಯ ಕ್ರಮ ಏನಾದೀತೋ ಎಂಬ

ಪರಿಸ್ಥಿತಿಯಿದೆ. ಅಪ್ಪಣ್ಣ–ಉತ್ತಣ್ಣಗಳು ನಗರದಲ್ಲಿ ಸುತ್ತಾಡಿ ಸಂಗ್ರಹಿಸಿಕೊಂಡು ಬಂದ ಮಾಹಿತಿಯಿಂದ ಮಾರನೆಯ ದಿನದಿಂದ ಪಟ್ಟಣದಲ್ಲೆಲ್ಲ ಮತ್ತಷ್ಟು ಬಿಗಿಕಾವಲಿನ ವ್ಯವಸ್ಥೆಯಾಗುವುದಂತೆ. ಕಲ್ಯಾಣದಲ್ಲಿ ಜನ ದಂಗೆ ಏಳುವರೇನೋ ಎಂಬ ಸಂಶಯ ಆಡಳಿತಗಾರರಲ್ಲಿ ಮೂಡಿದಂತಿದೆ. ಹಾಗಾಗಿ ಅದು ಏಳುವ ಮೊದಲೇ ಹುಟ್ಟಡಗಿಸಬೇಕೆಂಬ ಸಂಕಲ್ಪದಿಂದ ಸೇನೆಯ ತುಕಡಿಗಳನ್ನು ರಾಜಧಾನಿಗೆ ಬರಮಾಡಿಕೊಳ್ಳುವ ವ್ಯವಸ್ಥೆಯಾಗಿದೆಯಂತೆ. ಮುಖ್ಯ ಶರಣರನ್ನು ಸೆರೆಮನೆಗೆ ಹಾಕುವ ಯೋಚನೆಯೂ ಇದೆಯಂತೆ. ಈ ಮಧ್ಯೆ ರಾಜಬೆಂಬಲಿಗರು ಬಸವಣ್ಣನವರ ಕೊಲೆಗೈಯಲು ಸನ್ನಾಹ ನಡೆಸುತ್ತಿರಬಹುದು.

ಈ ವಿವರಣೆ ಕೇಳುತ್ತಿರುವಾಗ ಅಣ್ಣನವರ ಮುಖದ ಮೇಲಿನ ಶಾಂತತೆಯೇನೂ ಕಡಿಮೆಯಾಗಲಿಲ್ಲ. ಅವರ ಮನಸ್ಸಿನಲ್ಲಿ ಕಲ್ಯಾಣದ ಬೆಳೆವಣಿಗೆಗಳ ಬಗ್ಗೆ ವಿಪ್ಲವ ನಡೆದಿತ್ತಾದರೂ ಅದು ವೈಯಕ್ತಿಕ ಭಯದಿಂದ ಆದುದಲ್ಲ. ಹಾಗಾಗಿ ತಮ್ಮ ಕೊಲೆಯ ಪ್ರಸ್ತಾಪ ಬಂದಾಗ ಮೃದು ಮಂದಹಾಸ ಅವರ ಮುಖದ ಮೇಲೆ ಮೂಡಿತು. ನಾಳೆ ಬಪ್ಪುದು ನಮಗಿಂದೇ ಬರಲಿ, ಇಂದು ಬಪ್ಪುದು ನಮಗೀಗಲೇ ಬರಲಿ ಎಂಬ ಮನೋಭಾವದವರಲ್ಲವೇ ಅಣ್ಣನವರು ಎಂಬ ವಿಷಯ ಅಪ್ಪಣ್ಣನಿಗೆ ತಿಳಿಯದ್ದೇನಲ್ಲ. ಆದರೆ ಬಸವಣ್ಣನವರೆಂದರೆ ಒಬ್ಬ ವ್ಯಕ್ತಿಯಲ್ಲ; ಒಬ್ಬ ಯುಗಪುರುಷ. ಅವರ ಕ್ಷೇಮವೆಂದರೆ ಲೋಕದ ಭಾಗ್ಯ. ಅಪ್ಪಣ್ಣ ಎಲ್ಲವನ್ನೂ ಯೋಚಿಸಿಕೊಂಡೇ ಬಂದಂತಿತ್ತು. ಎಲ್ಲವನ್ನೂ ತಾವಿಬ್ಬರೂ ವ್ಯವಸ್ಥೆ ಮಾಡುತ್ತೇವೆ : ರಾತ್ರಿ ಎರಡು ಯಾಮ ಕಳೆದ ನಂತರ ಪಾರಾಗಿ ಇಲ್ಲಿಂದ ಹೋಗುವುದೊಂದೇ ಉಳಿದ ದಾರಿ. ಎಲ್ಲರೂ ಒಟ್ಟಿಗೇ ಒಮ್ಮೆಗೇ ಒಂದೇ ದಾರಿಯಲ್ಲಿ ಹೋಗುವುದು ಅಪಾಯಕರ. ಹೀಗಾಗಿ ನಾಗಕ್ಕ–ಚೆನ್ನಬಸವಣ್ಣ ಒಂದು ದಾರಿ; ಬಸವಣ್ಣನವರು ಗಂಗಕ್ಕ–ನೀಲಕ್ಕರು ಮತ್ತೊಂದು ದಾರಿ. ಮುಂದೆ ಪರಿಸ್ಥಿತಿ ಬದಲಾದಾಗ ಯಾರು ಎಲ್ಲಿ ಎಂಬುದು ತಿಳಿದೀತು. ಮತ್ತೆ ಕಲ್ಯಾಣಕ್ಕೂ ಬರಲು ಸಾಧ್ಯವಾಗಬಹುದು. ಎರಡು ಡೋಲಿಗಳ ವ್ಯವಸ್ಥೆ; ಒಂದರ ಹಿಂದೆ ಅಪ್ಪಣ್ಣ, ಮತ್ತೊಂದರ ಜೊತೆ ಉತ್ತಣ್ಣ.

"ಅಪ್ಪಣ್ಣ ಇನ್ನೆಲ್ಲ ಮುಗಿದಂತಾಯಿತು. ಕೊನೆ ಎಲ್ಲಾದರೇನು, ಇಲ್ಲಿಯೇ ಆಗಲಿ ಬಿಡಿ" ಎಂದರು ನೀಲಕ್ಕ. ಅವರು ಮಾತಾಡಿ ಎಷ್ಟೋ ಕಾಲವಾಗಿತ್ತು. ಅಪ್ಪಣ್ಣನ ಮಾತು, ಪಾರಾಗುವ ಯೋಜನೆ ಈ ಎಲ್ಲ ವಿವರಗಳನ್ನು ಕೇಳುತ್ತಿರುವವರಲ್ಲಿ ಏನು ಆಲೋಚನೆಗಳು ಸುಳಿಯುತ್ತಿದ್ದವೋ ತಿಳಿಯಲು ಅಸಾಧ್ಯ. ಆದರೆ ಮಾತಿಗೆ ಅನುಗುಣವಾಗಿ ಮುಖಭಾವ ವ್ಯತ್ಯಾಸಗೊಳ್ಳುತ್ತಿತ್ತು. ಅಪಾಯವೆಂದಾಗ, ತಮ್ಮ ಸ್ವಂತಕ್ಕಿಂತ ಹೆಚ್ಚಾಗಿ ಇತರರ ಕ್ಷೇಮಕ್ಕೆ ಹಾತೊರೆಯುವವರೇ ಅಲ್ಲಿದ್ದ ಎಲ್ಲರೂ. ಎಲ್ಲೋ ಒಂದು ಮೂಲೆಯಲ್ಲಿ ಸ್ವಂತ ಯೋಗಕ್ಷೇಮದ, ಬದುಕಿನ ಬಗ್ಗೆ ಕಳವಳವಿದ್ದರೂ ಏನು, ಅದು ಸಹಜವಲ್ಲವೇ? ಜೀವವೆಂದರೆ ಬದುಕಲು ಎಂಥ ಪರಿಸ್ಥಿತಿಯಲ್ಲಿಯೂ ತುಡಿಯುವುದು ಸಹಜವಲ್ಲವೇ?

ಯಾರಿಗೂ ಏನೂ ಹೇಳಲು ತೋಚದು. ಇಲ್ಲೇ ಇದ್ದುಬಿಡೋಣ, ಬಂದದ್ದು ಬರಲಿ ಎಂದು ಹೇಳುವುದಕ್ಕೂ ಆಗದಷ್ಟು ಜಡತೆ ಆವರಿಸಿಬಿಟ್ಟಂತಿದೆ ಎಲ್ಲರನ್ನೂ. ಅಣ್ಣನವರು ಏನೆಂದಾರೋ ಎಂಬ ನಿರೀಕ್ಷೆ. ನೀಲಕ್ಕ ಮಾತನಾಡಿದಾಗ ಎಲ್ಲರೂ ಚಕಿತಗೊಂಡರು. ಅವರಾರೂ ಮಾತನಾಡದೆ ಅಣ್ಣನವರ ಕಡೆ ನೋಡತೊಡಗಿದರು. ಅವರು ತಾನೇ ನಿರ್ಧಾರಕ ನುಡಿಗಳನ್ನು ಆಡಬೇಕಾದವರು?

"ಅಪ್ಪಣ್ಣ ಜೀವಕ್ಕಿಂತ ಮುಖ್ಯವಾದದ್ದು ಪರಿಸ್ಥಿತಿ. ನಾವು ಇರದಿದ್ದರೆ ಕಲ್ಯಾಣದಲ್ಲಿ ಮತ್ತೆ ಶಾಂತಿ ಬೇಗ ಮರಳಬಹುದೋ ಏನೋ ಎನ್ನಿಸುತ್ತದೆ. ನೀನು ಹೇಳಿದಂತೆಯೇ ಆಗಲಿ" ಎಂದರು. ಇಷ್ಟು ಸುಲಭವಾಗಿ ಒಪ್ಪಿಗೆ ನೀಡಲಾರರೆಂದುಕೊಂಡಿದ್ದ ಅಪ್ಪಣ್ಣನಿಗೆ ಒಂದು ರೀತಿಯ ಸಮಾಧಾನದ ಆಘಾತವೇ ಆಗಿತ್ತು. ಆದರೆ ಬಸವಣ್ಣನವರು ಈ ತೀರ್ಮಾನಕ್ಕೆ ಬರುವ ಮುಂಚೆ ಅವರ ಮನಸ್ಸಿನಲ್ಲಿ ಭಾವನೆ–ಆಲೋಚನೆಗಳ ಭೋರ್ಗರೆವ ಪ್ರವಾಹವೇ ಉಕ್ಕಿತ್ತು. ಎಲ್ಲ ಕೈಮೀರಿ ಹೋಗಿ ಆಗಿದೆ. ಇನ್ನು ನಡೆಸಬೇಕಾದದ್ದು ತಮಗೇನೂ ಉಳಿದಿಲ್ಲ; ಬಾಕಿಯಿರುವುದು ಆಗುವುದನ್ನು ತಡೆಯುವುದು. ಹಾಗೆ ತಡೆಯಲು ತಾವು ಹೋಗುವುದರಿಂದ ಸಹಾಯಕವಾಗಬಹುದೇನೋ. ತಾವಿದ್ದುದರಿಂದ ಎದ್ದ ಭುಗಿಲು ತಾವಿರದುದರಿಂದ ತಣ್ಣಗಾಗಬಹುದು. ಎಬ್ಬಿಸಲು ಕಾರಣರಾದ ತಾವು ತಗ್ಗಿಸಲೂ ಯಾಕೆ ಕಾರಣರಾಗಬಾರದು? ಇದು ನಿರಾಶೆಯ ನಿರ್ಧಾರ ಎನ್ನಿಸಬಹುದು. ಆದರೆ ಮಾಡಲು ಏನು ಉಳಿದಿದೆ? ಏನು ಉಳಿದಿದೆ ಎಂದು ಆಲೋಚಿಸಲು ಬೇಕಾದ ಬುದ್ಧಿ–ತಾಳ್ಮೆಗಳೂ ಉಳಿದಿಲ್ಲವಲ್ಲ. ಮಾರನೆಯ ದಿನ ತಾವಾರೂ ಮಹಮನೆಯಲ್ಲಿ ಇಲ್ಲದ ಸುದ್ದಿ ಹಬ್ಬಿದಾಗ ಕಲ್ಯಾಣ ಏನಾಗಬಹುದು; ಶರಣರೊಂದು ಕಡೆ, ಪ್ರಭುತ್ವವೊಂದು ಕಡೆ ಹೇಗೆ ಆಲೋಚಿಸಬಹುದು? ಏನಾಹರಾಗಲಿ, ಕಲ್ಯಾಣದ ಕೊನೆಯ ಕ್ಷಣಗಳಿವು ಎನ್ನಿಸಿ ನಿಟ್ಟುಸಿರುಬಿಟ್ಟರು. ಮತ್ಯಾರೂ ಮಾತಾಡಲಿಲ್ಲ, ನೀಲಕ್ಕ ಸಹ. ವಾದ–ತರ್ಕ ಎಲ್ಲವನ್ನು ಮೀರಿದ ಪರಿಸ್ಥಿತಿ. ತಾವು ಹೇಳುವುದು ಸರಿ ಎಂಬ ಖಚಿತ ಮನಸ್ಸು ಯಾರಿಗೆ ಇಂದು ಇರಲು ಸಾಧ್ಯ?

ತಳಮಳದಿಂದಲೇ ಕ್ಷಣಗಳು ಕಳೆದವು. ಅಪ್ಪಣ್ಣ–ಉತ್ತಣ್ಣ ಎಲ್ಲ ಏರ್ಪಾಟಿನ ಹೊಣೆ ಹೊತ್ತರು. ಅವರೇನು ಮಾಡಿದರೋ, ರಾಜಭಟರೊಡನೆ ಏನು ಸಂಧಾನ ನಡೆಸಿದ್ದರೋ ಅವರ ಹೃದಯದಲ್ಲಿದ್ದುದು ಲೋಕವನ್ನು ಬೆಳಗಿದ ಮನೆಯ ಬೆಳಕಿನ ಕುಡಿಗಳು ಕ್ಷೇಮವಾಗಿರಬೇಕೆಂಬ ಉತ್ಕಟೇಚ್ಛೆ. ಅಷ್ಟನ್ನು ಸಾಧಿಸಲು ಮಾಡಬಹುದಾದ ಯಾವುದೂ ಅಸಮರ್ಥನೀಯವೆನ್ನಿಸಲಿಲ್ಲ ಅವರಿಗೆ.

ಸಿಗದಿಯಾದಂತೆ ರಾತ್ರಿಯ ಎರಡು ಜಾವ ಕಳೆಯಿತು; ಅಥವಾ ತುಂಬ ಪ್ರಯಾಸದಿಂದ ಎಲ್ಲರೂ ಅದನ್ನು ಕಳೆದಿದ್ದರು, ಮನೆಯ ಸೇವಕರೇ ತಮಗೆ ತೋಚಿದಂತೆ ಅನಿವಾರ್ಯವೆನ್ನಿಸುವ ವಸ್ತುಗಳನ್ನು ಗಂಟುಕಟ್ಟಿದರು. ಮೊದಲು ನಾಗಕ್ಕ–ಚೆನ್ನಬಸವಣ್ಣ ಪ್ರಯಾಣ ಬೆಳೆಸಿದರು. ಸದ್ಯಕ್ಕೆ ಪಶ್ಚಿಮ ದಿಕ್ಕಿಗೆ

ಪ್ರಯಾಣವೆಂದು ಅವರು ನಿಗದಿಗೊಳಿಸಿಕೊಂಡಿದ್ದರಂತೆ. ಊರಾವುದೆಂದು ತಿಳಿಯದು. ಅವರನ್ನು ಬೀಳ್ಕೊಡುವುದೆಂದರೆ! ಅಣ್ಣನವರ ಬದುಕಿನ ಮೊದಲ ಕ್ಷಣದಿಂದ ಜೊತೆಯಲ್ಲಿದ್ದವರು ನಾಗಕ್ಕ; ಚೆನ್ನಬಸವಣ್ಣ ಹುಟ್ಟಿದ ಕ್ಷಣದಿಂದ ಅಗಲದಿದ್ದವರು ಬಸವಣ್ಣ. ಈ ತ್ರಿವೇಣಿ ಸಂಗಮದಲ್ಲಿ ಒಂದು ಈಗ ಬೇರೆಡೆ ಗುಪ್ತವಾಗಿ ಹರಿಯತೊಡಗಬೇಕು. ಹರಿದದ್ದು ಕಣ್ಣೀರ ಕೋಡಿ, ಮಾತನಾಡಲೂ ಆಗದ, ಜೀವವನ್ನೆಲ್ಲ ಹಿಂಡುವ ನೋವು. ಎಂಥ ತಪಸ್ಸು ಮಾಡಿದ್ದರೇನು, ಈ ಅಗಲಿಕೆ! ಆದರೆ ಅನಿವಾರ್ಯವಾಗಿತ್ತು. ಬಹುಶಃ ಕೊನೆಯ ಸಲಕ್ಕೆಂದು ಪರಸ್ಪರ ನೋಡಿದರು. ಕಣ್ಣಲ್ಲಿ ಪರಸ್ಪರರನ್ನಿಟ್ಟುಕೊಂಡರು. ಅಗಲಿದರು.

ಮತ್ತೊಂದು ಗಳಿಗೆಯ ನಂತರ ಬಸವಣ್ಣನವರು, ಗಂಗಕ್ಕ–ನೀಲಕ್ಕರು. ಅವರೊಡನೆ ಅಪ್ಪಣ್ಣ. ಪಡಿಹಾರಿ ಉತ್ತಣ್ಣ ನಾಗಕ್ಕ–ಚೆನ್ನಬಸವಣ್ಣನವರ ಡೋಲಿಯನ್ನು ಹಿಂಬಾಲಿಸಿದ್ದು. ನನ್ನ ವಾಮಕ್ಷೇಮ ನಿಮ್ಮದಯ್ಯ ಎಂದು ಅಪ್ಪಣ್ಣನಿಗೇ ಎಲ್ಲ ಬಿಡಲಾಗಿತ್ತು. ಕಲ್ಯಾಣದ ಋಣ ತೀರಿತೇನೋ ಎಂಬ ಭಾವನೆ ಮೂಡಿತು. ಹೊರಡುವಾಗ ತಮ್ಮ ಅಂತರಂಗ–ಬಹಿರಂಗಗಳನ್ನು ತಮಗಿಂತ ಚೆನ್ನಾಗಿ ಬಲ್ಲ ಮಹಮನೆಯನ್ನೊಮ್ಮೆ ಹಿಂದಿರುಗಿ ನೋಡಿ ಕೈ ಜೋಡಿಸಿ ಅಣ್ಣನವರು ಡೋಲಿ ಹತ್ತಿದರು; ಅವರ ಸತಿಯರು ಅವರನ್ನು ಹಿಂಬಾಲಿಸಿದ್ದರು.

ಯಾವ ಕಡೆಯಿಂದ ಬಂದರೋ, ನಿಶ್ಶಬ್ದವೇ ಎಲ್ಲ ಕಡೆ ಆವರಿಸಿತ್ತು. ಕತ್ತಲೆಯ ದಾರಿಯಲ್ಲಿ ಹಾದಿ ಸವೆಯುವಾಗ ಬಸವಣ್ಣನವರಿಗೆ ಕಲ್ಯಾಣದಿಂದ ಹೊರಹೋಗುವ ಈ ಪರಿಸ್ಥಿತಿಯ ಬಗ್ಗೆ ಬೆರಗಾಗಿತ್ತು. ಹಿಂದೆ ಬಾಗೇವಾಡಿಯಿಂದ ಅನಿವಾರ್ಯ ಪರಿಸ್ಥಿತಿಯಲ್ಲಿ ಹೊರಬರಬೇಕಾಯಿತು. ಆಗ ಊರಿನ ಜನ ಕಳಿಸಿದ್ದರು, ಎಲ್ಲರೆದುರಿಗೆ ಯಾರಿಗೂ ಬೇಡವಾಗಿ ಹೊರಬಿದ್ದಿದ್ದರು. ಈಗ ಅಪಾರ ಬೆಂಬಲಿಗರನ್ನು ತೊರೆದು ಯಾರಿಗೂ ತಿಳಿಸದೆ ನಡುರಾತ್ರಿ ಹೋಗುವಂತಾಗಿದೆ! ಆಗ ಆದಷ್ಟು ಬೇಗ ಬಾಗೇವಾಡಿಯಿಂದ ದೂರ ಸಾಗಬೇಕೆಂಬ ಸಿಟ್ಟು ಇತ್ತು; ಈಗ ಕಲ್ಯಾಣವನ್ನು ಬಿಟ್ಟು ಹೊರಡಬೇಕಲ್ಲ ಎಂದು ಭಾರವಾದ ಮನಸ್ಸು.

ಯಾಕೆ ಹೀಗಾಯಿತು? ತಮ್ಮ ಬದುಕು ಅಥವಾ ಎಲ್ಲರ ಬದುಕು ಹೀಗೆಯೋ ಏನೋ! ಎಲ್ಲರ ಎಂದರೆ ಸಾಮಾನ್ಯರ ಬದುಕಲ್ಲ. ಏಕೆಂದರೆ ಅವರ ಬದುಕು ಗಾಳಿಗೆ ಸಿಕ್ಕ ತರಗು; ಪ್ರವಾಹಕ್ಕೆ ಬಿದ್ದ ಎಲೆ, ಕರೆದತ್ತ ಒಯ್ಯುವುದು. ಆದರೆ ಸ್ವಂತ ಬದುಕಿಗೆ ತಮ್ಮದೇ ಆದ ಮಾರ್ಗವೊಂದಿದೆಯೆಂದು ಕಂಡುಕೊಂಡ ಕೆಲವೇ ಜನಗಳ ಬದುಕು ಹೀಗೇ ಪರ್ಯವಸಾನವಾಗಬೇಕೇ? ತಾವು ತಮ್ಮ ಮಣಿಪದಲ್ಲಿ ಸೋತರವೇ? ಸೋಲು, ಗೆಲವು ಎಂದರೇನು. ಮಾಡಿದ ಕೆಲಸಕ್ಕೆ ದೊರಕಿದ ಪ್ರತಿಫಲದ ಮೇಲೆಯೇ ಜಯಾಪಜಯಗಳನ್ನು ನಿರ್ಧರಿಸಬಹುದೇ. ಅದೂ ಸಾವಿರಾರು ಜನಗಳ ಜೊತೆಗೆ ಕೈಕೊಂಡ ಸ್ವಾತಂತ್ರ್ಯಕಾರ್ಯ ಎಲ್ಲರ ಜಯಾಪಜಯಗಳೇ ಅಲ್ಲವೇ. ಹಾಗೆ ನೋಡಿದರೆ ಅಂಥ

ಸಾವಿರಾರು ಜನರಲ್ಲಿ ತಮ್ಮ ಧ್ಯೇಯದ ಬೀಜವನ್ನು ಬಿತ್ತಿ ಅದೆಲ್ಲ ಬೆಳೆದು ಕೊಯಿಲಿಗೆ ಬರುವಂತಾದುದು ಕಡಿಮೆಯ ಸಾಧನೆಯೇ. ಎಷ್ಟು ಜನರ ತ್ಯಾಗ, ಬಲಿದಾನ, ವಿಚಾರಶೀಲತೆ, ಪ್ರಾಮಾಣಿಕತೆಗಳು ಅದಕ್ಕೆ ಸಂದಿವೆ. ಧ್ಯೇಯ ಇಂದು ತಮ್ಮ ಕಣ್ಣೆದುರಲ್ಲಿ ನಿಜವಾಗದೇ ಹೋಗಿರಬಹುದು; ಮುಂದೆಯೂ ಈ ಧ್ಯೇಯವನ್ನು ಉಪಾಸಿಸುವ ಜನ ಬರಲಾರರೇ? ಅಥವಾ ತಾವೇ ತಮ್ಮೊಡನೆ ಬಂದವರಿಗಿಂತ ಬಹುಮುಂದೆ ಹೋಗಿಬಿಟ್ಟರೇ ? ನಾಲ್ಕಾರು ಮಕ್ಕಳನ್ನು ಕೈಹಿಡಿದು ನಡೆಸುವ ಹಿರಿಯ, ಅವೆಲ್ಲ ಒಟ್ಟಿಗೇ ಹಿಂದೆ ಜಗ್ಗಿದರೆ ತಾನೂ ಮುಗ್ಗರಿಸುವಂತಾಗುತ್ತದಲ್ಲ, ಹಾಗಾಯಿತೇ? ಇಂಥ ಕಾರ್ಯದಲ್ಲಿ ಫಲಕ್ಕಿಂತ ಅದರೆಡೆಗೆ ಸಾಗುವಾಗ ಪಡೆದಿದ್ದ ಪ್ರಾಮಾಣಿಕತೆ ಶ್ರದ್ಧೆಗಳೇ ವೈಯಕ್ತಿಕ ಜೀವನಕ್ಕೆ ಸಾರ್ಥಕ್ಯವುಂಟುಮಾಡುವುದಲ್ಲವೇ?

ತಾವೆಲ್ಲಿಗೆ ಹೊರಟಿದ್ದೇವೋ! ಹಾಗೆಯೇ ಈ ಆಲೋಚನೆಗಳಿಗೂ ಕೊನೆಯಿಲ್ಲ; ಅದೆಲ್ಲಿ ಕೊನೆಯಾಗುವುದೋ! ದಾರಿ ಸಾಗಿದಂತೆ, ಕಾಲ ಸರಿದಂತೆ ಮೊದಮೊದಲು ತಾ ಮುಂದು ನಾ ಮುಂದು ಎಂದು ನುಗ್ಗಿಬಂದ ಆಲೋಚನೆಗಳು ನಿಧಾನವಾಗಿ ಹಿಂದೆ ಸರಿಯುತ್ತ ಬಂದವು. ಕತ್ತಲೆ ಗವ್ವೆಂದು ಎಲ್ಲೆಡೆಗೂ ಆವರಿಸಿತ್ತು. ಈ ಕತ್ತಲೆಯಲ್ಲಿ ಒಬ್ಬೊಬ್ಬನೂ ಒಂದೊಂದು ಗೂಡು. ಬಸವಣ್ಣನವರದಾದ ಗೂಡಿನಲ್ಲಿಯೂ ದಟ್ಟಕತ್ತಲೆ. ಆದರೆ ತಮಂಥ ಘನ, ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ. ಕತ್ತಲೆಯೆಂದರೆ ಬರಲಿರುವುದು ಬೆಳಕೆಂದೇ ಇಂಗಿತವಲ್ಲವೇ? ಕತ್ತಲೆಯ ಅವಧಿ ನೀಳವಾಗಿರಬಹುದು, ಆದರೆ ಬೆಳಗಾಗಿಯೇ ಆಗುತ್ತದೆ. ಬೆಳಗಾಗುವ ಹೊತ್ತಿಗೆ ಎಲ್ಲಿರುತ್ತೇವೋ ಎಂಬ ಆಲೋಚನೆಯೊಂದಿಗೆ ಪ್ರಯಾಣ ಮುಂದುವರಿದಿತ್ತು.

'ಧರ್ಮಕಾರಣ' ಬಸವಣ್ಣನನ್ನು ಕುರಿತ ಕಾದಂಬರಿ; ಎಂದರೆ ವಚನ ಚಳುವಳಿಯ ಕತೆಯೂ ಹೌದು.

ನಡೆಯಲಿರುವುದು ಕೇತಗ–ಚಂದಲೆಯರ ಮದುವೆ. ಕೇತಗ ಚಮ್ಮಾರ ಅಳ್ಳಯ್ಯನ ಮಗ; ಚಂದಲೆ ಹಾರುವ ಮಧುವಯ್ಯನ ಮಗಳು. ಕಲ್ಯಾಣ ನಾಡಿನಲ್ಲಿ ಕಂದಾಚಾರದ ಕತ್ತಲೆ. ಮನುಷ್ಯ–ಮನುಷ್ಯರ ನಡುವೆ ನೂರಾರು ವರ್ಷಗಳಿಂದ ಬೆಳೆದು ಬಂದಿರುವ ಜಾತಿಯ ಗೋಡೆಯನ್ನು ಕೆಡವಬಹುದೇ? ಇದಕ್ಕೆ ವಿರೋಧ ಹೊರಗಿನದೋ ಒಳಗಿನದೋ? ಬಸವಾನುಯಾಯಿಗಳು ಬದಲಾವಣೆಗೆ ಹದವಾಗಿರಲಿಲ್ಲವೇ? ಚಾರಿತ್ರಿಕ ಸತ್ಯದ ಹುಡುಕಾಟ.

ಕಲ್ಯಾಣದ ಪಟ್ಟಭದ್ರರದು ಸಂಪ್ರದಾಯ ನಿಷ್ಠ ಬದುಕು; ಕಾಯಕಜೀವಿಗಳದು ಶ್ರಮನಿಷ್ಠೆಯ ಬದುಕು. ಸಂಘರ್ಷದ ಒಳಸುಳಿಗಳು, ಬದಲಾವಣೆ ನಡೆಯಬೇಕಾದರೆ ಉಂಟಾಗುವ ಯಾತನೆಗಳು, ಮನುಷ್ಯ ಮನಸ್ಸಿನ ವ್ಯಾಪಾರಗಳು ಈ ಕಾದಂಬರಿಯ ವಸ್ತು.

ಕನ್ನಡ ನಾಡಿನ ಚರಿತ್ರೆಯಲ್ಲಿ ಹನ್ನೆರಡನೇ ಶತಮಾನದ ವಚನಕಾರರ ಕಾಲಘಟ್ಟ ಒಂದು ಬೆಳಗು. ಆ ಬೆಳಗಿನೊಳಗಿನ ಮಹಾಬೆಳಗು ಬಸವಣ್ಣ. ಈ ಕಾದಂಬರಿ ಬಸವಣ್ಣನ ಜೀವನ ಕತೆಯನ್ನು ಆತನ ನೆನಪಿನ ಮೂಲಕವೇ ಮಂಡಿಸುತ್ತದೆ. ಎಲ್ಲ ರಕ್ತಮಾಂಸವುಳ್ಳ ಮಾನವರಂತಿದ್ದ ಬಸವಣ್ಣನ ಮನಸ್ಸಿನ ತಾಕಲಾಟಗಳು, ವಚನ ಚಳುವಳಿಯ ಶಕ್ತಿ ಹಾಗೂ ಮಿತಿಗಳು ಅತ್ಯಂತ ಪರಿಣಾಮಕಾರಿಯಾಗಿ ಇಲ್ಲಿ ಚಿತ್ರಿತವಾಗಿವೆ.